University of Mysore

ORIENTAL LIBRARY PUBLICATIONS

Kannada Series No. 17

---

ವೀರಭದ್ರ ನೃಪಾಲ ವಿರಚಿತಂ

# ವೀರಭದ್ರ ವಿಜಯಂ

# VĪRABHADRA-VIJAYA

BY

VĪRABHADRANṚIPĀLA

EDITED BY

D. SRINIVASACHAR, M.A.,
[...] of Sanskrit, Maharaja's College, and Curator,
Government Oriental Library,
Mysore

AND

[...]ASAVALINGAYYA, M.A., B.L.,
[...] Curator, Government Oriental Library,
Mysore



MYSORE
PRINTED AT THE GOVERNMENT BRANCH PRESS
1930



Price Rs. 1—4—0

**University of Mysore**

ORIENTAL LIBRARY PUBLICATIONS

Kannada Series No. 17

---

ವೀರಭದ್ರ ನೃಪಾಲ ವಿರಚಿತಂ

# ವೀರಭದ್ರ ವಿಜಯಂ

# VĪRABHADRA-VIJAYA

BY

VĪRABHADRANṚIPĀLA

EDITED BY

D. SRINIVASACHAR, M.A.,
*Professor of Sanskrit, Maharaja's College, and Curator, Government Oriental Library, Mysore*

AND

M. S. BASAVALINGAYYA, M.A., B.L.,
*Assistant Curator, Government Oriental Library, Mysore*

MYSORE
PRINTED AT THE GOVERNMENT BRANCH PRESS
1930

# ಪೀಠಿಕೆ

---

ವೀರಭದ್ರವಿಜಯವೆಂಬೀ ಚಂಪೂಕಾವ್ಯವನ್ನು ರಚಿಸಿದವನು ವೀರಭದ್ರ ನೃಪಾಲನೆಂಬ ಕವಿಯು. ಈತನು ಈಶ್ವರನ ದ್ವಾದಶಲೀಲಾಸ್ವರೂಪನಾದ ವೀರ ಭದ್ರನ ಮಹತ್ತ್ವಪ್ರದರ್ಶನಕ್ಕಾಗಿ ಪ್ರೌಢವಾದೀಕಾವ್ಯವನ್ನು ಬರೆದಿರುವುದರಿಂ ದಲೂ, ಈಗ್ರಂಥದಲ್ಲಿ ಶಿವನಿಗೇ ಸಕಲದೇವೋತ್ಕರ್ಷವನ್ನು ವೇದೋಕ್ತಿಗಳಿಂದ ಸ್ಥಾಪಿಸಿ ಬಣ್ಣಿಸಿರುವುದರಿಂದಲೂ, ಹಂಪೆಯ ಹರೀಶ್ವರ, ಹಲಾಯುಧ, ಮಲ್ಹಣ ಮುಂತಾದ ವೀರಶೈವಕವಿಗಳನ್ನು ಗ್ರಂಥಾರಂಭದಲ್ಲಿ ಬಲಗೊಂಡಿರುವುದರಿಂ ದಲೂ ಮತ್ತು ಈತನ ಪೂರ್ವವಂಶದ ಪರಿಗಣನೆಯಿಂದಲೂ ಈ ಕವಿಯು ವೀರಶೈವ ಮತೀಯನೆಂಬುದರಲ್ಲಿ ಸಂಶಯವೇನೂ ಬರಲಾರದು. ಅಲ್ಲದೆ, ಈಶ್ವರನನ್ನು ವರ್ಣಿಸುವ ಎಡೆಗಳಲ್ಲೆಲ್ಲ ರತ್ನದಲ್ಲಿ ಪ್ರಕಾಶ, ಚಂದ್ರನಲ್ಲಿ ಬೆಳದಿಂಗಳು, ಸೂರ್ಯನಲ್ಲಿ ತೇಜಸ್ಸು ಮತ್ತು ಹೂವಿನಲ್ಲಿ ಮಕರಂದದಂತೆ ಶಿವನಲ್ಲಿ ಶಕ್ತಿ (ಪಾರ್ವತಿ)ಯು ಬೆರೆದಿರುವಳೆಂದು ಶಿವಶಕ್ತಿಯರಿಗೆ ಅವಿನಾಭಾವಸಂಬಂಧವನ್ನು ತೋರಿಸಿ ತಾನು ಶಕ್ತಿವಿಶಿಷ್ಟಾದ್ವೈತಮತಾನುಯಾಯಿಯೆಂಬುದನ್ನು ವ್ಯಕ್ತಪಡಿಸಿಕೊಂಡಿರುತ್ತಾನೆ. ಈತನು ತನ್ನನ್ನು ನೃಪೋತ್ತಮನೆಂದು ವಿಶೇಷಿಸಿಕೊಂಡು, ತನ್ನ ವಂಶಪರಂಪರೆ ಯನ್ನು ಈ ಗ್ರಂಥದ ಪ್ರಥಮಾಶ್ವಾಸದ 35,36,37, ಮತ್ತು 38ನೆಯ ಪದ್ಯಗಳಲ್ಲಿ ಹೀಗೆ ಹೇಳಿಕೊಂಡಿದ್ದಾನೆ :—

ಶ್ರೀಕಂಠವಂಶವಾರಿಧಿರಾಕಾಬ್ಜನಾದ ಚಿಕ್ಕವಿರೂಪಾಕ್ಷ ; ಅವನ ಮಗ ಕಾಮನೃಪ ; ಇವನ ಹೆಂಡತಿ ವೀರಾಂಬಾ ; ಈಕೆಯ ಪುಣ್ಯೋದರಕಮಲಾಕರದ ಲ್ಲೊಗೆದ ರಾಜಹಂಸನೂ, ಪುಣ್ಯಶ್ಲೋಕನೂ, ಶಿವಭಕ್ತಿಯುಕ್ತನೂ ಆದವನು ವಿರೂಪಾಕ್ಷನೃಪ ; ಜಗದೀಶ್ವರನಾದ ಆ ವಿರೂಪಾಕ್ಷ (ಶಿವ)ನಿಂದ ಆ ವೀರ ಭದ್ರನು ಹುಟ್ಟಿ ವಿಬುಧ (ದೇವತೆಗಳಿಂದ)ನುತನಾದಂತೆ, ಈ ವಿರೂಪಾಕ್ಷನೃಪ ನಿಂದ ವೀರಭದ್ರನಾಮಕನಾದ ತಾನು ಹುಟ್ಟಿ, ವಿಬುಧ (ವಿದ್ವಾಂಸರಿಂದ)ನುತ ನಾದನೆಂದು ಚಮತ್ಕಾರವಾಗಿ ವರ್ಣಿಸಿಕೊಂಡಿರುತ್ತಾನೆ.

ನೃಪೋತ್ತಮನೆಂದು ಹೇಳಿಕೊಂಡಿದ್ದರೂ, ಈತನು ಆಳುತ್ತಿದ್ದ ದೇಶದ ವಿಷಯದಲ್ಲಾಗಲಿ, ಕಾಲದ ವಿಷಯದಲ್ಲಾಗಲಿ ಯಾವ ಅಂಶವೂ ಈ ಗ್ರಂಥದಿಂದ

ತಿಳಿಯಬರುವುದಿಲ್ಲ. ಈತನ ತಂದೆಯಾದ ವಿರೂಪಾಕ್ಷನೃಪನು ತಾನು ಬರೆದಿರುವ 'ತ್ರಿಭುವನತಿಲಕ' ವೆಂಬ ಗ್ರಂಥವನ್ನು ಶಕ. ೧೪೪೧ನೆಯ ಪ್ರಮಾಥಿಯಲ್ಲಿ ಅಂದರೆ ಕ್ರಿ. ಶ. 1519 ರಲ್ಲಿ ರಚಿಸಿದಂತೆ ಹೇಳಿಕೊಂಡಿರುತ್ತಾನಾದುದರಿಂದ, ಅವನ ಮಗನಾದ ಈ ಗ್ರಂಥಕರ್ತನು ಸುಮಾರು ಕ್ರಿ. ಶ. 1530 ರಲ್ಲಿ ಇದ್ದಿರಬಹುದೆಂದು ಕವಿಚರಿತ್ರಕಾರರು ಬರೆದಿರುತ್ತಾರೆ. (ಕವಿಚರಿತೆ, Vol. II, Page 217).

ಈತನು ಈ ಗ್ರಂಥವಲ್ಲದೆ ಪಾರ್ವತೀವಲ್ಲಭಶತಕ, ಉಮಾಮಹೇಶ್ವರಶತಕ, ಪ್ರಾಣನಾಥಶತಕ, ಶ್ರೀಕಂಠಸೋಮೇಶ್ವರಶತಕ, ಕಂದಶತಕ ಎಂಬ ಐದು ಶತಕಗಳನ್ನು ಬರೆದಿರುತ್ತಾನೆಂದು ಕಂದಶತಕದ ಕೊನೆಯಲ್ಲಿರುವ,

ಶುಭಮಿಾವ ಪಾರ್ವತೀವ
ಲ್ಲಭಶತಕಮನಿಂದುಮಾಮಹೇಶ್ವರಶತಕಮು ।
ನುಭಯುಕವಿವೀರಭದ್ರ
ಪ್ರಭು ಪೇಳ್ದಂ ಪ್ರಾಣನಾಥಶತಕವನೊಲವಿಂ ॥

ವರಸೋಮೇಶ್ವರಶತಕಮು
ನಿರದಂಬಿಕೆಯುರಸಯೆಂಬ ಕಂದಶತಕಮಂ ।
ಸ್ಮರರೂಪವಿರೂಪಾಕ್ಷನು
ದರಸಂಭವನೆನಿಪ ವೀರಭದ್ರಂ ಪೇಳ್ದಂ ॥

ಎಂಬ ಪದ್ಯಗಳಿಂದ ತಿಳಿಯಬರುತ್ತದೆ. ಈತನು ತನ್ನನ್ನು 'ಉಭಯಕವಿ' 'ಬುಧನುತ' 'ಸತ್ಕವೀಶ್ವರ' ನೆಂದು ವಿಶೇಷಿಸಿಕೊಂಡಿರುವುದರಿಂದ, ಸಂಸ್ಕೃತ ಕರ್ಣಾಟಕಭಾಷೆಗಳೆರಡರಲ್ಲಿಯೂ ಕವಿತಾಶಕ್ತಿಯನ್ನು ಹೊಂದಿ, ತನ್ನ ಕಾಲದಲ್ಲಿದ್ದ ವಿದ್ವಾಂಸರ ಮನ್ನಣೆಗೆ ಪಾತ್ರನಾಗಿದ್ದನೆಂದು ಹೇಳಬಹುದು. ಆದರೂ, ಇವನಿಂದೀಚೆಗೆ ಬಂದ ಕವಿಗಳಾರೂ ಈತನ ಗ್ರಂಥಗಳ ಭಾಗಗಳನ್ನು ಎಲ್ಲಿಯಾದರೂ ಉದಾಹರಿಸಿರುವುದಾಗಲಿ, ಹೊಗಳಿರುವುದಾಗಲಿ ಕಂಡುಬಾರದೇ ಇರುವುದರಿಂದ ಈ ಕವಿಯು ಕ್ರಿ. ಶ. ೧೬ನೆಯ ಶತಮಾನದಲ್ಲಿದ್ದ ಗುಬ್ಬಿಯ ಮಲ್ಲಣಾರ್ಯ, ವಿರಕ್ತತೋಂಟದಾರ್ಯರೇ ಮುಂತಾದ ಕವಿಗಳಷ್ಟು ಸುಪ್ರಸಿದ್ಧನಾಗಲಿಲ್ಲವೆಂದು ತೋರುತ್ತದೆ.

ಗ್ರಂಥಕಾರನು ತನ್ನ ವೀರಭದ್ರವಿಜಯುವೆಂಬೀ ಗ್ರಂಥವು ಕಾವ್ಯ, ಲಕ್ಷಣ, ಅಲಂಕಾರ, ನವರಸ, ರೀತಿಭಾವಗಳಿಂದ ಭರಿತವಾಗಿರುವುದೆಂದೂ, "ಕೂರ್ತ

ಮನದನ್ನಳ ಕೂಟದ ಸೌಖ್ಯ '' ದಂತೆ ಇದರಲ್ಲಿನ ಕವಿತ್ವರಸವು ಓದುವವರಿಗೆ ಸೊಗಸೀವುದೆಂದೂ, ಸಕ್ಕದವೇಸ್ಗ್ಗ, 'ದೇಶೀಯದ ಬೀಡು ' ' ಗಾಡಿ ನೆಲಸಿದ ನಾಡು ' ಎಂದು ಮುಂತಾಗಿಯೂ, ತನ್ನ ಕವಿತಾಚಾತುರಿಯನ್ನು ಹೊಗಳಿ ಕೊಂಡಿರುತ್ತಾನೆ.

ಹೀಗೆ ತಮ್ಮ ಗ್ರಂಥಗಳನ್ನು ತಾವೇ ಹೊಗಳಿಕೊಳ್ಳುವುದು ಕನ್ನಡಕಬ್ಬಿಗರ ಬಾಳಿನ ಚಾಳಿಯಾಗಿ ಬಂದಿರುವುದರಿಂದ, ಇಂತಹ ಹೊಗಳಿಕೆಗೇನೇ ತಲೆದೂಗದೆ, ಅನೇಕಸಂದರ್ಭಗಳಲ್ಲಿ ಒರೆಹಚ್ಚಿ ನೋಡಿದ ಹೊರತು ಕಬ್ಬಿಗನದು ಬರಿಯ್ಯ ಬಡಾಯಿಯ ಕಟ್ಟುಬಣ್ಣವೋ, ಬರ್ಮೆಯ ಹುಟ್ಟುಬಣ್ಣವೋ ಎಂಬುದು ಬಯಲಾ ಗುವುದಿಲ್ಲ.

ಗ್ರಂಥಾರಂಭದಲ್ಲಿ ಕವಿಯು ಈಶ್ವರನನ್ನೂ ಪಾರ್ವತಿಯನ್ನೂ ಸ್ತುತಿಸಿ, ಗುರು ವಂದನೆ ಮಾಡಿ, ವೀರೇಶ, ನಂದೀಶ, ಭೃಂಗೀಶ, ವಿಘ್ನೇಶ, ಷಣ್ಮುಖರನ್ನು ಕ್ರಮವಾಗಿ ಬಲಗೊಂಡು, ಶಿವಭಕ್ತರನ್ನು ವಂದಿಸಿದನಂತರ, ಶಾರದೆಯ ಪ್ರಸನ್ನತೆಯನ್ನು ಬಯಸಿ, ಬಾಣ, ಹರೀಶ್ವರ, ಮಯೂರರ ವಾಕ್ಪ್ರೌಢಿಮೆಯು ತನ್ನ ಗ್ರಂಥದಲ್ಲಿ ನೆಲೆಗೊಂಡಿರುವಂತೆ ಪ್ರಾರ್ಥಿಸಿ, ಕಾಳಿದಾಸ, ಹಲಾಯುಧ, ಭೋಜ, ಮಲ್ಹಣ, ಕೇಶಿರಾಜ, ಉದ್ಭಟ—ಇವರಿಗೆ ನಮಿಸಿ, ' ಪೇಳ್ವೆನೊಲವಿಂ ಬುಧಸೇವ್ಯಮೆನಿಪ್ಪಕಾವ್ಯಮಂ ' ಎಂದು ಹೇಳಿಕೊಂಡಿರುತ್ತಾನೆ. ಬಳಿಕ ದುರ್ಜನ ರನ್ನು ವ್ಯಾಜಸ್ತುತಿಯಿಂದ ನಿರಾಕರಿಸಿ, ಸತ್ಕವಿಗಳ ಕಾವ್ಯಕ್ಕೂ ದುಷ್ಕವಿಗಳ ಕಾವ್ಯಕ್ಕೂ ಇರುವ ವ್ಯತ್ಯಾಸವನ್ನು ತೋರಿಸಿ, ವಿದ್ವಾಂಸರು ಈ ಗ್ರಂಥದಲ್ಲಿ ರಬಹುದಾದ ದೋಷಗಳನ್ನು ತಿದ್ದಿ ಸರಿಪಡಿಸುವಂತೆ ಪ್ರಾರ್ಥಿಸಿಕೊಂಡು, ಜಡ ವಾದ ವೀಣೆಯು ನಾನಾಗೀತಚತುರನಾದ ವೈಣಿಕನ ಕೈಯಿಂದ ನುಡಿಯು ವಂತೆ ತ್ರಿಲೋಕವನ್ನೂ ಚೆಂಡಿನಂತೆ ಆಡಿಸುವ ವಿಶ್ವನಾಥನು ನುಡಿಸಿದಂತೆ ಈ ಗ್ರಂಥವನ್ನು ಬರೆಯುವೆನೆಂದೂ ತನ್ನ ಶಕ್ತಿಯಿಂದಲ್ಲವೆಂದೂ ಹೇಳಿ, ಸ್ವಾಹಂ ಕಾರ ಖಂಡನೆಯನ್ನು ಮಾಡಿಕೊಂಡಿರುತ್ತಾನೆ. ಬಳಿಕ ಈ ಗ್ರಂಥದ ಕಥಾನಾಯ ಕನಾದ ವೀರಭದ್ರನ ಮಹತ್ತ್ವವನ್ನೂ, ತನ್ನ ಕವಿತ್ವದ ಪ್ರೌಢಿಮೆಯನ್ನೂ ವಿವರಿಸಿ, ತನ್ನ ವಂಶಾವಳಿಯನ್ನು ಹೇಳಿಕೊಂಡು, ಕಥಾವರ್ಣನೆಯನ್ನು ಪ್ರಾರಂ ಭಿಸಿರುತ್ತಾನೆ.

ಈ ಗ್ರಂಥದಲ್ಲಿ ಕವಿಗೆ ವರ್ಣನಾವಿಷಯವಾದುದು ಶಿವಪುರಾಣದ ವಾಯು ವೀಯ ಸಂಹಿತೆ, ಲಿಂಗಪುರಾಣಗಳೇ ಮೊದಲಾದ ಪರಮಾರ್ಥವನ್ನುಪದೇಶಿಸುವ ಪುರಾಣಗಳಲ್ಲಿಯೂ, ಭಾರತ, ಭಾಗವತ, ಮುಂತಾದ ನೀತಿಬೋಧಕಗಳಾದ ಇತಿ ಹಾಸಗಳಲ್ಲಿಯೂ ವರ್ಣಿತವಾಗಿರುವ ದಕ್ಷಯಜ್ಞಧ್ವಂಸದ ಕಥೆಯು.

ಡಿತಗಳೆಂಬ ವೃತ್ತಗಳನ್ನು ಮತ್ತು ಕನ್ನಡದಲ್ಲಿ ರೂಢಿಯಲ್ಲಿರುವ ಉತ್ಪಲಮಾಲೆ, ಚಂಪಕಮಾಲೆ, ಮತ್ತೇಭ, ಮಹಾಸ್ರಗ್ಧರಗಳೆಂಬ ವೃತ್ತಗಳನ್ನು ಉಪಯೋಗಿಸಿದ್ದರೂ, ಕಂದಪದ್ಯಗಳನ್ನೇ ಹೆಚ್ಚಾಗಿ ಬರೆದಿರುತ್ತಾನೆ. ಆದರೆ ಕಂದಪದ್ಯಗಳಲ್ಲಿ ನಾಲ್ಕುನಾಲ್ಕು ಮಾತ್ರೆಗಳುಳ್ಳ ಗಣಗಳೂ, ಪದ್ಯಾರ್ಧದ ಕೊನೆಯಲ್ಲಿ ಗುರುವೂ ಇರಬೇಕೆಂಬ ನಿಯಮವನ್ನುಲ್ಲಂಘಿಸಿ ಬರೆದಿರುತ್ತಾನೆ. (ಗಣೋಲ್ಲಂಘನೆಗೆ ಉದಾ :—vii. ಆಶ್ವಾಸ, ಪದ್ಯ :—12, 13, 15, 39, 40, 41, 42, 90 ;ix ಆಶ್ವಾಸ ಪದ್ಯ :—14, 21, 23 ; ಪದ್ಯಾರ್ಧದ ಕೊನೆಯಲ್ಲಿ ಗುರುವಿಲ್ಲದಿರುವುದಕ್ಕೆ ಉದಾ :—i ಆಶ್ವಾಸ, ಪದ್ಯ :—35, 36, 38 ; vii ಆಶ್ವಾಸ, ಪದ್ಯ :—38, 40, 42, 44, 47 ; xii ಆಶ್ವಾಸ, ಪದ್ಯ :—58, 103, 125, 126 ಮುಂತಾದುವು.)

ಮೊದಮೊದಲು ಪದ್ಯಾರ್ಧದ ಕೊನೆಯಲ್ಲಿರುವ ಲಘ್ವಕ್ಷರಗಳಿಗೆ ಬದಲು ಗುರ್ವಕ್ಷರಗಳನ್ನು ಬರೆದೂ, ಗಣನಿಯಮವಿಲ್ಲದಿರುವಕಡೆ ಗಣಗಳನ್ನು ಸರಿಪಡಿಸಿಯೂ, ಕಂದಪದ್ಯಗಳನ್ನೆಲ್ಲ ಛಂದೋನಿಯಮಕ್ಕನುಸಾರವಾಗಿ ಕ್ರಮಪಡಿಸಬೇಕೆಂದು ಪ್ರಯತ್ನಿಸಲಾಯಿತು. ಆದರೆ ಇಂತಹ ಛಂದೋವಿರುದ್ಧವಾದ ಪದ್ಯಗಳು ನೂರಾರು ಕಂಡುಬಂದುದರಿಂದ, ಕವಿಯು ಈ ಪದ್ಯಗಳನ್ನು ಉಚ್ಛೃಂಖಲವೃತ್ತಿಯಿಂದ ಬರೆದಿರ ವನೆಂದು ತಿಳಿದು ಆ ಪ್ರಯತ್ನವನ್ನೇ ಬಿಡಬೇಕಾಯಿತು.

ಈತನು ತನ್ನ ಗ್ರಂಥದಲ್ಲಿ ಆಧುನಿಕರಾದ ಕನ್ನಡಕವಿಗಳಂತೆ ಸುಜಾಣ, ಹಿಮವೆಟ್ಟು, ಕೈವಶ, ಅಳಿವಿಂಡು ಮುಂತಾದ ಅನೇಕ ಅರಿಸಮಾಸಗಳನ್ನು ಉಪಯೋಗಿಸಿದ್ದಾನೆ.

ಗ್ರಂಥಾರಂಭದಲ್ಲಿ ಕವಿಯು ವೀರಭದ್ರನ ವಿಜಯವನ್ನು ಇದರಲ್ಲಿ ವರ್ಣಿಸುವೆನೆಂದು ಮಾಡಿರುವ ಪ್ರತಿಜ್ಞೆಯಿಂದಲೂ, ಈ ಗ್ರಂಥದ ಹೆಸರಿನಿಂದಲೂ, ಇದರಲ್ಲಿ ಮೊದಲಿಂದ ಕೊನೆಯವರೆಗೂ ವೀರಭದ್ರನಿಗೆ ಸಂಬಂಧಪಟ್ಟ ಕಥೆಯನ್ನೇ ವರ್ಣಿಸಿರುವನೆಂದು ಊಹಿಸುವುದು ಎಲ್ಲರಿಗೂ ಸ್ವಾಭಾವಿಕವಾಗಿದೆ. ಆದರೆ ಗ್ರಂಥದ ಅರ್ಧಭಾಗದವರೆಗೂ ಅಂದರೆ ಏಳನೆಯ ಆಶ್ವಾಸದವರೆಗೂ ವೀರಭದ್ರನ ಕಥೆಗೆ ಸಂಬಂಧಪಟ್ಟ ಒಂದು ಶಬ್ದವಾದರೂ ಬರುವುದಿಲ್ಲ. ವೀರಭದ್ರವಿಜಯವು ಎಂತೆನೆ ಎಂದು ಕವಿಯು ಪ್ರಾರಂಭಿಸಿ ಕಾಶೀದೇಶವನ್ನೂ, ಕಾಶೀಪಟ್ಟಣದ ಮಾಹಾತ್ಮ್ಯವನ್ನೂ, ಆ ಪಟ್ಟಣಕ್ಕೆ ನಾಯಕನಾದ ವಿಶ್ವನಾಥನನ್ನೂ ವರ್ಣಿಸಿ, ವಸಂತರ್ತುವಿನ ಪುಷ್ಪಾಪಚಯಜಲಕ್ರೀಡೆಗಳಲ್ಲಿ ಪಾರ್ವತೀಪರಮೇಶ್ವರರ ಲೀಲಾವಿನೋದಗಳನ್ನು ವಿಸ್ತರಿಸಿ, ಗಜಾಸುರಸಂಹಾರವನ್ನು ವರ್ಣಿಸಿರುತ್ತಾನೆ. ಅನಂತರ ಆರನೆಯ ಆಶ್ವಾಸದಲ್ಲಿ ಸ್ಕಾಂದಪುರಾಣದ ಕಾಶಿಕಾಖಂಡದಲ್ಲಿರುವ ಸುರಾಥಾಂಡೇಶ್ವರೋಪಾಖ್ಯಾನವನ್ನು ಬಹುವಿಸ್ತಾರವಾಗಿ ವರ್ಣಿಸಿದ್ದಾನೆ. ಬಳಿಕ ಏಳನೆಯ ಆಶ್ವಾಸ

ದಲ್ಲಿ ಮೊದಲನೆಯ ಅಶ್ವಾಸದಲ್ಲಿಯೇ ವರ್ಣಿಸಬೇಕಾಗಿದ್ದ ವಿಷಯವನ್ನು ಅಂದರೆ, ವೀರಭದ್ರನ ಉತ್ಪತ್ತಿಗೆ ಕಾರಣವಾದ—ಶಿವಸಭೆಯಲ್ಲಿ ದಕ್ಷನು ಈಶ್ವರನಿಂದ ತನಗಾದಂತೆಣಿಸಿದ ಅಪಮಾನವನ್ನು ವರ್ಣಿಸಿರುತ್ತಾನೆ. ಆದುದರಿಂದ ಏಳನೆಯ ಆಶ್ವಾಸದಿಂದಲೇ ನಿಜವಾದ ವೀರಭದ್ರವಿಜಯದ ಗ್ರಂಥವು ಪ್ರಾರಂಭವಾಗುವುದೆಂದು ಹೇಳಬಹುದು. ಹೀಗಾಗಲು ಕವಿಯ ಸಂಕಲ್ಪಕ್ಕೆ ಆಪಾತತಃ ಕುಂದು ಬಂದಂತೆ ತೋರಿಬಂದರೂ, ಪ್ರಥಮಾಶ್ವಾಸದ ಇಪ್ಪತ್ತೇಳನೆಯ ಪದ್ಯದಲ್ಲಿ ಹೇಳಿರುವಂತೆ, ವೀರಭದ್ರನು ಈಶ್ವರನ ದ್ವಾದಶಲೀಲಾಸ್ವರೂಪನೆಂದೇ ಕವಿಯು ಭಾವಿಸಿ ಈ ಗ್ರಂಥವನ್ನು ಬರೆದಿರುವುದರಿಂದ, ಈಶ್ವರನಿಗೆ ಹೇಳುವ ಔತ್ಕೃಷ್ಟ್ಯವೆಲ್ಲವೂ ವೀರಭದ್ರನಿಗೂ ಅನ್ವಯಿಸುವುದೆಂದು ತಿಳಿದು, ಗಜಾಸುರಸಂಹಾರ ಮತ್ತು ಸುರಾಭಾಂಡೇಶ್ವರೋಪಾಖ್ಯಾನಗಳನ್ನು ವರ್ಣಿಸಿರುವನೆಂದು ಸಮಾಧಾನಹೇಳಬಹುದು.

ಈ ಗ್ರಂಥವನ್ನು ಬರೆಯುವಾಗ ಕವಿಯು ಕಥಾಭಾಗಕ್ಕೆ ಅಷ್ಟು ಗಮನವನ್ನು ಕೊಡದೆ, ತನ್ನ ವರ್ಣನಾಕೌಶಲವೊಂದನ್ನು ಮಾತ್ರವೇ ತೋರಿಸಿಕೊಳ್ಳಬೇಕೆಂಬ ಇಚ್ಛೆಯಿಂದ ಬರೆದನೆಂದು ಸಂದೇಹಪಡುವಂತೆ ಈ ಗ್ರಂಥವು ಮಿತಿಮೀರಿದ ಬರಿಯ ವರ್ಣನೆಗಳಿಂದಲೇ ತುಂಬಿ ಹೋಗಿದೆ. ಈತನಿಗೆ ಸ್ವತಂತ್ರವಾಗಿಯೇ ಗ್ರಂಥವನ್ನು ಬರೆಯುವಷ್ಟು ವಿಷಯವರ್ಣನಶಕ್ತಿಯಿದ್ದರೂ, ತನ್ನ ತಂದೆ ವಿರುಪರಾಜ (ವಿರೂಪಾಕ್ಷನೃಪ) ನೆಂಬುವನಿಂದ ರಚಿತವಾದ "ತ್ರಿಭುವನತಿಲಕ" ವೆಂಬ ಸಾಂಗತ್ಯಗ್ರಂಥವನ್ನು ಆದರ್ಶವಾಗಿಟ್ಟುಕೊಂಡು ಬರೆದಂತೆ ತೋರುತ್ತದೆ. ಏಕಂದರೆ, ನಮ್ಮ ದೃಷ್ಟಿಗೆ ಬಿದ್ದಿರುವ ಈ ಗ್ರಂಥದ ಮೂವತ್ತು ನಾಲ್ವತ್ತು ಪದ್ಯಗಳಲ್ಲಿ, 'ತ್ರಿಭುವನತಿಲಕ' ದಲ್ಲಿ ಅನೇಕಕಡೆ ವಿವರಿಸಿರುವ ಭಾವಗಳೇ ಅಲ್ಲದೆ, ಅದೇ ಶೈಲಿಯೂ, ಅದೇ ಪದಗಳೂ, ಅದೇ ಕಥಾಸಂವಿಧಾನಕ್ರಮವೂ ಮತ್ತು ಅದೇ ಗ್ರಂಥಾರಂಭಸಮಾಪ್ತಿಗಳ ರೀತಿಯೂ ಸ್ಪಷ್ಟವಾದ ಹೋಲಿಕೆಗಳಿಂದ ತೋರಿಬರುತ್ತವೆ.

ಈ ಕೆಳಗೆ ಅಂತಹ ಕೆಲವು ಹೋಲಿಕೆಗಳನ್ನು ತೋರಿಸಿದೆ.

| ತ್ರಿಭುವನತಿಲಕ. | ವೀರಭದ್ರವಿಜಯ. |
|---|---|
| (1) ಸಂಧಿ 1. ಸಾಂಗತ್ಯ 11. | ಅಶ್ವಾಸ 1. ಪದ್ಯ 13. |
| ಹಿಂದಭವನನೋಲಿಸಿದರ ಮೂಜಗದೊಳ<br>ಗಿಂದಭವನ ಕೃಪೆವಡೆವರ ।<br>ಮುಂದಭವನ ಮುಟ್ಟಿಪರ ಪಾದಾಬ್ಜಕೆ<br>ವಂದಿಪೆನಾನತಿಮುದದಿಂದೆ ॥ | |

| ತ್ರಿಭುವನತಿಲಕ. | ವೀರಭದ್ರವಿಜಯ. |
|---|---|
| (2) ಸಂಧಿ 1. ಸಾಂಗತ್ಯ 42. | ಆಶ್ವಾಸ 1. ಪದ್ಯ 31. |
| ವರಕರ್ತೃಕರ್ಮಕ್ರಿಯಾಂತಲಿಂಗವಿಭಕ್ತಿ<br>ಗುರುಪಾದಬಂಧ ನೆರೆ ವಿಭೂತಿ ।<br>ನರಸಪ್ರಸಾದಪ್ಪಣ್ಯದಿಂದೆ ಶಂ<br>ಕರ ಭಕ್ತರಂತಪ್ಪುದೀಕಾವ್ಯಂ ॥ | ಗುರುಪದವಿಭಕ್ತಿಯಿಂ ಬಂ<br>ಧುಗಲಿಂಗತ್ರಯದೆ ಸತ್ಕ್ರಿಯಾನ್ವಯ<br>ದಿಂದಂ ।<br>ವರರೀತಿಭಾವದಿಂ ಶಂ<br>ಕರಭಕ್ತರ ತೆರದಿನೆಸೆವುದೀ ಸತ್ಕಾವ್ಯಂ ॥ |
| (3) ಸಂಧಿ 2. ಸಾಂಗತ್ಯ 12. | ಆಶ್ವಾಸ 1. ಪದ್ಯ 50. |
| ಮದಕರಿ ಪುಟ್ಟಿದ ಮಲೆ ದಿವ್ಯರತ್ನ ಪು<br>ಟ್ಟಿದ ಗಿರಿ ಮುತ್ತು ಪುಟ್ಟಿದ ಪೊಳೆ ।<br>ಪುದಿದು ಬಾವನ್ನ ಪುಟ್ಟಿದ ವನವೊಂದಿಲ್ಲ<br>ಚದುರೆ ಕೇಳಾರಾಜ್ಯದಿರವೆಂತೋ ॥ | ರನ್ನಂಪುಟ್ಟಿದ ಗಿರಿ ಮು<br>ತ್ತುನ್ನತಿಯಿಂಪುಟ್ಟಿದಿರ್ಪಪೊಳೆಯೊಲವಿಂಬಾ<br>ವನ್ನಂಪುಟ್ಟಿದಡವಿ ಚೆಂ<br>ಬೊನ್ನುದಯಿಸದಿರ್ಪ ತಾಣವಿಲ್ಲಾನಾ<br>ಡೊಳ್ ॥ |
| (4) ಸಂಧಿ 6. ಸಾಂಗತ್ಯ 16. | ಆಶ್ವಾಸ 3. ಪದ್ಯ 15. |
| ಮುಡಿಗಳೊ ಕಾರ್ಮುಗಿಲೊ ಪೊಳೆವಕ್ಷಿಯೊ<br>ಕುಡಿಮಿಂಚೋ ಕಂಕಣನಿನದವೊ ।<br>ಇಡಿದ ಮೇಘಧ್ವಾನವೊ ಎನಲೆಸೆದರು<br>ಮಡದಿಯರ್ ಮಳೆಗಾಲವೆಂಬಂತೆ ॥ | |
| (5) ಸಂಧಿ 6. ಸಾಂಗತ್ಯ 30,31. | ಆಶ್ವಾಸ 6. ಪದ್ಯ 89,90. |
| ಸಾಳಂಗನಾಟ ಭೈರವಿ ಗುರ್ಜ್ಜರಿ<br>ಮಾಳವಿಯಾ ಹರಿಕಾಂಭೋಧಿ ।<br>ಗೌಳವರಾಳಿ ವಸಂತಭೈರವಿ ಹ<br>ದುಳವನವನೊಲ್ದು ಪಾಡಿದಾ ॥<br>ಗತಿಗಹಗಹಿಕೆ ಗಮಕ ಜೋಕೆ<br>ಜತೆಕೊಂಕು ಜಾಯಿ ನೊಳ್ಪನು ಜಾಯಿ ।<br>ಯತಿ ಸೊಂಪಾಹತ ವಹಣಿ ಕಳಸ ಕಂ<br>ಪಿತಮುಣ್ಮೆ ಪಾಡಿದನವನೊಲ್ದು ॥ | ಮಾಳವಿಯಾ ಹರಿಭೈರವಿ<br>ಸಾಳಂಗಂ ನಾಟ ದೇಶಿಗುರ್ಜ್ಜರಿಯಾ ಹಿಂ ।<br>ದೋಳಂ ವಸಂತಭೈರವಿ<br>ಗೌಳಮನಾಪೀಣೆಯಲ್ಲಿ ಮುನಿ ಬಾಜಿ<br>ಸಿದಂ ॥<br>ಗತಿ ಗಹಗಹಿಸಲ್ ಕಳಸೋ<br>ನ್ನತಿ ಗಮಕಂ ವಹಣಿಕೊಂಕು ಬಾಯ್ನನು<br>ಣ್ಪನು ಜಾಯ್ ।<br>ಜತಿನೇವಣಿ ಮಿಗೆ ಸೊಂಪಾ<br>ಹತಕಂಪಿತಮುಣ್ಮೆ ಪಾಡಿದಂ ವರನಿ<br>ಋಷಭಂ ॥ |
| (6) ಸಂಧಿ 15. ಸಾಂಗತ್ಯ 37 | ಆಶ್ವಾಸ 3. ಪದ್ಯ 63. |
| ಭಾವಕಿಯರು ಲೀಲೆ ಮಿಗೆ ಚಿತ್ರಯಂತ್ರದೆ<br>ಬಾವನ್ನ ಪೊರೆದ ಜಲವ ತುಂಬಿ ।<br>ಭೂವರನಂಗಕೆ ಸೂಸಲೊಪ್ಪಿದ ಕುಳಿ<br>ರಾವರಿಸಿದ ಭೂಧರನಂತೆ ॥ | ಬಾವನ್ನದ ರಸಮಂ ಬೆ<br>ಳ್ದಾವರೆಯೆಸಳಿಂದೆ ತೆಗೆದು ಸೂಸಿದ<br>ಪದದೊ ।<br>ಳ್ಬಾವಜಹರನೆಸೆದಂ ಕುಳಿ<br>ರಾವರಿಸಿದ ಪರ್ವತಂಬೊಲುರೆ ರಂಜಿಸುತಂ॥ |

| ತ್ರಿಭುವನತಿಲಕ. | ವೀರಭದ್ರವಿಜಯ. |
|---|---|
| (7) ಸಂಧಿ 15. ಸಾಂಗತ್ಯ 18. | ಆಶ್ವಾಸ 4. ಪದ್ಯ 5. |
| ಮೃಗವೆಲ್ಲ ಕೃಷ್ಣಮೃಗಗಳೆನೆ ನದಿಯೆಲ್ಲ<br>ಜಗುನೆಯೆಂದೆನೆ ಪಕ್ಷಿಗಣವೆಲ್ಲಾ ।<br>ಮಿಗೆ ಕೋಕಿಲವ್ರಜವೆನೆ ಗಿರಿತತಿ ನೀಲ<br>ನಗವೆನೆ ಮರ್ಬು ಪರ್ಬಿದುದಾಗ ॥ | ಮೃಗವೆಲ್ಲಂ ಕೃಷ್ಣಮೃಗಂ<br>ಖಗವೆಲ್ಲಂ ಕೋಕಿಳವೆನೆ ನಾಗವು ಡೆಲ್ಲಂ।<br>ಮಿಗೆ ನೀಳಾಚಳವೆಂಬ<br>ನ್ನೆಗವೆಸೆದುವು ಬಿಸಿಲಪೇಗೆಗುರೆ ಕುಂ<br>ದುತ್ತುಂ ॥ |
| (8) ಸಂಧಿ 18. ಸಾಂಗತ್ಯ 11. | ಆಶ್ವಾಸ 11. ಪದ್ಯ 21. |
| ನಡೆದು ದುಃಕುಂಭಸಂಭವನ ಮೇಲೇಳ್ತರ್ಪ<br>ಕಡಲಂತೆ ಸುರರಾಜನಡೆಗೆಯ್ದ ।<br>ಕಡುಪಿಂಡೆ ನಗಗಳೇಳ್ತರ್ಪಂತೆ ನಂಬಯು<br>ಪಡೆ ಕಲ ಕಾಮದೇವನಮೇಲೆ ॥ | |
| (9) ಸಂಧಿ 25. ಸಾಂಗತ್ಯ 2. | ಆಶ್ವಾಸ 1. ಪದ್ಯ 34. |
| ಕವಿಗಳ ಕೈಗನ್ನಡಿ ಕೇಳ್ವರಸಿಕರ<br>ಕವಿಗವುರ್ದುಣಿಸಗಲ್ದನಿಯರಾ ।<br>ಜವಳಿಗೊಳಿಪ ಮೋಹನಮಂತ್ರ ಸಿನ್ನಯ<br>ನವಿನುಡಿ ಹೊನ್ನೊರೆ ವಿರುಪೇಂದ್ರಾ ॥ | ಇದು ಕವಿಗಳ ಕರ್ಣಾಮೃತ<br>ವಿದು ರಸಿಕರಸಾಯನಂ ಬಳಿಕ್ಕಗಲ್ದೋಪ।<br>ರ್ಗಿದು ಜವಳಿಗೊಳಿಪ ಮಂತ್ರದ<br>ನದನಂ ತಾನೆನಿಸುತಿರ್ಪುದೀ ಸತ್ಕಾವ್ಯಂ ॥ |
| (10) ಸಂಧಿ 27. ಸಾಂಗತ್ಯ 6. | ಆಶ್ವಾಸ 1. ಪದ್ಯ 33. |
| ಲಕ್ಕಣದಾಡುಂಬೊಲ ದೇಶೀಯದ<br>ಪಕ್ಕ ಸದ್ಭಾವದ ತವರ್ಮನೆ ।<br>ಸಕ್ಕದದಾವಾಸವಾದುದು ಶಿವಭಕ್ತಿ<br>ಯಿಕ್ಕೆಯೆನಿಸಿ ನೃಪತಿಕಬ್ಬಾ ॥ | ಇದು ಲಕ್ಕಣದಾಡುಂಬೊಲ<br>ಸಿದು ಸಕ್ಕದದೇಳ್ಗೆಗಾಡಿ ನೆಲಸಿದ ನಾಡಿಂ।<br>ತಿದು ದೇಶೀಯದ ಬೀಡೆನಿ<br>ಪ್ಪುದು ನವರಸಭರಿತನವ್ಯಕಾವ್ಯಂ ದಿವ್ಯ. ॥ |
| (11) ಪ್ರತಿಯೊಂದು ಸಂಧಿಯ ಕೊನೆಯ ಸಾಂಗತ್ಯ. | ಪ್ರತಿಯೊಂದು ಆಶ್ವಾಸದ ಕೊನೆಯ ಪದ್ಯಂ |
| ಗಿರಿಜೆಯ ಮೆಯ್ಗುಂಪಿಗೆರಗುವ ತುಂಬೆಯಿಂ<br>ಚರವಶ್ವತರಗಾನರಸದೊಳು ।<br>ಬೆರೆದು ಕಿವಿಗೆ ರಂಜಿಸಿ ತಲೆಯೊಲೆವ ಶಂ<br>ಕರ ಶಾಂತಮಲ್ಲಿಕಾರ್ಜುನ ಜಯ ॥ | ಗಿರಿಯ ಮಗಳ ಮುಡಿಯೊಳವುರ್ದ ಸುರ<br>ರಾಜಪ್ರಸೂನದೊಳ್<br>.. .. .. .. ..<br>.. .. .. ..<br>.. .. .. .. |

ಅಲ್ಲದೆ, ಶಿವಪುರಾಣದ ವಾಯವೀಯಸಂಹಿತೆಯ ಕೆಲವು ಶ್ಲೋಕಗಳಲ್ಲಿರುವ ಭಾವಗಳನ್ನೂ ಸಹ ಈತನು ಕನ್ನಡಿಸಿರುವಂತೆ ಈ ಕೆಳಗಣ ಹೋಲಿಕೆಯಿಂದ ತೋರುತ್ತದೆ.

| ಶಿವಪುರಾಣ. ವಾ. ಸಂ. | ವೀರಭದ್ರ ವಿಜಯ. |
|---|---|
| (1) ಅಧ್ಯಾಯ 18. ಶ್ಲೋ॥ 47.<br>ವಿದ್ಯಾಚೌರೋ ಗುರುದ್ರೋಹೀ ವೇದೇಶ್ವರ ವಿದೂಷಕಃ । | ಆಶ್ವಾಸ 7. ಪದ್ಯ 92. |
| (2) ಅಧ್ಯಾಯ 18. ಶ್ಲೋ॥ 10.<br>ಅಪ್ರಪೂಜ್ಯೇಚೈವಪೂಜಾ ಪೂಜ್ಯಾನಾಂ ಚಾಪ್ಯಪೂಜನೆ । | ಆಶ್ವಾಸ 10. ಪದ್ಯ 11. |
| (3) ಅಧ್ಯಾಯ 18. ಶ್ಲೋ॥ 21.<br>ತದಾ ಚಾಮರಯೋರ್ಮಧ್ಯೆದೇವ್ಯಾ ವದನ ಮಾಬಭೌ ।<br>ಅನ್ಯೋನ್ಯಂ ಯುಧ್ಯತೋರ್ಮಧ್ಯೆ ಹಂಸ ಯೋರಿವಪಂಕಜಂ | ಆಶ್ವಾಸ 12. ಪದ್ಯ 11. |
| (4) ಅಧ್ಯಾಯ 18. ಶ್ಲೋ॥23.<br>ಶಚ್ಛತ್ರಮುಜ್ಜ್ವಲಂ ದೇವ್ಯಾ ರುರುಚೆ ವದ ನೋಪರಿ ।<br>ಉಪರ್ಯಮೃತಭಾಂಡಸ್ಯ ಮಂಡಲಂ ಶಶಿನೋ ಯಥಾ ॥ | ಆಶ್ವಾಸ 12. ಪದ್ಯ 10. |

ಮೇಲೆ ತೋರಿಸಿರುವಂತೆ 'ತ್ರಿಭುವನತಿಲಕ' ದ ಅನೇಕ ಭಾಗಗಳನ್ನೂ ಪದಗಳನ್ನೂ ಈತನು ಉಪಯೋಗಿಸಿಕೊಂಡಿರುವುದು "ನನು ಪುತ್ರಃ ಪಿತ್ರ್ಯ ಮರ್ಹತಿ" ಎಂಬ ನ್ಯಾಯದಂತೆ, ತಂದೆಯ ಆಸ್ತಿಗೆ ಮಗನು ಹಕ್ಕುದಾರನೆಂಬ ಭಾವದಿಂದಲೋ ಅಥವಾ ತಂದೆಯು ಬರೆದ ಗ್ರಂಥವು ಅದುವರೆಗೂ ಪ್ರಕಟನೆಗೆ ಬಾರದೇ ಇದ್ದುದರಿಂದಲೋ ಇರಬೇಕು. ಆದರೂ ವರ್ಣನಾಭಾಗದಲ್ಲಿ ಅನೇಕ ಪದ್ಯಗಳನ್ನು ಸ್ವಂತಪ್ರತಿಭಾಶಕ್ತಿಯಿಂದಲೇ ಬರೆದಿರುವನೆಂದು ಧಾರಾಳವಾಗಿ ಹೇಳಬಹುದು.

ತನ್ನ ಗ್ರಂಥವು 'ನವರಸಭರಿತನವ್ಯಕಾವ್ಯಂ' ಎಂದು ಹೇಳಿಕೊಂಡಿರು ವಂತೆ, ಈತನು ಸಂದರ್ಭೋಚಿತವಾಗಿ ಇತರ ರಸಗಳನ್ನು ವರ್ಣಿಸಿದ್ದರೂ, ಶೃಂಗಾರರಸಕ್ಕೇನೇ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟಂತೆ ತೋರುತ್ತದೆ. ಆರನೆಯ ಆಶ್ವಾಸದಲ್ಲಿ ಸುರಾಭಾಂಡೇಶ್ವರೋಪಾಖ್ಯಾನದ ವರ್ಣನೆಯಲ್ಲಂತೂ ಔಚಿತ್ಯದ ಎಲ್ಲೆಯನ್ನೂ ಸಹ ಮೀರಿ ಶೃಂಗಾರವರ್ಣನೆಯನ್ನು ಮಾಡಿದ್ದಾನೆ. ಅಲ್ಲದೆ, ಪ್ರತಿಯೊಂದು ಆಶ್ವಾಸದ ಆದ್ಯಂತಮಂಗಳಪದ್ಯಗಳಲ್ಲಿಯೂ ಶೃಂಗಾರ ರಸದ್ಯೋತಕವಾದ ಭಾವಗಳನ್ನು ತಪ್ಪದೆ ತುಂಬಿದ್ದಾನೆ.

ಈ ಲೈಬ್ರೆರಿಯಲ್ಲಿ ಈ ಗ್ರಂಥಶೋಧನೆಗೆ ಆಧಾರವಾದ ಕೈಬರೆಹದ ಪ್ರತಿಯು ಒಂದು ಮಾತ್ರವೇ ಇದ್ದಿತು. ಆದರಲ್ಲೂ ನೂರಾರು ಪದ್ಯಗಳಲ್ಲಿ ಲೇಖಕರ ಅಜ್ಞತೆಯಿಂದುಂಟಾದ ವರ್ಣಭಂಗ, ಪಾದಭಂಗ, ಪದಭಂಗ ಮತ್ತು ಛಂದೋಭಂಗವೇ ಮುಂತಾದ ಅನೇಕದೋಷಗಳು ಕಂಡುಬಂದರೂ, ಪ್ರತ್ಯಂತರವನ್ನು ಎಲ್ಲಿಯಾದರೂ ಸಂಪಾದಿಸಬಹುದೆಂಬ ನಂಬುಗೆಯಿಂದ ಈ ಗ್ರಂಥವನ್ನು ಶೋಧಿಸಿ ಮುದ್ರಿಸಲು ಪ್ರಾರಂಭಿಸಿದ್ದಾಯಿತು. ಆದರೆ ಅನೇಕ ಕಡೆ ವಿಚಾರಿಸಿದರೂ, ಬೇರೆ ಪ್ರತಿಯಾವುದೂ ದೊರೆಯದೇ ಇದ್ದುದರಿಂದ ಲೈಬ್ರೆರಿಯ ಏಕಮಾತ್ರಪ್ರತಿಯನ್ನೇ ಶರಣುಹೊಕ್ಕು, ಆದರಲ್ಲಿದ್ದ ತಪ್ಪುಗಳನ್ನು ಯಥಾಮತಿಯಾಗಿ ತಿದ್ದಿ, ಹಾಗೆ ತಿದ್ದಿದ ಪಾಠಗಳನ್ನು ಮೇಲೆ ಬರೆದೂ, ಅವುಗಳಿಗೆ ಪ್ರತಿಯಾಗಿಯೂ, ಅರ್ಥವಾಗದೆಯೂ ದೋಷಯುಕ್ತವಾಗಿಯೂ, ಅಸಮಂಜಸವಾಗಿಯೂ ಕಂಡುಬಂದ ಮಾತೃಕೆಯಲ್ಲಿನ ಪಾಠಗಳನ್ನು ಆಯಾಯ ಪುಟದ ಕೆಳಗೆ ಬರೆದೂ ತೋರಿಸಲಾಗಿದೆ. ಅಬದ್ಧಮಯವೂ, ಅನೇಕ ಕಡೆ ಗ್ರಂಥಲೋಪವುಳ್ಳುದೂ ಆದ ಒಂದು ಪ್ರತಿಯ ಸಹಾಯದಿಂದಲೇ ಪುಸ್ತಕವನ್ನು ಮುದ್ರಿಸುವುದು ಎಷ್ಟು ಶ್ರಮಸಾಧ್ಯವೆಂಬುದನ್ನರಿತ ಸಹೃದಯರಾದ ಪಾಠಕರು ಈ ಗ್ರಂಥದ ಶೋಧನೆಯಲ್ಲಿಯೂ ಮುದ್ರಣದಲ್ಲಿಯೂ ಪ್ರಮಾದದಿಂದಾಗಿರಬಹುದಾದ ತಪ್ಪುಗಳನ್ನು ತಿದ್ದಿಕೊಳ್ಳಬೇಕಾಗಿ ಕೋರುವ,

ಎಂ. ಎಸ್. ಬಸವಲಿಂಗಯ್ಯ,
*Assistant Curator,*
*Oriental Library.*

# ಆಶ್ವಾಸವಿಷಯಸೂಚಿ

ಪುಟ

# ಶೋಧನಪತ್ರಿಕೆ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 1 | 8 | ಸಂತಸದಿಂದ | ಸಂತಸದಿಂದೆ |
| 2 | 9 | ಸುರಕೆ | ಸುರರ |
| ,, | 13 | ಬೇಪ ಸಂ | ಬೇವಸಂ |
| 2 | 15 | ತಿದುರ್ಗರಿಂ | ತಿದುರ್ಗದರಿಂ |
| ,, | 18 | ಕಣ್ಣಭನವ | ಕಣ್ಣಭವ |
| 3 | 21 | ಗದೇ | ಗದೇಂ |
| 4 | 18 | ಫೆಣಿ | ಫಣಿ |
| 5 | 18 | ಯೋಳ್ | ಯೊಳ್ |
| ,, | 20 | ಸತ್ಕೃತಿಯುತಾನ್ವಯದಿಂ | ಸತ್ಕ್ರಿಯಾನ್ವಯದಿಂಪ |
| 7 | 19 | ಮೇಳನದಿ | ಮೇಳದಿ |
| 9 | 12 | ಗಿರಿಮ | ಗಿರಿಮು |
| 11 | 22 | ದೇವತೆಯರೊ | ದೇವಿಯರೊ |
| 12 | 17 | ಉತ್ಸಾಹವೃತ್ತ | ಉತ್ಸಾಹವೃತ್ತ॥ |
| 14 | 8 | ಬಣ್ಣಿಪಂ | ಬಣ್ಣಿಪಂ |
| 18 | 13 | ಮಿನಗುವ | ಮಿನುಗುವ |
| 19 | 8 | ವಲ್ಲದೆಯುಂ | ಮಲ್ಲದೆಯುಂ |
| ,, | 18 | ಚಳಿಸವ | ಚಳಿಸುವ |
| ,, | ,, | ಮುಗಿಲಲ್ಲಿ | ಮುಗಿಲಲ್ಲಿ |
| 21 | 3 | ಕೆಲಸವುಂ | ಘನತೆಯುಂ |
| ,, | 22 | ಧೀಶರ | ಧೀಶ್ವರ |
| 26 | 24 | ನ್ಯೆದೆನಿಪ್ಪಿಂದ್ರಿಯ | ನ್ಯೆದೆನಿಪಿಂದ್ರಿಯ |
| 28 | 19 | ಕುಂದದಿರ್ಪ | ಕುಂದುತಿರ್ಪ |
| ,, | 22 | ಸತತಂ | ಸಂತತಂ |
| ,, | ,, | ಳಾಉದ್ಯಾನ | ಳಾವುದ್ಯಾನ |
| 29 | 1 | ಕಾವಗೆಂದು | ಕಾವಂಗೆಂದು |
| ,, | 10 | ವ್ಮರಲೆಸೆ | ವ್ಮಲರೆಸೆ. |
| ,, | 12 | ಳಾಉಪ | ಳಾವುಪ |
| 30 | 24 | ತಿಟಿವ | ತಿಱುವ |

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 32 | 1 | ಪಟ್ಟಿದ | ಪುಟ್ಟಿದ |
| 34 | 6 | ನ್ಮೃಗ | ಲ್ಮೃಗ |
| ,, | 9 | ಸೂಸಿ | ಸೂಸೆ |
| 38 | 8 | ವಲಯುವ | ವಲಯುಂ |
| 40 | 17 | ಆನೆಯು | ಆನೆಯು |
| 44 | 8 | ಲೆಂಗು | ಲೆಂದು |
| ,, | 16 | ನೋರ್ವನೋ | ನೊರ್ವನೇ |
| ,, | 21 | ದರಸತ್ತ್ರ | ದರಸುತ್ತ್ರ |
| 49 | 5 | ಕಾರಕಾ | ಕರಕಾ |
| ,, | 6 | ಫಲತ | ಫಲಿತ |
| 52 | 1 | ಳ್ಮಾಡಿದ | ಳ್ಮಾಡಿದನಾ |
| ,, | 12 | ಮಂದಾರಿಯು | ಮಾರಾರಿಯು(?) |
| 53 | 8 | ಳ್ಸಿತ | ಳ್ಕಿತಿ |
| ,, | 25 | ಮುಷ್ಠಾ | ಮುಷ್ಠೀ |
| 59 | 15 | ಶಿರಚ್ಛೇದ | ಶಿರಶ್ಛೇದ |
| 61 | 10 | ಮರಂ | ಮವರಂ |
| 63 | 8 | ಪೆುಯ್ಗ್ಗಿಂಪಿ | ಪೆುಯ್ಗ್ಗಿಂಪಿ |
| 66 | 1 | ನಿದಾಘೇಂದ್ರ | ನಿದಾಘೇಂದ್ರ |
| 67 | 13 | ಳೀಳೆ | ಳೀಳ್ಗೆ |
| ,, | 1 | ಚರಿಸ | ಚರಿಸು |
| 72 | 12 | ಗೇಣ್ಗೆಯೆತಾಕಾ | ಗೇಣ್ಗೆರವುಕಾ |
| 73 | 8 | ನಚ್ಚರಿಯೋ | ನಚ್ಚರಿಯೋ |
| ,, | 21 | ಳೂರ್ವಸಿಯೊ | ಳೂರ್ವಸಿಯೋ |
| 75 | 23 | ಬೆಮರ್ವನಿ | ಬೆಮರ್ನೀರ್ವನಿ |
| 76 | 13 | ಕಾತುರ | ಕಾತರ |
| 77 | 7 | ತಾವ್ | ತಾಂ |
| 78 | 26 | ಸನ್ಯಾಸಿ | ಸಂನ್ಯಾಸಿ |
| 79 | 14 | ತ್ರಿವಳೆ | ತ್ರಿವಳ್ಗೆ |
| ,, | 21 | ರ್ವಿನಿಂ | ರ್ವಿನಂ |
| 81 | 25 | ಯಾದರಸ್ಮಿತಂ | ಮಂದ ದರಸ್ಮಿತಂ |

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 82 | 5 | ನಾರ್ದೆಸು | ನಾರ್ದಿಸು |
| ,, | 20 | ಎದ | ಪಾದ |
| 86 | 12 | ಳೆಯ್ಡ | ಳ್ಗೆಯ್ಧ |
| ,, | 26 | ಲಸದ್ಗಣಿ | ಲಸದ್ಗುಣಿ |
| 87 | 21 | ವರ್ಪ | ಬರ್ಪ |
| 89 | 1 | ಲೊಲ್ಟ | ಲೊಲ್ದ |
| 90 | 21 | ತಿರ್ಪ | ತ್ರಿರ್ಪ |
| 91 | 6 | ದಯುದಯು | ದಯು |
| 92 | 7 | ಯುಪ್ಪಪಡಿ | ಯುಪ್ಪವಡಿ |
| 93 | 10 | ಜ್ವಲಿಸುತ | ಜ್ವಲಿಸುವ |
| 94 | 17 | ಪೊತ್ತ್ರಕೋ | ಪೊತ್ತ್ರತೋ |
| 94 | 18 | ಸಿತೆ | ಸಿತ |
| 95 | 6 | ಸಭೆಯೋಳ್ | ಸಭೆಯೊಳ್ |
| 96 | 11 | ಸಪ್ರೋನ್ನತಿಶೀರ್ಷರ್ನವ | ಸಪ್ರೋನ್ನತಶೀರ್ಷನ ನವ |
| ,, | 17 | ನಿದಾನ | ನಿಧಾನ |
| 97 | 20 | ರಂಜಿಸಿತ್ರ | ರಂಜಿಸಿತ್ತು |
| ,, | 26 | ಸ್ತ್ರವ | ಸ್ತುವ |
| 98 | 1 | ರಂನ | ರನ್ನ |
| ,, | 1 | ಪಟ್ಟಣಿಂ | ಪಟ್ಟವಣಿಂ |
| ,, | 26 | ಪೊರವಟ್ಟು | ಪೊಡವಟ್ಟು |
| 99 | 8 | ದಿಂಗಣಂ | ದಿಂಗಳಂ |
| 100 | 12 | ಪಿಡಿದ | ಪಿಡಿಯ |
| ,, | 10 | ನೆನಿಸವ | ನೆನಿಸುವ |
| 102 | 10 | ಮುರುಂಟಿದನಿಕರ | ಮುರುಂಟಿದಮರನಿಕರ |
| 105 | 25 | ಸಂಬಧ | ಸಂಬಂಧ |
| 107 | 6 | ಳನೆಕ | ಳನೇಕ |
| ,, | 16 | ಪೆಡೆ | ಪಡೆ |
| , | 19 | ಮೋಘಾಮದನ | ಮೋಘಾಗಮದ ನ |
| 108 | 6 | ಗಿರಿದಾಗ | ಗಿಂದಾಗ |

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 109 | 2 | ಸಂತೋೕಕಷುಜಂ | ಸಂತೋೕಷಕುಜಂ |
| 110 | 13 | ಚ್ಛೇದನಕುದಿಸಿದ | ಚ್ಛೇದಕುದಿಸಿದ |
| ,, | 22 | ದೊಕ್ಕವು | ದೊಕ್ಕುವು |
| 111 | 20 | ವೀರದ್ರ | ವೀರಭದ್ರ |
| 114 | 6 | ದೊಳಂ | ಡೊಳುಂ |
| 115 | 18 | ಮೂರ್ಧ್ನಾ | ಮೂರ್ಧಾ |
| 122 | 2 | ರನ್ನದೋಲ | ರನ್ನದೊಲೆ |
| 123 | 13 | ಘೂಷಣ | ಘೂಷಮ |
| ,, | 23 | ಸೌಖ್ಯ | ಸಾಮ್ಯ |
| 124 | 13 | ಮಂಗ ಪದ | ಮಂಗಳಪದ |
| 125 | 4 | ನಿವನೆಂ | ಳಿವಳೆಂ |
| 126 | 3 | ವೋೕರ್ಲಂಜಿಸಿ | ವೋೕಲ್ರಂಜಿಸಿ |
| ,, | 6 | ಬರೆದಿರ್ದಂದಲ್ಲ | ನೆರೆ ಪೀರ್ದಂದಲ್ಲಿ; |
| ,, | 22 | ಳ್ಗರಿವಿಂದಾ | ಳ್ಗರವಿಂದಾ |
| 127 | 10 | ಘೂತಿಯ | ಘೂತಿಯ |
| ,, | 6 | ಗಳ | ಗಳಿ |
| ,, | 16 | ಸಕಲಾ | ಸುಕಲಾ |
| 128 | 17 | ನಿಟ್ಟಿಸ | ನಿಟ್ಟಿಸಿ |
| 129 | 25 | ಗಾಡಿಯಂ | ಗಿಂಡಿಯಂ |
| 132 | 5 | ಪಶಪತಿ | ಪಶುಪತಿ |
| ,, | 17 | ಪಗಲೋೕಳ್ | ಪಗಲೊಳ್ |
| 136 | 9 | ಮುಖಮದ | ಮುಖಮದು |
| ,, | 17 | ದು ಕದಂಬಂ | ಧು ಕದಂಬಂ |
| ,, | 20 | ಚಿತೆಯ | ಬೆತೆಯ |
| ,, | 26 | ಜರಚು | ಜರೆಚು |
| ,, | ,, | ಕೊಲಿಗೆಂ | ಕೊರೆಗೇಂ |
| ,, | ,, | ಡುಟ್ಟಿ | ದುಟ್ಟು |
| 137 | 19 | ಚಿದ್ರ | ಚಿತ್ರ |
| 138 | 18 | ದೆನಗೊ | ದೆವಗೊ |
| 140 | 20 | ಭೊಂಕನೆ | ಭೋಂಕನೆ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 141 | 22 | ಗರ್ಗಳಂ | ಗರ್ಗಳುಂ |
| ,, | ,, | ಕಾಮುಂಡಿ | ಚಾಮುಂಡಿ |
| 142 | 2 | ಳನ್ನತಿಕೆ | ಳುನ್ನತಿಕೆ |
| ,, | 6 | ಯಾರ್ಧಟ | ಯಾರ್ಬಟೆ |
| 143 | 18 | ಧೂಮಿ | ಧೂಮಿ |
| 145 | 16 | ರೀರ್ವ | ರಿರ್ವ |
| 148 | 23 | ನಿದಾನಂ | ನಿಧಾನಂ |
| 150 | 18 | ನಿದಾನವೋ | ನಿನಾದವೋ |
| 152 | 15 | ಇರಿ ಇರಿ | ಇರಿಯಿರಿ |
| ,, | 18 | ತ್ತರದರಿ | ತ್ತರಿದರಿ |
| 153 | 1 | ನಿಮ್ಮಯಾ | ನಿಮ್ಮನಿಮ್ಮಯಾ |
| 155 | 2 | ಯುಟ್ಟೆ | ಯುಬ್ಬೆ |
| ,, | 8 | ಕೆಡೆಪಿ | ಕೆಡಪಿ |
| ,, | 15 | ತೆಂದೆಂದೊಡೆ | ದಂತೆಂದೊಡೆ |
| 159 | 17 | ಪೊರೆದಿಪುದು | ಪೊರೆದಿರ್ಪುದು |
| 171 | 22 | ವಾಸೆವಂ | ವಾಸವಂ |
| 178 | 8 | ಸೆಂದ | ಸೆಂದು |
| 179 | 6 | ವುತ್ತಖಳ | ವುತ್ತಖಳ |
| ,, | 23 | ತರೆದ | ತರಿದ |

# ವೀರಭದ್ರ ವಿಜಯಂ

## ಪ್ರಥಮಾಶ್ವಾಸಂ

ಶ್ರೀಗೌರೀಪೀನವೃತ್ತಸ್ತನಘುಸೃಣದಿನೋರಂತೆ ರಂಜಿಪ್ಪ ವಕ್ಷೋ
ಭಾಗಂ ಬ್ರಹ್ಮೇಂದ್ರಮುಖ್ಯಾಮರಮಣಿಮಕುಟಶ್ರೇಣಿಶೋಣಾಂಘ್ರಿಯುಗ್ಮಂ ।
ನಾಗಾಧೀಶೋಪವೀತಂ ರವಿಶಶಿಶಿಖಿನೇತ್ರಂ ಜಗದ್ಧಾತ್ರನೀಗೊ
ಲ್ದೀಗಂ ಭಕ್ತಪ್ರತಾನಕ್ಕಭಿಮತವನೊರಲ್ದಾವಗಂ ವಿಶ್ವನಾಥಂ ॥ ೧

ಶ್ರೀಯಂ ವಾರಿಜಲೋಚನಂಗೆ ಮುದದಿಂದಾಬ್ರಹ್ಮದೇವಂಗೆ ವಾ
ಕ್ಛ್ರೀಯಂ ಸಂತಸದಿಂದ ಜಂಭಮಥನಂಗೋರಂತೆ ರಂಜಿಪ್ಪ ಗೋ ।
ಶ್ರೀಯಂ ಕೊಟ್ಟೆಸೆದಿರ್ಪ ದೇವನೆಮಗೊಲ್ದೆಲ್ಲಾಗಳೊಪ್ಪಿರ್ಪ ಗೋ
ಶ್ರೀಯಂ ಸಂತತಮೀಗೆ ಭಾವಕರ ಚಿತ್ತಾಹ್ಲಾದಮಾಗಿರ್ಪಿನಂ ॥ ೨

ಕಾವನ ಕೋಲ್ಗಳಂ ಮುಱಿದು ಕೊಲ್ವ ಪೊಡರ್ಪುಱೆ ತಾಯಹೊಟ್ಟೆಯೊ
ಳ್ಬೇವ ನಿರೋಧವೆಂಬುದದುಮೊರ್ವೞಯುಮಿಲ್ಲದ ಪೆರ್ವೞ ಮತ್ತಮೇ ।
ಣ್ಣಾವಿನ ಬೇವ ಸಂಸಲೆಯಮರ್ಚದ ಬಲ್ಮೆಯದಾರ್ಗೆ ಸಾರ್ದುದಾ
ದೇವನೆ ದೇವನಾತನಡಿದಾವರೆಗಾಂ ತುಱಿಲ್ಗೆಯ್ವೆನರ್ತಿಯಿಂ ॥ ೩

ಅಮೃತಾತ್ಮಂ ಸುಪ್ರಸನ್ನಂ ತುಹಿನಗಿರಿತನೂಜಾವರಂ ತೀರ್ಥವಾಹಂ
ರಮಣೀಯಂ ನಾಡೆ ಮುಕ್ತಾಮಯನುಱುಭುವನಾಧಾರನೋರಂತಗಾಧಂ ।
ಕಮಠಾವಾಸಂ ಸಮಸ್ತಾನಿಮಿಷನಿಕರಸೇವ್ಯಂ ಶಿವಾಂಭೋಧಿ ಮತ್ಕಾ
ವ್ಯಮೆನಿಪ್ಪೀವಿದ್ರುಮಕ್ಕಭ್ಯುದಯದೆಸಕಮಂ ಮಾೞ್ಕೆ ಕಾರುಣ್ಯದಿಂದಂ ॥ ೪

ಸುರಸೇವ್ಯಂ ಸತತಂ ಹರಿಪ್ರಿಯನುಮಾವಿಭ್ರಾಜಿತಂ ನಾಡೆ ಪಾಂ
ಡುರವರ್ಣಂ ಭಜಕೌಘಕಾಮಫಲದಂ ನೀಡುಂ ವಿಶಾಖಾನ್ವಿತಂ ।
ಪರಮಾನಂದಕರಂ ಮಹಾಭ್ಯುದಯಪಾದಂ ಶಂಭುಕಲ್ಪದ್ರುಮಂ
ಕರುಣಂಗೆಯ್ಗೊಲವಿಂದೆ ಮತ್ಕೃತಿಲತಾವಿಸ್ತಾರಕಾಧಾರಮಂ ॥ ೫

ಅವಳ ಮ್ಮೆಮೆಯಿಂದೆ ರತಿ 1 ಗೈದೆತನಂ ನೆಲೆಗೊಂಡುದೆಯ್ದೆಮ
ತ್ತಾವಳ ಪುತ್ರನಿಂ ನಿಖಿಲನಿರ್ಜರಕಾಮಿನಿಯರ್ಗೆ ಕರ್ಣಪ ।
ತ್ರಾವಳಿಯೋಜೆವೆತ್ತು ನೆಲಸಿತ್ತು ವಲಂ ಜಗವೊಲ್ದು ನೋಡೆಯಾ
ದೇವಿಯ ಪಾದಪದ್ಮಮೆಮಗೀಗೆ ನಿರಂತರಮಿಾಪ್ಸಿತಾರ್ಥಮಂ ॥ ೬

ವರಹಸ್ತಾನೀಕಮಂ ಗಹ್ವರಶಿರದೊಳಗಿಂಬಿಟ್ಟು ತದ್ಧ್ವಾಂತಮಂ ಸಂ
ಹರಿಸಲ್ಸಾಮರ್ಥ್ಯಮುಂಟೇ ತರಣಿಗೆ ಧರೆಯೊಳ್ಶಿಷ್ಯಶೀರ್ಷಾಗ್ರದೊಳ್ತಾಂ ।
ಕರವೊಂದಂ ಸಾರ್ಚುತಂತಸ್ತಿಮಿರವನಿರದೆಬ್ಬಟ್ಟು ರಂಜಿಪ್ಪನೀ ಸ
ದ್ಗುರುವಾತಂಗೆಯ್ದೆ ನಾಂ ವಂದಿಸಿ ಕೃಪೆವಡೆದೀಕಾವ್ಯಮಂ ಪೇಳ್ವೆನೀಗಳ್ ॥ ೭

ಮುನಿಗಳವೃಂದಮಂ ಸುರರಗೊಂದಣಮಂ ಜಸವೆತ್ತದಕ್ಷನೆಂ
ದೆನಿಸುವ ಬೊಂಮನಂ ನೆಗೞ್ದ ಜನ್ನಮನಂದುಱೆ ಶಿಕ್ಷಿಸುತ್ತೆ ವೇ ।
ದನಿಕರದಿಂ ಪೊಗಪ್ತವಡೆದಚ್ಚರಿವೆತ್ತೆಸೆದಿರ್ಪ ರುದ್ರನಂ
ಮನದನುರಾಗದಿಂ ಪೊಗಪ್ವೆನಾಮಹಿಮಾಂಬುಧಿ ವೀರಭದ್ರನಂ ॥ ೮

ಮರಣಂಪೊರ್ದದ ಮ್ಮೆಮೆಯಿಂದಮಳಸರ್ವಜ್ಞತ್ವದಿಂದಂ ಗಣೇ
ಶ್ವರನಾಗಿರ್ಪುದಱಿಂದಯೋನಿಜನೆನಿಪ್ಪೀ ದಿವ್ಯಸಾಮರ್ಥ್ಯದಿಂ ।
ಹರನಂತಿರ್ದುಱಿಂ ದ್ವಿತೀಯಶಿವನೆಂಬೀನಾಮದಿಂದೊಪ್ಪುವಾ
ವರನಂದೀಶ್ವರನೀವನಕ್ಕೆಮಗೆ ಚಿತ್ತಾನಂದಸಂದೋಹಮಂ ॥ ೯

ಮೂಱಡಿ ತನಗಿರುತಿರ್ದುಂ
ಮೂಱುಂಕಣ್ಣಭನವನಂಪ್ರಿಸರಸಿಜಕಾಹಾ ।
ಆಱಡಿಯೆನಿಸುತ್ತಿರ್ದಾ
ನೀಱಂ ಭೃಂಗೀಶನೀಗೆ ಮತ್ಕೃತಿಗೊಳ್ಪಂ ॥ ೧೦

ದ್ವಿರದಾಸ್ಯಂ ತಾನೆಯಾಗಿರ್ದುರುತರಧವಳಚ್ಛಾಯೆಯಿಂದೊಪ್ಪಿ ತೋರ್ಪೇ
ಕರದಾಸ್ಯಂ ಬಾಲಚಂದ್ರಾಖ್ಯನೆನಿಸಿ ವಿಲಸತ್ಸತ್ಕಳಾವೃಂದದಿಂ ಬಂ ।
ಧುರಮಾಗೊಪ್ಪಿರ್ಪನೇಗಂ ಕಪಿಲನೆನಿಸಿ ರಕ್ತಾಂಗನಾಗೀವಿರೋಧ
ಕ್ಕಿಱವಾಗೊಪ್ಪಿರ್ಪ ವಿಘ್ನೇಶ್ವರನತಿಶಯದಿಂ ಮಾಳ್ಕೆ ಮತ್ಕಾವ್ಯಕೊಳ್ಪಂ ॥ ೧೧

ತಾತಂ ಪಂಚಾಸ್ಯದಿಂದಂ ತ್ರಿಣಯನದೆ ವಿರಾಜಿಪ್ಪನಂತಾತನಂಗೋ
ದ್ಭೂತಂ ಚೆಲ್ವಾದ ಷಡ್ವಕ್ತ್ರದ ಕಡುಸೊಬಗಿಂ ದ್ವಾದಶಾಕ್ಷಿತ್ವದಿಂ ವಿ ।

1 ಗೆಯ್ದೆ.

ಖ್ಯಾತಂಬೆತ್ತೊಪ್ಪುತಂ ತಂದೆಗೆ ಮಿಗಿಲೆನಿಸುತ್ತಾವಗಂ ರಂಜಿಪಂ ಮ
ತ್ತಾತಂಗಾಂ ವಂದಿಸುತ್ತೀಕೃತಿಯನುಸಿರ್ವೆನಾನಂದಸಂದೋಹದಿಂದಂ ॥ ೧೨

ಹಿಂದೆ ಭವಾನಿಯಾಣ್ಮನ ಪದಂಗಳ ಪೂಜಿಸುತಿರ್ದವರ್ಗೆ ಪೋ
ಣೆಂದು ಮಹೇಶನಂಘ್ರಿಕಮಲಂಗಳನರ್ಚಿಸುತಿರ್ದವರ್ಗೆ ನಾಂ ।
ಮುಂದೆ ಶಶಾಂಕಜೂಟನಡಿಯಂ ಸಲೆ ಪೂಜಿಸುವರ್ಗೆ ಸಂತತಂ
ವಂದಿಸಿ ಪೇಳ್ವೆನೀಕೃತಿಯನಟ್ಟಿಯಿನಾಲಿಪುದೆಲ್ಲ ಸಜ್ಜನರ್ ॥ ೧೩

ವೀರೇಶ್ವರನ ನೆಗಡ್ತೆಯ
ನೋರಂತುಱಿ ಪೇಳ್ವ ನನ್ನ ಮುಖಮಂ ಶಾರದೆ ।
ಸೇರದೆ ಮತ್ಕೃತಿಗೊಳ್ಪಂ
ತಾರದೆ ನಿಲಲಾರ್ಪಳೇ ವಿಶಾರದೆಯೊಲವಿಂ ॥ ೧೪

ಬಾಣನ ಬೆಡಂಗು ಕನ್ನಡ
ಜಾಣಂ ಹಂಪೆಯಹರೀಶ್ವರನ ಬಗೆ ಸುಕವಿ ।
ಪ್ರಾಣಂ ಮಯೂರನೊಳ್ನುಡಿ
ಮಾಣದೆ ನೆಲಸಿರ್ಕೆ ಮತ್ಕೃತಿಯೊಳೊಳ್ಪಿಂದಂ ॥ ೧೫

ಘನಕವಿಕಾಳಿದಾಸನಡಿಗಳ್ಗೆ ಹಲಾಯುಧನಂಘ್ರಿಗಳ್ಗೆ ಭೋ
ಜನಚರಣಕ್ಕೆ ಮಲ್ಹಣನಪಾಜಪಯೋಜಕೆ ನಾಡೆ ಕೇಶಿರಾ ।
ಜನಚರಣಕ್ಕೆಯುದ್ಭಟಮಹೀರಮಣಕ್ರಮಕೆಯ್ದೆ ಸಂತತಂ
ವಿನಮಿತನಾಗಿ ಪೇಳ್ವೆನೊಲವಿಂ ಬುಧಸೇವ್ಯಮೆನಿಪ್ಪ ಕಾವ್ಯಮಂ ॥ ೧೬

ಮುದದೆ ಮಧುವ್ರತಂಗಳುಣದಿರ್ದೊಡೆ ಚಂಪಕಪುಷ್ಪಕೆಯ್ದೆ ಕುಂ
ದುದಯಿಸಿ ತೋರ್ಪುದೇ ಬಳಿಕ ಚೋರವಿತಾನಕಸಹ್ಯಮಾದೊಡಾ ।
ಸೂದೆಯೊಡಲಂಗದೇ ಕೊಱತೆಯೇ ಸಲೆ ದುರ್ಜನಸಂಚಯಕ್ಕೆ ಸೇ
ರದೊಡೆ ನವೀನಭಾವರಸಮುಳ್ಳ ಲಸತ್ಕೃತಿ ನಿಂದ್ಯಮಪ್ಪುದೇ ॥ ೧೭

ನೆಟಲ್ಗಭಿಲಾಷೆಯಂ ಕುಡುವ ತೀಕ್ಷ್ಣಮೆನಿಪ್ಪ ಮಹಾತಪಕ್ಕೆ ಮೇ
ಣ್ಣುಟತಟನಾವಗಂ ಮೆರೆವ ದೀವಿಗೆಗಿಚ್ಚೆಯನೀವ ಮಾರ್ವನ ।
ಗ್ಗಟರೆನಿಸಿರ್ಪ ಸಜ್ಜನರಪೇಕ್ಷೆಗೆ ಕಾರಣರಾದ ! ದುಷ್ಟರಂ
ಪಟಿವರದೇಕೊ ಕೋವಿದರೊರಲ್ದು ಲಸತ್ಕವಿತಾಪ್ರಬಂಧದೊಳ್ ॥ ೧೮

1 ದುಟ್ಟ.

ಪಿರಿದುಂ ಹೇಮದ ಬಣ್ಣದಂದದೆ ಕರಂ ತಾಂ ತೋರ್ದೊಡೇಂ ಪಿತ್ತಳಂ
ಧರೆಯೊಳ್ಮೇಣೊಱೆಗೆಯ್ದೆ ಬಂದು ಸದೃಶಂ ತಾನಪ್ಪುದೇಯಂತದ ।
ಕ್ಕರದಿಂ ದುಷ್ಕವಿಗಳ್ಪಟಿಕ್ಕೊಱೆದ ಕಬ್ಬಂ ಕಬ್ಬದಂತಿರ್ದೊಡೇಂ
ಸರಿವಂದಪ್ಪುದೆ ಸಬ್ಬಲಕ್ಕಣದ ಕಬ್ಬಕ್ಕೀ ಧರಾಭಾಗದೊಳ್ ॥ ೧೯

ತಿಳಿಯದೆ ಬೇಸತ್ತು ಮಗು
ಬ್ದಿಟಲಂ ತಾಳ್ದೋದಿಸುತ್ತೆ ತರೆಗೊಡಪುವವೋ ।
ಲ್ಗಟಪಿದ ದುಷ್ಕವಿತೆಯನ
ಗ್ಗಟಕವಿಗಳ್ಮೆಚ್ಚುವರೆ ಧರಿತ್ರೀತಳದೊಳ್ ॥ ೨೦

ಸಂದಷ್ಪಂ ಸರೆಯೊಂದಿ ಬಂದೊಡಱಿಯೆಂ ನಾಂ ಯತ್ನದಿಂದಂ ಬಳಿ
ಕ್ಕಂದಂಬೆತ್ತ ಪರೋಕ್ತಿಯಂ ತೆಗೆದುದಿಲ್ಲೆಂದಾ ಪ್ರತಿಜ್ಞೋಕ್ತಿಯಂ ।
ಕುಂದೊಂದಿಲ್ಲದೆ ಪೇಟ್ವರಿಂತು ಕೆಲಬರ್ತಾವುಂತೆ ತಮ್ಮಾ ಕವಿ
ತ್ವಂ ದರ್ಪೇಳದೆ ಸುಮ್ಮನಿರ್ಪುದೆ ಪಲಂ ತಂತಂಮ ಸಾಮರ್ಥ್ಯಮಂ ॥ ೨೧

ತಿರ್ದುವುದೀಕೃತಿಯಂ ತ
ಪ್ಪಿರ್ದೊಡೆ ವಿಬುಧಾಳಿ ಬಗೆಗೆ ಸೊಗಸುವ ತೆಱದಿಂ ।
ಪೊರ್ದದವೋಲ್ದೋಷಂ ಜಾ
ಣ್ಮಾರ್ದಿರ್ಪಂತಾವಗಂ ಮನೋಮುದದಿಂದಂ ॥ ೨೨

ತ್ರಿಣಯನನಂಘ್ರಿಯಂ ನುತಿಸಲಾರದೆ ಚಿಂತಿಸಿ ಕೀಳ್ಗೆ ಸಾರ್ದನಾ
ಫಣಿಪತಿಯೆಂಬುವಂ ನುಡಿಯ ಜಾಣ್ಮೆಗೆ ತಾಂ ಗುರುವಾದವಂ ನಭೋಂ ।
ಗಣಮುನಡರ್ದನೆಯ್ದೆ ಲಘುವಾಗಿ ಬಟಿಕ್ಕಿಟಿದಲ್ಪಮರ್ತ್ಯರಂ
ಗಣಿಯಿಸಬರ್ಪುದೇ[1] ನುತಿಸನೆಂಬ ನರಂ ನೆಱೆ ಗಾಂಪನಲ್ಲವೆ ॥ ೨೩

ಜಡರೂಪಂ ಸಲೆ ತಾಳ್ದ ವೀಣೆಯದು ನಾನಾಗೀತಚಾತುರ್ಯಮಂ
ನುಡಿಸಲ್ಬಲ್ಲ ಸುಜಾಣನಿಂ ನುಡಿವವೋಲ್ಮಾರೋಕಮಂ ಸಂತತಂ ।
ಬಿಡದಾಡಿಪ್ಪುರುಕೌಶಲಜ್ಞನೆನಿಪಾ ವಿಶ್ವೇಶನೊಲ್ದಟ್ಕರಿಂ
ನುಡಿಸಲ್ಕಾನುಸಿರ್ದೆಂ ನೆಗಪ್ತವಡೆದೀ ವೀರೇಶನೌನ್ನತ್ಯಮಂ ॥ ೨೪

ಮುದದಿಂ ಪೊಗಟ್ದನೀಗ
ಟ್ಮದನಹರಂ ವೀರಭದ್ರದೇವನ ಮಹಿಮಾ ।

---

1 ದೇಂ.

ಭ್ಯುದಯಮನೆನ್ನಾರ್ಪನಿತಂ
ವಿದಿತಾರ್ಥರ್ಕೆಳ್ದು ಲಾಲಿಪುದು ಸಂತಸದಿಂ ‖ ೨೫

ಕೃತಿನಾಥಂ ಗುರುವಿಶ್ವನಾಥನದಱಿಂ ಕೌಶಲ್ಯವಾಂತೊಪ್ಪುವೀ
ಕೃತಿನಾಮಂ ವರವೀರಭದ್ರವಿಜಯಂ ಭಾವಾರ್ಥಚಿತ್ರಂಗಳಿಂ ।
ಕೃತಿಯಂ ಪೇೞ್ದವನಾರೆನಲ್ಬುಧನುತಶ್ರೀವೀರಭದ್ರಾಹ್ವಯಂ
ಕೃತಿಯಂ ಕೇಳದರಾರ್ಮದಂಬಡದರಾರ್ಕೊಂಡಾಡದಂತಿರ್ಪರಾರ್ ‖ ೨೬

ಮನಸಿಜವೈರಿಯ ಪನ್ನೆಱ
ಡನೆಯುರುಲೀಲಾಸ್ವರೂಪ ವೀರೇಶ್ವರನಂ ।
ಮನಸಿಜಹರನೆಂದೇಯಾ
ತನ ಪೆಸರಿಟ್ಟಂ ಬಱಿಕ್ಕೆ ನಾನೀ [1] ಕೃತಿಗಂ ‖ ೨೭

ಭೀರುವನೆಯ್ದೆ ವೀರನೆನುತುಂ ಜನವೆಲ್ಲುರೆ ಬಲ್ಲಮಂಗಳಾ
ಕಾರನನೆಯ್ದೆ ಭದ್ರನೆನುತುಂ ಧರೆ ಬಣ್ಣಿಪುದಂತುಟಲ್ತು ನಾಂ ।
ವೀರನನಂತು ವೀರನೆನುತುಂ ನಿಜಭದ್ರನನಿಂತುಭದ್ರನೆಂ
ದಾರಮಣೀಯಮಾಗಿ ಸಲೆ ಕೀರ್ತಿಸಿದೆಂ ವರವೀರಭದ್ರನಂ ‖ ೨೮

ವೀರತ್ವಂ ಭದ್ರತ್ವಮು
ದಾರಯೆ ರೂಪೇಕಮಾಗಿ ನೆಲೆಗೊಂಡುದಱಿಂ ।
ದೋರಂತೆ ವೀರಭದ್ರಾ
ಕಾರಂ ಸೊಗಸಿರ್ಪುದಾವಗಂ ಧಾರಿಣಿಯೊಳ್ ‖ ೨೯

ವ‖ ಆವೀರಭದ್ರವಿಜಯದ ಕೃತಿಯೆಂತೆಂದೊಡೆ,

ಘನರಸದಿಂ ವಿಚಿತ್ರಪದದಿಂದೆ ನಭೋಂಗಣದಂತೆ ನಾಡೆ ರಂ
ಜನೆವಡೆದಿರ್ಪ ಲಕ್ಷಣದಿನುನ್ನತಸತ್ಕಳೆಯಿಂದೆ ಪೂರ್ಣಚಂ ।
ದ್ರನಸಿರಿಯಂತನಂತಪರಿರಾಜದಲಂಕೃತಿಯಿಂ ಗುಣಂಗಳಿಂ
ಮನಸಿಜವೈರಿಯಂತೆಸೆವುದೀಕೃತಿ ಬಿತ್ತರಗರೊಲ್ದು ಭಾವಿಸಲ್ ‖ ೩೦

ಗುರುಪದವಿಭಕ್ತಿಯಿಂ ಬಂ
ಧುರಲಿಂಗತ್ರಯದೆ [2] ಸತ್ಕೃತಿಯಿಯುತಾನ್ವಯದಿಂ ।

---

1 ಕೃತಿಯುಂ. 2 ಸತ್ಕೃತಿಯಾನ್ವಿತದಿಂದಂ.

ವರರೀತಿಭಾವದಿಂ ಶಂ
ಕರಭಕ್ತರ ತರದಿನೆಸೆವುದೀ ಸತ್ಕಾವ್ಯಂ ॥ ೩೧

ಮಲ್ಲಿಗೆಗಂಪಿನಂತೆ ಪೊಸಮಾಂದಳಿರಂತೆ ಸರೋಜದಂತೆ ಕಂ
ಕೆಲ್ಲಿಯಜೊಂಪದಂತೆ ಸಲೆ ತೆಂಕಣತಂಬೆಲರಂತೆ ಕಾವನಾ ।
ಬಲ್ಲುಲಿಯಂತೆ ಕೂರ್ತ ಮನದನ್ನಳ ಕೂಟದ ಸೌಖ್ಯದಂತಿಳಾ
ವಲ್ಲಭವೀರಭದ್ರನ ಕವಿತ್ವರಸಂ ಸೊಗಸೀವುದಾವಗಂ ॥ ೩೨

ಇದು ಲಕ್ಕಣದಾಡುಂಬೊಲ
ನಿದು ಸಕ್ಕದದೇಪ್ಗ ಗಾಡಿನೆಲಸಿದ ನಾಡಿಂ '
ತಿದು ದೇಶೀಯದ ಬೀಡೆನಿ
ಪುದು ನವರಸಭರಿತನವ್ಯಕಾವ್ಯಂ ದಿವ್ಯಂ ॥ ೩೩

ಇದು ಕವಿಗಳಕರ್ಣಾಮೃತ
ಮಿದುರಸಿಕರಸಾಯನಂ ಬಟಿಕ್ಕಗರ್ಲ್ದೀಪ ।
ರ್ಗಿದು ಜವಳಿಗೊಳಿಪಮಂತ್ರದ
ಸದನಂ ತಾನೆನಿಸುತಿರ್ಪುದೀ ಸತ್ಕಾವ್ಯಂ ॥ ೩೪

ಶ್ರೀಕಂಠವಂಶವಾರಿಧಿ
ರಾಕಾಬ್ಜಂ ಚಿಕ್ಕವಿರುಪನಾತ್ಮೋದ್ಭವನೆನಿ ।
ಪೀಕಾಮನೃಪಂ ತನುವಿಡಿ
ದಾಕಾಮನೊ ಎನಿಸುತಿದ್ದು ರಂಜಿಸುತಿರ್ಪಂ ॥ ೩೫

ಆತಂಗೀಜನ್ಮದೊಳೆಯು
ಜಾತಂ ಕೈಗೂಡಿಸಿರ್ದ ಮೋಕ್ಷಾಂಗನೆಯೆನೆ ।
ರೀತಿಯಿನೊಪ್ಪಿರ್ಪಳ್ಬಟಿ
ಕಾತನಸತಿ ವೀರಮಾಖ್ಯೆ ಮಿಗೆ ಸೊಗಯಿಸುತಂ ॥ ೩೬

ಆಕೆಯ ಪುಣ್ಯೋದರಕಮ
ಲಾಕರದಲ್ಲೊಗೆದ ರಾಜಹಂಸಂ ಪುಣ್ಯ ।
ಶ್ಲೋಕಂ ಶಿವಭಕ್ತಿಯಿನೆ
ಲ್ಲಾಕಾಲಂ ಸೊಗಯಿಪಂ ವಿರೂಪಾಕ್ಷನೃಪಂ ॥ ೩೭

[1] ಶ್ರೀವಿರೂಪಾಕ್ಷದೇವನಿ
ನಾವೀರಂ ಪುಟ್ಟಿ ವಿಬುಧನುತನಾದಂದದೊ ।
ಳಾವಿರೂಪಾಕ್ಷನೃಪನಿಂ
ದೀವೀರಂ ಜನಿಸಿ ವಿಬುಧನುತನಾಗಿರ್ಪಂ ॥ ೩೮

ಮನಸಿಜಮಾನಭಂಜನಪದಾಂಬುಜವಲ್ಲದೆ ಮಿಕ್ಕದೇವರಂ
ನೆನೆದಱಿಯಂ ಸಮಂತು ಪರಕಾಮಿನಿಯರ್ಕಳ ಸಂಗಮಂ ವಲಂ ॥
ಕನಸಿನೊಳಾದೊಡಂ ಮಱೆದು ಕಂಡಱಿಯಂ ವಿರುಪೇಂದ್ರಸೂನುವೆಂ
ದೆನಿಸುವ ವೀರಭದ್ರನೆನುತುರ್ವರೆಯೆಯ್ದೆ ಪೊಗಳ್ವುದಾತನಂ ॥ ೩೯

ಆವೀರಭದ್ರನುಸಿರ್ದಂ
ಶ್ರೀವೀರೇಶ್ವರನವಿಜಯಮಂ ನಾನಾಸ ।
ದ್ಭಾವಾಲಂಕೃತಿರಸದಿಂ
ಕೋವಿದರಾಹಾ ಎನುತ್ತೆ ಬಣ್ಣಿಸುವಿನೆಗಂ ॥ ೪೦

ವ॥ ಅದೆಂತೆನೆ,

ಮೀನಮಕರಕಮಠವ್ರಜ
ಫೇನತರಂಗಾಳಿಶೀಕರಪ್ರಕರಾವ ।
ರ್ತಾನೀಕದಂಬುಸಂಚಯ
ನಾನಾಮಣಿನಿಕರದಿಂದುದಧಿ ರಂಜಿಸುಗುಂ ೪೧

ಅನಿಮಿಷವೃಂದದಿಂ ಸುರನಿವಾಸದವೊಲ್ಸರೆ ವಿದ್ರುಮಂಗಳಿಂ
ವನದವೊಲಾಸರಸ್ವತಿಯ ಮೇಳನದಿನಬ್ಜಜನಂತೆ ಸಂತತಂ ।
ಜನನುತಮಾಗಿ ತೋರ್ಪ ಕಮಲಾಸ್ಪದದಿಂ ವನಜಾಕ್ಷನಂತೆವೋ
ಲ್ವನನಿಧಿ ತಾಂ ಮನಂಗೊಳಿಸಿ ಕಣ್ಗೆಸೆದಿರ್ದುದಿಳಾತಳಾಗ್ರದೊಳ್ ॥ ೪೨

---

1 ಈ ಪದ್ಯದ ೧ ಮತ್ತು ೩ನೆಯ ಪಾದಗಳಲ್ಲಿ ಕವಿಯು ಗಣನಿಯಮವನ್ನು ಲಕ್ಷಿಸದೆ, ಮಾತ್ರಾನಿಯಮವೊಂದನ್ನೇ ಅನುಸರಿಸಿರುತ್ತಾನೆ; ಆದುದರಿಂದ, ಗಣನಿಯಮವನ್ನನುಸರಿಸಿ, ೧ ಮತ್ತು ೩ನೆಯ ಪಾದಗಳನ್ನು ಈ ರೀತಿಯಾಗಿ ತಿದ್ದಿಕೊಳ್ಳಬಹುದು.

ಶ್ರೀವಿರುಪಾಕ್ಷಸುದೇವನಿ
.. .. .. .. .. ..
ಳಾವಿರುಪಾಕ್ಷನೃಪಾಲನಿ
ನೀವೀರಂ ಜನಿಸಿ .. .. .. .

ಸುಳಿಗಾವಾಸಮದಾಗಿಯುಂ ಸಿತನಗಂ ತಾನಲ್ತು ಮೇಣ್ಸಂತತಂ
ತಿಳಿವಿಂಗಾಲಯಮಾಗಿಯುಂ ವರಮುನಿಸ್ವಾಂತಂ ಬಟಿಕ್ಕಲ್ತು ಬಾಂ ।
ಬೊಳೆಗಂತಾಸ್ಪದಮಾಗಿಯುಂ ಹರಕಪರ್ದಂ ತಾನದಲ್ತೆಯ್ದೆಯು
ಜ್ವಳಿಸುತ್ತಿಂತು ವಿಶಾಲಮಾಗಿ ಧರೆಯಂ ಸುತ್ತಿತ್ತು ರತ್ನಾಕರಂ ॥ ೪೩

ವಿರಹಿಜನದಂತೆವೋಲ್ಬಂ
ಧುರಮುತ್ಕಳಿಕೆಗಳಿನೆಯ್ದೆ ಬತ್ತಳಿಕೆಯವೋ ।
ಲ್ಕರವಹಮಾಗಿರ್ಪುದರಿಂ
ಶರನಿಧಿ ರಂಜಿಪ್ಪುದೀಧರಿತ್ರೀತಳದೊಳ್ ॥ ೪೪

ಸತತಂ ತಾಂ ಸುಗ್ರೀವಾ
ನ್ವಿತಮಾಗಿ ದಶಾಸ್ಯವೈರಿಯಲ್ತುರುಯಾದಃ ।
ಪತಿಯೆನಿಸಿರ್ದುಂ ಪಶ್ಚಿಮ
ಪತಿಯಲ್ತು ಸಮುದ್ರಮಿಂತಿದೇನಚ್ಚರಿಯೋ ॥ ೪೫

ವ॥ ಇಂತಪ್ಪ ಸಮುದ್ರಮುದ್ರಿತಧರಾಮಧ್ಯದೊಳ್ಕನಕಾಚಳಮೊಪ್ಪಿರ್ದುದ ದೆಂತೆಂದೊಡೆ,

ಗಿರಿಜಾತಾರ್ಧಾಂಗ [1] ಮೇಗಂ ದೊರೆಕೊಳೆ ಪರಮಾನಂದ [2] ದಾಧಿಕ್ಯದಿಂದಂ
ಪರಮೇಶಂ ಸ್ವೇಚ್ಛೆಯಿಂದಂ ಪವಡಿಸೆ ಮಿಗೆ ಪೊಂಬಣ್ಣವಾಂತಾವಗಂ ದಲ್ ।
ಪಿರಿದುಂ ರಂಜಿಪ್ಪ ಪೀನಸ್ತನವೆನೆ ಬಗೆಗಿಂಬಾಗಿ ರಂಜಿಪ್ಪುದೇಗಂ
ಸುರಶೈಲಂ ವ್ಯೋಮಮಂ ತಾಂ ತುಡುಕುತೆ ಘನವಿಸ್ತಾರದೌನ್ನತ್ಯದಿಂದಂ ॥ ೪೬

ವ॥ ಇಂತಪ್ಪ ಮೇರುವಿನ ದಕ್ಷಿಣದಿಶಾಭಾಗದೊಳ್ಕಾಶೀದೇಶಮೆಸೆದಿರ್ಪು ದದೆಂತೆಂದೊಡೆ,

ಸುಕೃತದ ಬೈಕೆ ಸಾರತರಸತ್ಯದ ಜೋಕೆ ಸದಾಶಿವಾಗಮ
ಪ್ರಕರದ ಬೀಡು ನಾಲ್ಕೆನಿಸಿತೋರ್ಪ ಪದಂಗಳವಿರ್ಪ ನಾಡು ಭಾ ।
ವಕರನಿವಾಸಮಂತದು ಸುಭಕ್ತಿಯಕೋಶಮುರುಪ್ರಕಾಶಮಾ
ಸುಕೃತಿಜನೋಪದೇಶಮೆನಿಸಿರ್ಪುದು ಕಾಶಿಯದೇಶಮಾವಗಂ ॥ ೪೭

ಮಡಿಯೆಂಬುದು ಧೌತಾಂಬರ
ದೆಡೆಯೊಳ್ಬಡಿಯೆಂಬುದಲ್ಪದಂಡದೊಳೇಗಂ ।

1 ಮೇಘಂ. 2 ದೌನ್ನತ್ಯ.

ಪಿಡಿಯೆಂಬುದು ಕರಿಣಿಯೊಳೆಡೆ
ವಿಡದಿರ್ಪುವು ಬೇರೆ ಮತ್ತವಿಲ್ಲಾ ನಾಡೊಳ್ ॥ ೪೮

ಪರವಶವೆಂಬುದು ಯೋಗೀ
ಶ್ವರಸಮುದಾಯಂಗಳೊಳ್ಪ್ರದೋಷವೆನಿಪ್ಪುದು ।
ಇರುಳಿನ ಪೊಗದೊಳ್ಸತತಂ
ದೊರೆಕೊಂಬುದು 1 ಮತ್ತವುಂಟೆಯಾಜನಪದದೊಳ್ ೪೯

ವ॥ ಮತ್ತಂ, ಪಟಯೆಂಬುದು ವಸ್ತ್ರವಿಶೇಷದೊಳ್ಕೌಟಿಲ್ಯವೆಂಬುದಂಗನಾಕುಂತಳದೊಳ್ಕೀಲೆಂಬುದಶ್ವಮುಖಲೋಹದೊಳ್ಚಳಿಯೆಂಬುದು ಶೀತಪರ್ಯಾಯದೊಳ್ಬೇಳೆಂಬುದು 2 ಹವಿಃಪ್ರದಾನದೊಳಾ 3 ಳಿಯೆಂಬುದಾ ಸಖೀಜನದೊಳ್ ಮುತ್ತೆಂಬುದು ಮೌಕ್ತಿಕದೊಳಟಿಯೆಂಬುದಾಜಿಡಿಯೊಳಾಬಿಡಿಯೆಂಬುದು ತುಂಬಿಗಳೊಳ್ಸಲೆ ಸಂದಿರ್ಪುವಲ್ಲದೆಯಾಜನಪದದೊಳಿಲ್ಲಮದಲ್ಲದೆಲ್ಲಿಯುಂ,

ರನ್ನಂ ಪುಟ್ಟಿದ ಗಿರಿಮು
ತ್ತುನ್ನತಿಯಿಂ ಪುಟ್ಟದಿರ್ಪ ಪೊಳೆಯೊಲವಿಂ ಬಾ ।
ವನ್ನಂ ಪುಟ್ಟದಡವಿ ಚೆಂ
ಬೊನ್ನುದಯಿಸದಿರ್ಪ ತಾಣಮಿಲ್ಲಾನಾಡೊಳ್ ॥ ೫೦

ಲತೆಗಳ ಸಮುದಯಮೆಲ್ಲಂ
ಲತೆಗಳ ಸಮುದಯಮೆಯಾಗಿತೋರ್ಪುದು ನಿಚ್ಚಂ ॥
ಸತಿಯರ ಗೊಂದಣಮೆಲ್ಲಂ
ಸತಿಯರ ಗೊಂದಣಮೆ ನೋಡೆಯಾಜನಪದದೊಳ್ । ೫೧

ತೆಂಗುಂ ಪಲಸುಂ ಮಾವುಂ
ಕೌಂಗುಂ ತನಿನೇರಿಲುಂ ಕರಕಮುಂ ವರನಾ ।
ರಂಗುಮುಮಲ್ಲದೆಯುಳಿದ ಮು
ರಂಗಳ್ಗಿಡುಗಳ್ಬಟಿಕ್ಕಮಿಲ್ಲಾ ನಾಡೊಳ್ ॥ ೫೨

ತಿಳಿಗೊಳದಿಂದೆ ಪೂತಲತೆಯಿಂದೆ ಫಲಂಗಳಿನೊಪ್ಪುತಾವಗಂ
ನೆಟಲ್ಗೆ ನಿವಾಸಮಾದ ತರುಸಂತತಿಯಿಂ ಪಱಿಕಾಲ್ಗಳಿಂದಣಂ !
ಸುಟಿವೆಳೆಗಾಳಿಯಿಂದೆ ಸಲೆ ಸಂಚರಿಸುತ್ತೆಸೆವರ್ಗೆ ತಾಂ ಮನಂ
ಗೊಳಿಸುತೆ ರಯ್ಯಮಾಗಿ ನೆರೆಯಾವಿಷಯಂ ಸೊಗಸಿರ್ಪುದೊಳ್ಪಿನಿಂ ॥ ೫೩

---

1 ಮತ್ತಮುಂಟೆ. 2 ಹವ್ಯ. 3 ಳಳಿ.

ಆವಿಷಯಂ ತಿಸುಳಿಗೆ ತಾ
ನೇವಿಷಯುಮದಾಗಿ ಸಂತತಂ 1 ರಂಜಿಸುಕುಂ ।
ಭೂವನಿತೆಯಸೌಭಾಗ್ಯಂ
ತೀವಿದ ಕೊಟ್ಟಾರದಂತೆ ಕಂಗೊಳಿಸಿರ್ಕುಂ ॥ ೫೪

ಬಿರಿದೊಸರ್ವಿಕ್ಷುರಸದೆ ಪಾ
ಮರಿಯುರವೊಗಸಸಿಯಿನೊಸರ್ವಚಂದ್ರೋಪಳನಿ ।
ರ್ಝರಜಳದ ಕಾರ್ವೆಯಿಂದಂ
ನಿರಂತರಂ ಬೆಳೆವುವಲ್ಲಿ ಕಳಮಕ್ಷೇತ್ರಂ ॥ ೫೫

ಆಜನಪದವಮಂ ಸಾರ್ದಿ
ರ್ಪಾಜನಮೆಲ್ಲಂ ಕೃತಾರ್ಥರವರಡಿಸೋಂಕಿಂ ।
2 ಬೀಜಿಸುತೆ ನಿಮಿರ್ದಪುಳಕ
ವ್ಯಾಜಮೆನಲ್ನೆಲ್ಲಿಸಸಿ ಮನಂಗೊಳಿಸಿರ್ಕುಂ ॥ ೫೬

ಬಿಸಿಲ್ಗುಟ್ಟಿ ಬಾಡದಂತಿನಿತುವಾಸರಮಾರಯು ಸಾರ್ದು ತಮ್ಮರ
ಕ್ಷಿಸುತೆ ಫಲಕ್ಕೆ ತಂದಮೃತವಂ ಸಲೆ ಬೀಳ್ಕೊಡುವಲ್ಲಿ ನಾಡೆ ಸಂ ।
ತಸದೊಳೆಟಂಗವೇಳ್ಕೆನುತೆ ವಂದಿಸಿತೋರ್ಪ ಬೆಡಂಗೊ ತಾನೆನ
ಲ್ಪೊಸತೆನೆ ಬಿಣ್ಪಿನಿಂದೆ ಮಿಗೆ ಬಾಗಿದ ಶಾಲಿವನಂ ವಿರಾಜಿಕುಂ ॥ ೫೭

ತಂಡುಲದಿನಿದಂ ಜನ್ನದೊ
ಳುಂಡು ಕರಂ ಕಂಡು ದೇವತೆಗಳೆಱೆಯುಲದಂ ।
3 ಕೊಂಡಿರದೆ ಪೋಪವೆನೆ ಗಿಳಿ
ವಿಂಡಾತೆನೆಗರ್ಚಿ ಪಾಱುತಿರ್ಪುವು ನಭದೊಳ್ ॥ ೫೮

ಆ ಕಳಮಕ್ಕೆ ಬಂದೆಱಪ ರಾಜಶುಕಂಗಳನಟ್ಟಲೆಂದುವ
ತ್ತಾಕುಮುದಾಕ್ಷಿಯರ್ಸತತಮುಬ್ಬರದಿಂ ದನಿಗೆಯ್ವುತಿರ್ಪಿನಂ ।
ಕೋಕಿಳನಾದಮೆಂದು ಬಗೆದಾಗಿಳಿವಿಂಡುಗಳಟ್ಕದಲ್ಲಿ ನಿ
ರ್ವ್ಯಾಕುಳದಿಂದೆ ಪಾರ್ದೆನೆಯುನೊಲ್ದುಱೆ ಸೇವಿಸುತಿರ್ಪುವಾವಗಂ ॥ ೫೯

ಬಳಸಿದ ಗಿಳಿವಿಂಡುಗಳಿಂ
ಬಳಸಿದ ಕಳಮದ ಸಮೂಹವಮಂ ಸಂತಸದಿಂ ।

---

1 ರಂಜಿಸುತಂ. 2 ಬೀಜಿಸುತಾಟ್ಟಿಡಪುಳಕ.
3 ಕೊಂಡುಪೋಪಂದವೆನೆ ಗಿಳಿ.

ಬೆಳೆಯಿಸುತುಂ ಬೇಂಟವನುಱೆ
ಬಳೆಯಿಸುವರ್ಪಾಂಥಜನಕೆ ಪಾಮರಿಯರ್ಕಳ್ ॥ ೬೦

ಆ ತರಳಾಕ್ಷಿಯರ್ಗೆ ಮನಸೋಲ್ತು ಬಿಸಿಲ್ಗಱಿ ಭೀತಿಸುತ್ತಶೋ
ಕಾತತಪತ್ರಮಂ ಪಿಡಿದು ಬಂದೆಡೆಯಾಡುವ ಪಾಂಥರಾಮನೋ ।
ಜಾತನೃಪಂಗೆ ನಿನ್ನ ಬಲದಟ್ಟುಳಿ ಮೇಣ್ಪಿರಿದೆಂದು ದೂರಲೆಂ
ದಾತುರದಿಂದೆ ಪ್ರೋಪ ಬಗೆಯೋ ಎನಲೊಪ್ಪಿದರಾಪ್ರದೇಶದೊಳ್ ॥ ೬೧

ಭೂಮಾನಿನಿಗುಱೆಸೊಗಯಿಪ
ಸೀಮಂತದ ರೇಖೆಯಂತೆಯಾದೇಶದೊಳಿ ।
ರ್ಪಮಾರ್ಗಂ ಮುಕ್ತಿಗೆ ತಾ
ನೇಮಾರ್ಗಮದಾಗಿ ನಾಡೆ ಕಂಗೊಳಿಸಿರ್ಕುಂ ॥ ೬೨

ಮರುಗದ ಕಾವಣದಿಂ ಕ
ತ್ತುರಿಯನುಲೇಪನದಿನಮರ್ದ ಲಾಮಂಚಂಗಳ ।
ನೆರಗೆಯಿನಱಿವಟ್ಟಿಗೆಗ
ಳ್ಪರಿಮಳದ ಗೃಹಂಬೊಲಿರ್ದುವಾಬಟ್ಟೆಗಳೊಳ್ ॥ ೬೩

ಪಟುಕಿನ ಕುಂಭದೊಳ್ಪರಿಮಳಂಬೊಱೆದಾವಗಮೊಪ್ಪುತಿರ್ಪನಿ
ರ್ಮಳಜಳಮಂ ಮೃಗಾಂಬಕಿಯರಾಪಥಿಕರ್ಗೆಱೆಯಲ್ಕೆ ತಮ್ಮ ಚೆಂ
ದಳದೊಳಮರ್ಚೆ ರನ್ನಗಳಸಂಬೊಲದೆಯ್ದೆ ವಿರಾಜಿಸಿತ್ತು ಕೋ
ಮಳೆಯರ [1] ಕೈಬಸಕ್ಕೆ ಸಲೆ ಸಾರ್ದೊಡೆ ರಾಗಮದಾರ್ಗೆ ಪುಟ್ಟದೋ ॥ ೬೪

ಜೀವನಮಂ ಸಮಂತಿರದೆ ತಮ್ಮಯ ಕೈಯೊಳಮರ್ಚಿ ತೋರ್ಪ ರಾ
ಜೀವದಳಾಕ್ಷಿಯರ್ಬಳಿಕೆ ಚಿತ್ರಮಿದೆಂಬಿನೆಗಂ ದಿಟಕ್ಕೆನಿ ।
ರ್ಜೀವನರಾಗಿ ಬರ್ಪ ಪಥಿಕರ್ಗುಱೆ ಜೀವನಮಂ ಕುಡುತ್ತೆ ಸಂ
ಜೀವನಮಂತ್ರದೇವತೆಯರೊ ತಾವೆನೆ ರಂಜಿಸುತಿರ್ದ್ದರೊಳ್ಪಿನಿಂ ॥ ೬೫

[2] ಪೊಳಪಂಬೆತ್ತಸೆವಕ್ಷಿಗಳ್ಪೊಳೆವ [3] ಮಿಂಚಾಂತಂದುಕಾರಾವವೋ
ವೊಬಗೊಪ್ಪಂಬಡೆದಿರ್ಪ ಸೋರ್ಮುಡಿ ಲಸನ್ನೀಲಾಭ್ರಮಾಗಲ್ಕರಂ ।
ಮಳೆಗಾಲಂಬೊಲದಾವಗಂ ಸೊಗಸುತಿರ್ಪಾಸ್ತ್ರೀಜನಂ ಸಂತತಂ
ಜಳಮಂಪಾಂಥಸಮೂಹಕೆಯ್ದೆ ಸಲೆ ಸೂಸುತ್ತಿರ್ಪರೌಚಿತ್ಯದಿಂ ॥ ೬೬

---

1 ಕೈವಶಕ್ಕೆ.  2 ತೊಳಪಂ.  3 ಮಿಂಚಾಂತಂದುಕಾನಿಸ್ವನಂ.

ಅಮೃತವನೀಂಟಿ ಮತ್ತನಿಮಿಷತ್ವಮನಾಂತು ವಿರಾಜಿಸಿರ್ಪರಾ
ಸುಮನಸರಾವಗಂ ಬಿಡದೆ ಪಾಂಥಚಯಂ ಸತಿಯರ್ಕಳೊಲ್ದು ತಂ ।
ದಮೃತವನೀಂಟದೇಯನಿಮಿಷತ್ವವನಾಂತುಱೆ ನೋಡುತಿರ್ಪರಾ
ಪ್ರಮದೆಯರಂ ಬಟಿಕ್ಕಮಿದು ವಿಸ್ಮಯಮಲ್ತೆ ಧರಾತಳಾಗ್ರದೊಳ್ ॥ ೭೭

ಇಂತೊಪ್ಪುವಖಿಳಸೌಖ್ಯಕೆ
ತಾಂ ತವರೆಂದೆನಿಸಿ ನಾಡೆ ಕಂಗೊಳಿಸಿರ್ದುದ ।
ನಂತೋತ್ಸವಮಂ ಜನರ್ಗೆ
ರಂತೀವುತೆ ಪೆರ್ಮೆವಡೆದು ಕಾಶೀದೇಶಂ ॥ ೭೮

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆಱೆದಿರ್ಪುದು ಭೂತಳಾಗ್ರದೊಳ್ ॥ ೭೯

ಮುಳಿಯಲಗೇಂದ್ರಜಾತೆ ತರೆಯಿಂ ಸಲೆ ಪಿಂಗದಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ ।
ತುಟಿಲ 1 ನೊಡರ್ಚಲಾಲ್ದು ಮೊಗದೊಳ್ಮೊಗಮಿಕ್ಕುತೆ ಸಂತವಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಪೀಜಗಮಂ ಗುರುವಿಶ್ವವಲ್ಲಭಾ ॥ ೮೦

ಉತ್ಸಾಹವೃತ್ತಗಿರಿಯುಮಗಳಮುಡಿಯೊಳಮರ್ದ ಸುರಕುಜಪ್ರಸೂನದೊಳ್
ಬೆಱೆದರಜಮ 2 ನಿರದೆ 3 ಸವಿದು ತಣಿದು ತನ್ನ ಲೀಲೆಯಿಂ ।
ಮೊಱೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊಱೆವ ಗರಳಗಳನ ಚರಣಕಮಳಮಿಾಗಭೀಷ್ಟಮಂ ॥ ೮೧

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತಪಾದಪದ್ಮ
ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪಾದಪಂಕೇಜಮಕರಂದಮಧುಕರಾಯಮಾಣ
ಶ್ರೀಕಂಠಮಂಶಾರ್ಣವಪೂರ್ಣಚಂದ್ರನೆನಿಪ ಸತ್ಯವೀಶ್ವರ ವೀರಭದ್ರನೃಪಾಲನಿಂ
ವಿರಚಿತಮಪ್ಪ ಶ್ರೀವೀರಭದ್ರವಿಜಯ ಮಹಾಪ್ರಬಂಧದೊಳ್
ಸಮುದ್ರವರ್ಣನಂ ದೇಶವರ್ಣನಂ ಪ್ರಥಮಾಶ್ವಾಸಂ
ಸಂಪೂರ್ಣಂ

---

1 ನೊಡರ್ಚದಾಲ್ದು. 2 ನುರದೆ. 3 ಸಱಿದು,

# ದ್ವಿತೀಯಾಶ್ವಾಸಂ

ಕುಲಗೋತ್ರಜಮರ್ಧಾಂಗಂ
ಕುಲಗೋತ್ರವಿಹೀನಮಾಗಿಯುಳಿದರ್ಧಾಂಗಂ ।
ನಳಸಿತ್ತಾವಂಗಾಪು
ಷ್ಕಲರೂಪಂ ಕರುಣದಿಂದೆ [1] ರಕ್ಷಿಸುಗೆಮ್ಮಂ ॥ ೧

ವ॥ ಅಂತಪ್ಪ ದೇಶದೊಳ್ಕಾಶೀಕ್ಷೇತ್ರಂ ಕಂಗೊಳಿಸಿರ್ಪುದೆಂತೆಂದೊಡೆ,

ಅದು ಪಂಚಕ್ರೋಶಾನ್ವಿತ
ಮದಱೊಳ್ಮಡಿದರ್ಗೆ ಚಂದ್ರಶೇಖರರೂಪಂ ।
ಬುದು ತಾನೆಯೊಲ್ದು ಬಂದಿ
ರ್ಪುದು ಮತ್ತದರಿರವ [2] ನಾವನಭಿವರ್ಣಿಸುವಂ ॥ ೨

ವ॥ ಅಲ್ಲಿ,

ಶಿಲೆಯೆಲ್ಲಂ ಲಿಂಗಂಗ
ಳ್ನೆಲಸಿದ ಮಾನವರ್ಗಳೆಲ್ಲಮಭವಗಣಂಗಳ್ ।
ಜಲಮೆಲ್ಲಂ ತೀರ್ಥಂಗ
ಳ್ಸಲಲಿತಮಾಗಿಂತು ಕಾಶಿ ಕಂಗೊಳಿಸಿರ್ಕುಂ ॥ ೩

ವ್ಯಾಸನ ತೋಳ್ಗಪಾಯಮನೊಡರ್ಚಿಸಿ ಭಂಗಕೆ ತಂದುದಾಸ್ಥಳಂ
ವಾಸವಮುಖ್ಯಮಾದಮರಸಂತತಿಗಾವಗಮಾರಯಲ್ಕರಂ ।
ಕ್ಲೇಶಮನೆಯ್ದೆ ಪುಟ್ಟಿಸುವುದೀಸ್ಥಳಮಿಂತಿದನೀಕ್ಷಿಸುತ್ತುಮಿಾ
ಕಾಶಿಯನೇಕೆ ಬಣ್ಣಿಪುದೊ ಸಜ್ಜನವೃಂದಮಿಳಾತಳಾಗ್ರದೊಳ್ ॥ ೪

ಮುನಿಯಾಗಿರ್ದಳಿದವರಂ
ಮನವೊಲ್ದಂದದೊಳೆ ನಡೆದು ಮಡಿದವರಂ ಸರಿ ।
ಯೆನಿಸುವುದೀಕ್ಷೇತ್ರಂ ಸ
ಜ್ಜನರಿಂತಿದನೇಕೆ ಪೊಗಳ್ವರೋ ಧಾರಿಣಿಯೊಳ್ ॥ ೫

---

1 ರಕ್ಷಿಪ್ಪುದೆಮ್ಮಂ. 2 ನಾವವಂಬಣ್ಣಿಸುವಂ

ಸತ್ತ್ರವನೆ ಸಾಯುದವನಾ
ಗ್ಗತ್ತ್ರಿರ್ಪಂ ಸಾಯುದವನ ಸತ್ತ್ರವನಪ್ಪಂ ।
ಮತ್ತೀಕ್ಷೇತ್ರದೊಳನಿಶಂ
ಬತ್ತರಿಸಲ್ಬಲ್ಲನಾವನದಱುನ್ನತಿಯುಂ ॥ ೬

ಗಡೆಯಾದತ್ತುರುಮಂದರಂ ಕನಕಶ್ಶೈಲಂ ಚಾಪಮಾದತ್ತುಬೆ
ಳ್ಪಬಿವಂ ತಾಳ್ದಿದುದೆಯ್ದೆ ರೌಪ್ಯನಗವೆಂದಿಂತಂತು ಮೂದಾಣವುಂ ।
ಪಡಿದೋರಂತವನೆಯ್ದೆ ಬಿಟ್ಟು ಸತತಂ ವಿಶ್ವೇಶ್ವರಂ ಕಾಶಿಯಾ
ಪೊಬಲೊಳ್ಸಂತತಮಿರ್ಪನಾಪುರಮನಾವಂ ಬಣ್ಣಿಪಂ ಧಾತ್ರಿಯೊಳ್ ॥ ೭

ಅದಱೊಳ್ಮಣಿಕರ್ಣಿಕೆಯೆಂ
ಬುದದೊಂದೇ ತೀರ್ಥಮಾವಗಂ ತಳೆದವರ್ಗಂ ।
ಮುದದಿಂ ಮುಳುಂಗಿದವರ್ಗಂ
ಮದನಾಂತಕಪದವನೀವುತಿರ್ಪುದಜಸ್ರಂ ॥ ೮

ವ॥ ಅಲ್ಲದೆಯುಂ,

ಪರದಾರಾಪೇಕ್ಷೆಯಿಂದಂ [1] ಪಿರಿದೆನಿಸುವ [2] ಪಾಪಕ್ಕೆ ಸಂದಿರ್ದ ಲಂಕೇ
ಶ್ವರನೂರಂ ಪೊರ್ದಿಕೊಂಡಿರ್ದುರುತರದುರಿತೋಚ್ಚಾಟನಕ್ಕೆಂದು ಕಾಶೀ ।
ಪುರಕೇಟ್ಟಂದೊಪ್ಪುವಾ ಸಾಗರವೆನೆ ಪಿರಿದುಂ ಗುಣ್ಪಿನಿಂ ಪೆಂಪಿನಿಂ ಪೆ
ರ್ದೆರೆಯಿಂ ಕಣ್ಗೆಡ್ಡಮಾಗೊಪ್ಪುವುದನವರತಂ ನಾಡೆ ಗಂಗಾಪ್ರವಾಹಂ ॥ ೯

ವ॥ ಮತ್ತಮಾಗಂಗೆ,

ಬಗೆಯಲೂಱಲ್ದಧೋಗತಿಗೆ ತಾನೆಡೆಯಾಗುತೆ ಸೇವಿಪರ್ಗೆಯೂ
ರ್ಧ್ವಗತಿಯನೀವುತಂ ಬಹುಳಭಂಗಕೆ ತಾನೊಡಲಾಗಿ ತನ್ನ ಪೊ ।
ರ್ದುಗೆವಿಡಿದಿರ್ಪ ಮಾನವರ್ಗಭಂಗತೆಯುಂ ನೆಱೆಮಾಡುತಿಂತು ಪೆ
ರ್ಮೆಗೆನೆಲೆಯಾಗಿ ಕಾಶಿಗೆಣೆಯಾಗೆಸೆದಿರ್ಪಳಿದೇಂ ವಿಚಿತ್ರಮೋ ॥ ೧೦

ಪ್ರತಿಕೂಲೋನ್ನತೆಯಾಗಿಯುಂ ಬಿಡದೆ ತನ್ನಂ ಸೇವಿಪರ್ಗೆಯ್ದೆ ಸ
ದ್ಗತಿಗಿಂಬಾದನುಕೂಲೆ ನಾಡೆ ವಿಷಮಂ ತಾಳ್ದೊಪ್ಪುತಿರ್ದುಂ ಸದಾ ।
ಮೃತಮಂ ಬೇಟ್ಪವರ್ಗೀವ ದಾನಿಯೆನಿಸುತ್ತೋರಂತೆ ರಂಜಿಪ್ಪಳಾ
ಕ್ಷಿತಿಯೊಳ್ಕಾಶಿಗೆ ಭೂಷೆಯಾಗಿ ಪರಿತಂದಾಗಂಗೆಯಾನಂದದಿಂ ॥ ೧೧

1 ಬರಿದೆನಿಸುವ. 2 ಪಾಪಿಷ್ಠನಾಗಿರ್ದ.

ತಡಿವಿಡಿದ ತರುವಿತತಿ ಬೇ
ರ್ಸಡಿಲ್ದು ಕರಂ ಗಂಗೆಗೆಯ್ದೆ ಬಾಗಿರ್ಪುವೆನಲ್ ।
ಪೊಡಮಡದರಾರೊ ಚೇತನ
ವಡೆದನರಲ್ಲೋಕದೊಳ್ಮರುನ್ನದಿಗೊಲ್ಪಿಂ ॥ ೧೨

ದರುಶನದಿಂ ಬ್ರಹ್ಮಪದಂ
ಪರುಶನದಿಂ ವಿಷ್ಣುಸಂಪದಂ ಮಸ್ತಕದಿಂ ।
ಧರಿಸಲ್ಕಶಂಕರಪದಮದು
ದೊರೆಕೊಳ್ವುದು ಸರ್ವವಿಷ್ಟಪಕ್ಕಾನದಿಯಾ ॥ ೧೩

ತೀರದಪದಮಂ ಮುದದಿಂ
ಸೇರಿದಮಾತ್ರಕ್ಕೆ ಮಾನಿಸರ್ಗೊಳ್ಪಿಂದಂ ।
ತೀರದಪದಮಂ ಕುಡುತುಂ
1 ವಾರಾಣಸಿಯಲ್ಲಿ ಗಂಗೆ ಕಂಗೆಸೆದಿರ್ಪಳ್ ॥ ೧೪

ಈಪರಿಯೊಳಗೊಪ್ಪುವ ಗಂ
ಗಾಪರಿವೃತಿಯಿಂ ಸಮಂತು ಸೊಗಸುತೆ ವಿಶ್ವ ।
ವ್ಯಾಪಿಗೆ ನೆಲೆಯೆನಿಸಿದ ಕಾ
ಸೀಪತ್ತನಮೆಯ್ದೆ ಕಣ್ಗೆ ರಂಜಿಸುತಿರ್ಕುಂ ॥ ೧೫

ವ॥ ಇಂತಿರ್ಪ ಕಾಶಿಯ ಪುರೋಪಕಂಠದೊಳ್ ಶೃಂಗಾರವನವೊಪ್ಪಿದುರ್ದ ದೆಂತೆಂದೊಡೆ,

ಧನದನ ಚೈತ್ರರಥಂ ಸುರ
ಪನ ನಂದನಮೆಯ್ದೆ ಸಾರ್ದು ಕಾಶಿಯ ತಳದೊಳ್ ।
ಮನೆಯಂ ಮಾಪ್ಪೊಡೆ ಬಂದುವೊ
ಯೆನೆ ಬಹಿರುದ್ಯಾನಮಾವಗಂ ಸೊಗಯಿಸುಗುಂ ॥ ೧೬

ಬಿರಿದಿರ್ಪೊಳ್ಪೂಲರ್ಗಂಪಿನಿಂ ಲಲಿತವಲ್ಲೀಲಾಸ್ಯದಿಂ ತುಂಬಿಯಿಂ
ಚರದಿಂದಂ ತನಿವಣ್ಗಳಿಂ ನೆಟಲ್ಗಳಿಂದಾನಂದನಂ ನೋಡೆ ಸಂ ।
ಚರಿಸುತ್ತಿರ್ಪ ಮಹಾಜನಕ್ಕನುದಿನಂ ಪಂಚೇಂದ್ರಿಯಕ್ಕಾವಗಂ
2 ಪಿರಿದುಂ ತೃಪ್ತಿಯನೀವುತೆಯ್ದೆ ಸೊಗಸುತ್ತೊಪ್ಪಿದುರ್ದಾತಾಣದೊಳ್ ॥ ೧೭

1 ವಾರಣಸಿ. 2 ಬಲಿದುಂ.

ಇಂದಿರನೀವನಸ್ಥಳದೊಳುದ್ಭವಿ [1] ಸಿರ್ಪನವೀನವಸ್ತುವಂ
ಕುಂದದೆ ತಂದು ತನ್ನ ಬನದೊಳ್ಸಲೆ ನಟ್ಟುಡಱಿಂದೆ ಸಂತತಂ ।
ತಂದೆಯಿದಾದುದಾಬನಕದಲ್ಲದೊಡಾತನ ತೋಂಟಕಾವಗಂ
ನಂದನನಾಮವೆಂಬುದದು ಸುಮ್ಮನೆ ಬಂದುದೆ ಭೂತಳಾಗ್ರದೊಳ್ ॥ ೧೮

[2] ಅಳಿಗಾಡುಂಬೊಲನದುಗಿಳಿ
ಗಳಭೋಜನಶಾಲೆ ಕೋಗಿಲೆಗಳೌತಣಧಾ ।
ನಿಳಯಂ ಹಂಸಕ್ರೀಡಾ
ಸ್ಥಳವೆನಿಸುತ್ತೆಯ್ದಿಯುಪವನಂ ರಂಜಿಸುಗುಂ ॥ ೧೯

ಇಂತೆಸೆದಿರ್ಪುಪವನವೋ [3]
ರಂತಾಪರಿವೇಷದಂತೆ ಬಳಸಿರೆ ತಾರಾ ।
ಕಾಂತನವೋಲ್ಕಣ್ಗೆಸೆವುದ
ನಂತಕಲಾವಿಶದಮಾಗಿ ಕಾಶೀನಗರಂ ॥ ೨೦

ತ್ರಿಭುವನಪತಿವಿಶ್ವೇಶ್ವರ
ವಿಭುವಂ ಬಲಸದ್ಮದವರ್ಗಳೋಲ್ಕೈಘೊಡೆಯು ।
ಬ್ಜಭವಂ ರಚಿಸಿದ ಪಥವೆನೆ
ವಿಭವದೊಳಾಪುರದಗಟ್ಟರಂ ರಂಜಿಸುಗುಂ ॥ ೨೧

ಎನ್ನಂ ತಾಂ ಬಿಟ್ಟೊಡೆ ನಾಂ
ತನ್ನಂ ಬಿಡಲಾರೆನೆಂದು ಶಿವನಿರ್ದಲ್ಲಿಗೆ ।
ಪೊನ್ನಗಿರಿ ಬಂದು [4] ನೆಲಸಿತು
ಮುನ್ನವೆನಲ್ಪೊನ್ನಕೋಂಟೆ ಕಣ್ಗೆಸೆದಿರ್ಕುಂ ॥ ೨೨

ಹಿಂದೆ ದಿವಾಕರಂಗೆ ಪಥಮಂ ಕುಡದುರ್ಬಿದ ವಿಂಧ್ಯಪರ್ವತಂ
ಬಂದುಱೆ ವಿಶ್ವವಲ್ಲಭನನರ್ಚಿಸಿ ಕುಂಭಜನಾಜ್ಞೆಡಾಳ್ದವೆಯ್ ।
ಗುಂದನದಂ ಕಟಲ್ಚಿ ಬಹುರೂಪದೊಳಾಸ್ಥಳದಲ್ಲಿ ನಿಂದುದೋ
ಎಂದೆನೆ ಗೋಪುರಂಗಳಧಿಕೋನ್ನತಿಯಿಂದೆಸೆದಿರ್ಪುವಾವಗಂ ॥ ೨೩

ಸದಮಲಸೂರ್ಯವೀಧಿ ಬಹುರಾಜಸಮೂಹದ ಪೆಂಪಿನಿಂದವೊ
ಪ್ಪಿದುದುಱೆ ರಾಜವೀಧಿ ಸಲೆ ಸೂರವಿತಾನದೆ ರಂಜಿಸಿರ್ಪ ಸಂ ।

---

1 ಸೊಪ್ಪುವಪೂರ್ವ. 2 ಅಳಗಳಾಡುಂಬೊಲಂಗಿಳಿ. 3 ದೋ.
4 ನೆಲಸಿ।ರ್ದನ್ನವೆನಲ್.

ಪದದೊಳಜಸ್ರವೊಪ್ಪುವುದಿದೇಂ ವಿಪರೀತವೊ ಕಾಶಿಯಾ ಮಹ
ತ್ಪದಪರಿಯಂ ಪೊಗಳ್ವೊಡರಿದಲ್ತೆ ಬಟಿಕ್ಕದನೆಂತು ಬಣ್ಣಿಪೆಂ ॥ ೨೪

ರೋಹಣಗಿರಿಯೊಂದೇ ಪಲ
ರೂಹಂತಾಳ್ದೊಪ್ಪುವಂತೆ ಕಣ್ಗೆಸಿದೀವು ।
ತ್ತಾಹುರದೊಳ್ಮಣಿಮಯಮ
ಪ್ರಾಹರ್ಮ್ಯವಿತಾನವೆಯ್ದೆ ಸೊಗಯಿಸುತಿರ್ಕುಂ । ೨೫

ಕನಕದಹರ್ಮ್ಯರೋಚಿಯನೆ ಚೆಂಬಿಸಿಲೆಂದುಜಿ ರಾತ್ರಿಯುಲ್ಲಿ ಕೋ
ಕನಿಕರವೆಯ್ದೆ ಕೂಡಿ ನಲವಂ ತಳೆದಿರ್ಪುವು ಬಳ್ಳಿವಾಡದಾ ।
ಘನತರರೋಚಿಯಂ ಬಿಡದೆ ಕೌಮುದಿಗೆತ್ತು ಚಕೋರಪಕ್ಷಿಗ
ಳ್ದಿನದೊಳತೀವ ಸಂಭ್ರಮದಡೊಳೊಪ್ಪುವುವಾಪುರದೊಳ್ನಿರಂತರಂ ॥ ೨೬

ವಡಬಾಗ್ನಿಜ್ವಾಲೆಯಿಂದಂ ಸುಡದುಟಿಯುವಿವೆಂದಟ್ಕ ರತ್ನಾಕರಂ ತ
ನ್ನೊಡಲೊಳ್ಪುಟ್ಟಿರ್ದ ನಾನಾನಪಮಣಿಗಳಸಂದೋಹಮಂ ತಂದುತಾ ನೀ ।
ಯೆಡೆಯೊಳ್ಬೈತಿಟ್ಟನೆಂಬಂತಡೆವಿಡದೆ ಕರಂ ರಂಜಿಸುತ್ತಿರ್ಪುವಾಗಳ್
ಕಡುರಯ್ಯಂಬೆತ್ತಮಾಣಿಕ್ಯದಮಟಿಗೆಗಳಾ ಕಾಶಿಯೊಳ್ಪೆಂಪಿನಿಂದಂ ॥ ೨೭

ಸಲೆ [1] ಎನ್ನಾಪ್ತನೆನಿಪ್ಪ ಶಂಭು ಒಹುರೂಪಂತಾಳ್ದು ಸಂತೋಷದಿಂ
ನೆಲೆಗೊಂಡಿರ್ದಪನಾತನಂತೆ ವಿವಿಧಾಕಾರಂಗಳಿಂದೊಪ್ಪುತೀ ।
ಸ್ಥಲದೊಳ್ತೋರ್ಪೆನೆನುತ್ತೆ ಯಕ್ಷಪತಿ ನಾನಾರೂಪನಾಂತಂತೆಯು
ಜ್ವಲಿಸುತ್ತಿರ್ಪರನೇಕಹೇಮವಣಿಜರ್ಮಂತಿರ್ಪರ್ಕೈ ರಾಜಿಯಿಂ ॥ ೨೮

ಗಗನಮದಾವಗಂಬಿಡದೆ ದೋಷದೊಳಾಚರಿಸಿರ್ಪ ಸೋಮನಿಂ
ದಗಲದೆ ರಂಜಿಸಿರ್ಪುದದು ದೋಷವಿವರ್ಜಿತಸೋಮನಿಂದಮಿ ।
ನಗರಿಯದೆಯ್ದೆ ರಂಜಿಪುದದಿಂತಿದೆ ಸುಸ್ಥಳವೆಂದು ತಾರೆಗ
ಳ್ಮಿಗೆ ನೆಲಸಿರ್ಪ ಪಾಂಗೊ ಎನೆ ಮೌಕ್ತಿಕಪಣ್ಯಮನಂತವೊಪ್ಪುಗುಂ ॥ ೨೯

ವ॥ ಮತ್ತಂ,

ಅಂಬರಸಮುದಯವೆಯ್ದೆದಿ
ಗಂಬರನಂ ಮುಡದೆ ಸಾಂಬರನ [2] ಮಾಳ್ಪನೆನು ।
ತ್ತಂ ಬಂದುಪೊಕ್ಕು [3] ದೆನೆ ಚಿ
ತ್ರಾಂಬರಸಮುದಯದ ಪಸರ [4] ಮದುರಂಜಿಸುಗುಂ ॥ ೩೦

---

1 ನನ್ನಾಪ್ತ. 2 ಮಾಳ್ಪಪೆನು. 3 ವೆನೆ. 4 ಮಪ್ಪು.

ಅಜರಾಮರತ್ವಮಂ [1] ರೋ
ಗಿಜನಕೆ ಕೈಸಾರ್ಚುತೆಯ್ದೆ ಗಂದಿಗವಸರಂ ।
ಅಜಿನಾಂಬರನುರುಪದಸರ
ಸಿಜದಂದದಿನೆಸೆವುತಿರ್ಪುವಾಪಟ್ಟಣದೊಳ್ ॥ ೩೧

ವ॥ ಅಲ್ಲಿಂಬಟಿಯಲ್ಲಿ,

ಮುಡಿಯೊಲೆದಾಡೆ ಛಾಳತಳದಲ್ಲಿ ಕುರುಳ್ಕುಣಿದಾಡೆ ಸಂತತಂ
ನಡು ನಸು ಬಾಗೆ ಘರ್ಮ ಜಲವಂತದು ಮೂಡೆ ಬೃಹತ್ಪಯೋಧರಂ ।
ಬಿಡದಲುಗಾಡೆ ಮೇಣಪರಿಯೋಗದನಾರಿಯರಂತೆ ಚಿತ್ತಮಂ
ಪಿಡಿದೆಸೆದಿರ್ದರಲ್ಲಿ ಮಿಗೆ ಘಟ್ಟಿ [2] ಮಗುಟ್ಟುವ ಘಟ್ಟಿವಟ್ಟಿಯರ್ ॥ ೩೨

ವನಿತಾಜನವೊಲವಿಂ ಚಂ
ದನವಂ ತೇವಲ್ಲಿ ಮುತ್ತಿದಳಿವಿಂಡಿಂ ತ ।
ತ್ತನುಗಳ್ಕಾರ್ಮುಗಿಲೆಡೆಯೊ
ಳ್ಮಿನ ಗುವ ಮಿಂಚುಗಳ ತೆರದೆ ರಂಜಿಸುತಿರ್ಕುಂ ॥ ೩೩

ಬಾಲಮೃಗಾಕ್ಷಿಯರ್ಮುದದೊಳಾಪುರದಲ್ಲಿ ನವೀನಮಲ್ಲಿಕಾ
ಮಾಲೆಯನಾಂತು ನಿಂದಪದದೊಳ್ಮರಿದುಂಬಿಗಳಟ್ಟಿಯಿಂದಮಾ ।
ಮಾಲೆಗೆಟಿಂಗೆ ಮೇಣ್ಕರಿಯಮಲ್ಲಿಗೆಯೊಳ್ಸರವಾಂತು ಬಂದನಾ
ಕಾಲಯನಾರಿಯರ್ಕಳೆನೆ ಕಣ್ಗೆಸೆವರ್ಸಲೆ ಚೌವಟಂಗಳೊಳ್ ॥ ೩೪

ಪರಿರಂಜಿಪ್ಪವಿಶಾಲನೇತ್ರೆಯರ ಕೈಯೊಳ್ಸಂತತಂ ತೋರ್ಪ ಬಂ
ಧುರಪುನ್ನಾಗದಮಾಲೆ ನಾಡೆ [3] ಗಣಿಕಾಸಂಮೇಳದಿಂದೆಯ್ದೆ ತ ।
ತ್ಪುರದೊಳ್ರಾಜಿಸುತಿರ್ಪು [4] ದಿಂತು ಗಣಿಕಾ [5] ಸಂಮೇಳದಿಂದಾವಗಂ
ವರಪುನ್ನಾಗವಿತಾನವೆಂಬುದದು ತಾನೇನೊಪ್ಪ [6] ದೇನಿರ್ಕುಮೋ ॥ ೩೫

ವ॥ ಮತ್ತಮಾಪೊಟಲೊಳ್,

ಹಿಂದೆ ರತಿರಮಣನಂ ಮುಳಿ
ಸಿಂದಂ ಕೊಂದಥವನಾಗಳವನುರುಬಲವಂ ।
ತಂದಿಕ್ಕಿದ [7] ಸೆರೆವನೆಯೋ
ಎಂದೆನೆ ಸೊಗಸಿತ್ತು ಸೂಳೆಗೇರಿಯಜಸ್ರಂ ॥ ೩೬

---

1 ಸೇವ್ಯಜನಕೆ. 2 ಮುಗುಟ್ಟುವ. 3 ಗಣಿಕಾಮೇಳಂಗಳಿಂದೆಯ್ದೆ.
4 ವಿಂತು. 5 ಮೇಳಂಗಳಿಂ. 6 ದಿಂತಿರ್ಪುದೇ. 7 ಸೆರೆಸಾಲೆಯೊ.

ಫಣಿಲೋಕದಂತೆ ಬೊಜಗರ
ಗಣದಿಂದಂ ಕಾನನಂಗಳಂತೆಯಜಸ್ರಂ ।
ಗಣಿಕಾಸಮೂಹದಿಂದಂ
ಪೆಣೆದಿರ್ಪುದು ಸೂಡೆಗೇರಿಯಾಪಟ್ಟಣದೊಳ್ ॥ ೩೭

ವ॥ ಮತ್ತಮಾಪಟ್ಟಣಮಧೋಕ್ಷಜಾವಾಸವೆಂದು ವೈಕುಂಠಮನಜಾವಾಸ [1] ವೆಂದು ಸತ್ಯಲೋಕಮಂ, ಗೋತ್ರಾರಿಗಾಶ್ರಯಮೆಂದಮರಾವತಿಯಂ, ಯಕ್ಷೇಶ್ವರಂಗಾಗರಮಾಯ್ತೆಂದಳಕಾಪುರಮನಕ್ರಮಚರಿತರ್ಗಿರವಾದುದೆಂದು ಬಲಿಸದ್ಮಮಂ ಪಟಿವುತ್ತಿರ್ಪುದಂತುವ ಲ್ಲದೆಯುಂ,

ಸಿರಿಯಿಂದಿಂಗಡಲಂತೆ ವಿಶ್ವಪತಿಯಿಂದಂ ಸ್ವಚ್ಛಮಾಹೇಶ್ವರೋ
ತ್ಕರಚಿತ್ತಂದೊಲತೀವ ಪುಣ್ಯಜನದಾವಾಸಂಗಳಿಂ ಕಿನ್ನರೇ ।
ಶ್ವರದುರ್ಗಂಬೊಲನೂನಸದ್ವಿಬುಧರಿಂ ಸಗ್ಗಂಬೊಲೋರಂತೆ ತ
ತ್ಪುರಮಿಾಧಾತ್ರಿಗೆಭೂಷೆಯಾಗಿ ಜಗಮಂ ತಾಟಿರ್ದ್ದಪುದಿಂತಾವಗಂ ॥ ೩೮

ಇಂತಪ್ಪ ಪುರಕಧೀಶಂ
ಶಾಂತಂ ಶ್ರೀವಿಶ್ವನಾಥನಾತನ ವಸತಿಯ ।
ಅಂತಿಂತೆಂದುಸಿರ್ವೊಡಜಂ
ಗಂ ತಾನರಿದದರ ಪೆಂಪನಾರ್ಬಣ್ಣಿಸುವರ್ ॥ ೩೯

ಪಳುಕಿನಪಾಕಲಂ ಬಳಸಿ ರಂಜಿಸುತಿರ್ಪ ಮಹೇಶಗೇಹದೊ
ಳ್ಬಳಿಸ ವ ರುದ್ರಕನ್ಯೆಯರ ಮಾರ್ಪೊಳೆಪಾಮುಗಿಲಲ್ಲಿ ನಾಡೆಯು ।
ಜ್ವಳಿಸಿ ವಿರಾಜಿಸಿತ್ತು ನೆಗಟ್ಟಂಗಡಲೊಳ್ದೆರೆಯೊಳ್ಸಮಂತು ಸಂ
ಗೊಳಿಸಿ ವಿರಾಜಿಸಿರ್ಪ ಜಲದೇವಿಯರಾಕೃತಿಯಂತೆ ಸಂತತಂ ॥ ೪೦

ನಾಲ್ಮೊಗನೊಲವಿಂತನ್ನಯ
ನಾಲ್ಮೊಗಕೊಂದೇ ಕಿರೀಟಮಂ ಸಾರ್ಚಿದವೊ ;
ಲ್ನಾಲ್ಮೊಗಸಾಲೆಯ ಸೌಧಂ
ನಲ್ಮೆಯನೀವುತ್ತುಮಿರ್ಪು [2] ಪುರೆ ನಾಲ್ದೆಸೆಯೊಳ್ ॥ ೪೧

ಅರಮನೆಯಂ ಬಳಸಿದಗಣ
ವರರುಪ್ಪರಿಗೆಗಳ ಮಧ್ಯದೊಳ್ಯವನಿರ್ಪೀ ।

1 ಮಾದುದೆಂದು. 2 ಮಾನಾಲ್ದೆಸೆಯೊಳ್.

ಯುರುಹರ್ಮ್ಯಂ ಮೆರೆದುದು ಕುಲ
ಗಿರಿಗಳ ಮಧ್ಯದೊಳೆ ತೋರ್ಪ ಹೇಮಾದ್ರಿಯವೋಲ್ ॥ ೪೨

ಇಂತಿರ್ಪರಮನೆಯೊಳುಮಾ
ಕಾಂತಂ ಶಕ್ತಿತ್ರಯಕ್ಕೆ ನೆಲೆಯಾಗುತ್ತೋ ।
ರಂತೆ ಜಗತ್ತ್ರಯಮುಮಂ ಸಲೆ
ಸಂತಸದಿಂ ಪಾಲಿಸುತ್ತೆ ಕಣ್ಗೆಸೆದಿರ್ಪಂ ॥ ೪೩

ಸುರಶೈಲಂ ಚಾರುದುರ್ಗಂ ಸೊಗಯಿಪ ಪದಿನಾಲ್ಕುಂ ಜಗಂ ದೇಶ [1] ಮೇಗಂ
ವರಧರ್ಮಂ ಕೋಶಮಾಪ್ತರ್ಪರಿಕಿಸೆ ನಿಜಭಕ್ತವ್ರಜಂ ದಂಡನಾಥಂ ।
ಸ್ಮರತಾತಂ ನಾಡೆ ನಾನಾಸುರತತಿಬಲವಂತಾಗೆ ಸಪ್ತಾಂಗರಾಜ್ಯೋ
ತ್ಕರವುಂ ತಾಂ ಪಾಲಿಸುತ್ತಾ ಪುರಪತಿ ಶಿವನೊಪ್ಪಿರ್ದನಾನಂದದಿಂದಂ ॥ ೪೪

ಮಂದರಶೈಲಂ ಶಯ್ಯಾ
ಮಂದಿರಮದು ರಜತಗಿರಿಯೆ ಮಹಿತಾಸ್ಥಾನಂ ।
ಸ್ಕಂದಂ ಯುವರಾಜಂ ಗಣ
ವೃಂದಂ ವಿಶ್ವಾಸಿವಿತತಿಯಹಿಕಂಕಣನಾ ॥ ೪೫

ಎನಸುಂ ಮಂತ್ರಿಗಳಾಗಿ ರಂಜಿಸುವರೋರಂತಾನವಬ್ರಹ್ಮರೆಂ
ದೆನಿಪ [2] ಜ್ಯೌತಿಷವೇತ್ತರಾಗೆಸೆದಪರ್ಪೂರ್ಣದ್ವಾದಶಾದಿತ್ಯರೇ ।
ಅನಿಶಂ ಸಂದ ಪುರೋಹಿತಂ ಮುದದೆ ತಾನಾಗಿರ್ಪನಬ್ಜೋದ್ಭವಂ
ವಿನಯಂಬೆತ್ತ ಬುಧರ್ಕಳೆಯ್ದೆ ನಿಗಮಂಗಳ್ನಾಡೆ ವಿಶ್ವೇಶನಾ ॥ ೪೬

ಅಡಿಗೆಯವಂ ಪವನಸಖಂ
ಕುಡಿನೀರ್ಗುತ್ತಿಗೆಯನಾಂತವಂ ಯಾದಃಪತಿ ।
ಅಡಪವಳಂ ದೇವೇಂದ್ರಂ
ಪಡೆವಳ್ಳಂ ನಂದಿನಾಥನಜಿನಾಂಬರನಾ ॥ ೪೭

ವರಭಂಡಾರದವಂ ತಾಂ
ನರರಾಣ್ಮಂ ರನ್ನವಾವುಗೆಯನಾಂತೊಲವಿಂ ।
ಚರಣಮನೋಲೈಪಂ ದಿ
ಗ್ವರನೀಶಾನ್ಯಂ ಸ್ಮರಾದ್ರಿಪವಿ ಪರಶಿವನಾ ॥ ೪೮

ವ॥ ಮತ್ತಂ,

---

1 ಮೇಘಂ. 2 ಜ್ಯೋತಿಷರಾಗಿತೋರ್ಪರೊಲವಿಂದಂದ್ವಾದಶಾದಿತ್ಯರಂ। ತ.ನಿಸಂ.

ಸಲೆ ವಿಶ್ವೋತ್ಪತ್ತಿಯಂ ಮಾಡುವ ಪನತರಸಾಮರ್ಥ್ಯಮಂ ಕಂಜಪುತ್ರಂ
ಗೊಲವಿಂ [1] ದೀಯುತ್ತೆ ಮತ್ತಾ ಜಗಮನಿರದೆ ರಕ್ಷಿಪ್ಪ ಸೌಭಾಗ್ಯವೊಂದಂ ।
ಜಲಜಾಕ್ಷಂಗಿತ್ತದಂ [2] ಸಂಹರಿಪ ಕೆಲಸಮಂ ರುದ್ರದೇವಂಗೆ ಕೊಟ್ಟು
ಜ್ವಲತ್ತೇಜೋಮೂರ್ತಿ ವಿಶ್ವೇಶ್ವರವಿಭು ಪರಮಾನಂದದಿಂದೊಪ್ಪುತಿರ್ದಂ ॥ ೪೯

ವ॥ ಮತ್ತಮಾಪರಮೇಶ್ವರನಾಜ್ಞಾಸಾಮರ್ಥ್ಯಮೆಂತಿರ್ದುದೆಂದೊಡೆ,

ಸುರಪತಿಯತಿವೃಷ್ಟಿಗಳಂ
ಕರೆಯಲ್ಕಟ್ಟುವನಹಸ್ಕರಂ [3] ಖರವೆನಿಪಾ ।
ಕಿರಣಂಗಳಿಯೆ [4] ಲ್ಕಣ್ಮಂ
ಗಿರಿಜಾಪ್ರಿಯವಿಶ್ವನಾಥನಾಜ್ಞಾಬಲದಿಂ ॥ ೫೦

ಮರುತಂ ನಿರ್ಭರದಿಂ ಸಂ
ಚರಿಸಲ್ಕಟ್ಟುವನಹೀಶನೆಲ್ಲಾಗಳ್ತಾಂ ।
[5] ಶಿರದೊಳ್ತಳೆದಿರ್ಪಂ ಮೇಣ್
ಧರೆಯಂ ವಿಶ್ವಾಧಿನಾಥನಾಜ್ಞಾಬಲದಿಂ ॥ ೫೧

ಕಡಲನತಿತೀವ್ರದಿಂದಂ
ಕುಡಿವೊಡೆ ತಾನಟ್ಟುತಿರ್ಪನಾವಡಬಂ ಮೇ ।
ಣ್ತಡಿಯಿಂ ಮಿಕ್ಕಂಬುಧಿಯೊಂ
ದಡಿಯಂಬರಲ [6] ಣ್ಮನಭವನಾಜ್ಞಾಬಲದಿಂ ॥ ೫೨

ಜ್ಞಾನವಿರಾಗಮನತಿಸ
ನ್ಮಾನದೆ ಕೈವಲ್ಯವಧುವೆನಿಪ್ಪಾಭಕ್ತಿಯು ।
ನಾನತಜನಕೀವುತೆಪರ
ಮಾನಂದದೊಳಿರ್ದನಾಸದಾಶಿವನೀಶಂ ॥ ೫೩

ವ॥ ಇಂತತಿಶಯಮಾದ ರಾಜವೈಭವದಿಂದೊಪ್ಪುತಿರ್ಪ ಕಾಶೀಪುರಾಧೀಶ
ರನಂ,

ನೆಗಟ್ದ ವಿರಿಂಚಿವಿಷ್ಣುಗಳಸಂಪದಮಂ ಭಜಕರ್ಗೆ ಮಾಟ್ಪ ಪೆ
ರ್ಚುಗೆ ತನಗಿರ್ದುಮೆಲ್ಲರಱಿಯಲ್ಮಿಗೆ [7] ದಟ್ಟದರಿದ್ರನಂತೆ ಕಾ ।

---

1 ದಂಪಾಲಸುತ್ತಾ. 2 ಸಂಹರಿಸು ವಗನಮಂ. 3 ತೀಕ್ಷ್ಣವೆನಿಪ್ಪಾ.
4 ಲ್ಕಮ್ಮಂ. 5 ಶಿರದೊಪ್ಪೆಸೆದಿರ್ಪಂ 6 ಲಮ್ಮ. 7 ದಷ್ಟ.

ಸಿಗೆ ಮನಪಿತ್ತನೆಂದಮಳಕೀರ್ತಿನಿತಂಬಿನಿ ದೂರುತಿರ್ಪಳೀ
ಜಗದೊಳಹೀಂದ್ರವಿಷ್ಟಪದೊಳಾವಗಮೊಪ್ಪುವ ನಾಕಲೋಕದೊಳ್ । ೫೪

ಇಂತಧಿಕಮಹಿಮೆಗಿಂಬಾ
ದಂತಕಹರ ವಿಶ್ವನಾಥನಾಕಾಶಿಯೊಳೋ ।
ರಂತಿರ್ದಂ ನಿರ್ದೋಷ
ಸ್ವಾಂತದೊಳೊಲ್ದಿರ್ಪತೆರದೊಳತಿಮುದದಿಂದಂ ॥ ೫೫

ಇದುಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹಮೊಲ್ದುಪು
ಟ್ಟಿದತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದುಪರಮಾರ್ಥಸಾರವಿದುನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆಱೆದಿರ್ಪುದು ಭೂತಲಾಗ್ರದೊಳ್ ॥ ೫೬

ಮುಳಿಯಲಗೇಂದ್ರಜಾತೆ ತಲೆಯಿಂ ಸರ ಪಿಂಗದಗಂಗೆಗಾಕ್ಷಣಂ
ಕಳವಳಮೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ ।
ತುಟಿಲ 1 ನೊಡರ್ಚಲಾಲ್ದು ಮೊಗದೊಳ್ಮೊಗಮಿಕ್ಕುತೆ ಸಂತವಿಟ್ಟು ಬಾಂ
ದೊಳೆಗೊಲವಿತ್ತ ಜಾಣ ಸಲಹೀಜಗಮಂ ಗುರುವಿಶ್ವವಲ್ಲಭಾ ॥ ೫೭

ಉತ್ಸಾಹವೃತ್ತಂ॥ ಗಿರಿಯಮಗಳಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಪರೆದ ರಜಮ 2 ನಿರದೆ ಸವಿದು ತಣಿದು ತನ್ನಲೀಲೆಯಿಂ ।
ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮೀಗಭೀಷ್ಟಮಂ ॥ ೫೮

ಗದ್ಯ॥ ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತ
ಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದ
ಮಧುಕರಾಯಮಾಣ ಶ್ರೀಕಂಠವಂಶಾರ್ಣವಪೂರ್ಣಚಂದ್ರನೆನಿಪ
ಸತ್ಕವೀಶ್ವರ ವೀರಭದ್ರನೃಪಾಲನಿಂವಿರಚಿತಮಪ್ಪ ಶ್ರೀವೀರ
ಭದ್ರವಿಜಯಮಹಾಪ್ರಬಂಧದೊಳ್ಕಾಶೀಕ್ಷೇತ್ರ
ಮಾಹಾತ್ಮ್ಯ ತತ್ಪುರವರ್ಣನಂ
ನಾಯಕಾಭ್ಯುದಯಂ
ದ್ವಿತೀಯಾಶ್ವಾಸಂ.

---

1 ನೊಡರ್ಚದಾಲ್ದು. 2 ನುಱದೆ.

# ತೃತೀಯಾಶ್ವಾಸಂ

ವರನೇತ್ರತ್ರಯಮಿರ್ದು೯ಂ
ಗಿರಿಜಾಸಂಶ್ಲೇಷಪಾರವಶ್ಯದ ಭರದಿಂ ।
ದರೆಗಣ್ಣನಾಗಿ ಚಿತ್ರ
ಕ್ಕಿರವೆನಿಸಿದ ವಿಶ್ವನಾಥನೀಗಭಿಮತಮಂ ॥ ೧

ಈಪರಿಯಲ್ಲಿ ವಿಶ್ವಪತಿ ಸರ್ವಜನಂಗಳನೆಯ್ದೆ ಪಾಲಿಸು
ತ್ತಾ ಪರಿತೋಷದಿಂದಖಿಳವೈಭವದಿಂದತಿಸೌಖ್ಯದಿಂದೆ ಕಾ ।
ಶೀಪುರಿಯಲ್ಲಿ ರಂಜಿಸುವಿನಂ ನಡೆತಂದುದು ಚೈತ್ರಮಾಸಮು
ದ್ದೀಪನಕಾರಿ ಭೋಗಿನಿವಹಕ್ಕೆ ವಿಯೋಗಿಗೆ ವೈರಿ ತಾನೆನಲ್ ॥ ೨

ಲಲಿತಾಮ್ರಂ ಛತ್ರಂ ಕೋ
ಕಿಲನಿನದಂ ಭೇರಿ ಪೂಗಪುಷ್ಪಂ ಚಮರಂ ।
1 ಗಿಳಿಗಳ್ಗಾಯಕರೆನೆ ಕಂ
ಗೊಳಿಸಿರ್ಪ೯ಂ ರಾಜವಿಭವದೊಳ್ಮಧುರಾಜಂ ॥ ೩

ವ॥ ಆ ಸಮಯದೊಳ್,

ಸರಸಂಬೆತ್ತ ವಸಂತವಲ್ಲಿಯನಿಸಿರ್ಪ೯ಂಭೋಜಪತ್ರಾಕ್ಷಿಯಂ
ನೆರೆದೋರಂತೆ ಬೆಮರ್ತು೯ ನಾಡೆ ಬಳಲ್ದೆಯ್ತುರ್ಪ೯ಂತೆ ಸೌರಭ್ಯದಿಂ ।
ಪಿರಿದುಂ ಶೈತ್ಯದಿನಂತು ಮಂದಗತಿಯಿಂದೆಲ್ಲಾಗಳುಂ ಸೌಖ್ಯದು
ತ್ಕರಮಂ ಬೀರುತೆ ಬಂದುದಾಸಮಯದೊಳ್ತೆಂಗಾಳಿಯಾನಂದದಿಂ ॥ ೪

ವ॥ ಆಗಳ್,

ಮುನಿಗಳವೊಲ್ಭ್ರಮರಹಿತಂ
2 ಘನತರನಾಕಂಬೊಲೆಯ್ದೆ ಸುಮನೋವಾಸಂ ।
ವನನಿಧಿಯಂತುತ್ಕಳಿಕಾ
ಜನನಕ್ಕಿಂಬಾಗಿ ನಂದನಂ ರಂಜಿಸುಗುಂ ॥ ೫

1 ಗಿಳಿಗಳ್ನಿಕ್ಕಿಪರೆನೆ. 2 ಘನತರಸಗ್ಗಂಬೊಲಯ್ದೆ,

ಗಗನಂಬೋಲ್ ಹಂಸಾನ್ವಿತ
ಮಗಗಹ್ವರದಂತೆ ಹರಿಯುತಂ ನೋಡಲ್ ಪ ।
ನ್ನಗಲೋಕದಂತೆವೋಲ್ ಭೋ
ಗಿಗಳಾಶ್ರಯಮಾಗಿಯುಪವನಂ ಕಂಗೊಳಿಕುಂ ॥ ೬

ಜಾತಿಗೆ ಮುದಮಂ ಕುಡದೆ ವಿ
ಜಾತಿಗೆ ನಲವಿತ್ತುದಾವನಂ ಮಧುಗೋಷ್ಠೀ ।
ಪ್ರೀತರ್ದುಷ್ಕೃತಿಗೆಯುಪ
ಖ್ಯಾತಿಗೆ [1] ಬೆದರುವರೆ ಭೂತಲಾಗ್ರದೊಳನಿಶಂ ॥ ೭

ಆ ಸಮಯಕ್ಕೆ ಬಂದು ವನಪಾಲನೆನಿಪ್ಪ ವಸಂತನಾವಗಂ
ಭಾಸುರವಾಂತು ತಂಪುದಳೆದೋಜೆಯೊಳೊಪ್ಪುವ ಪೊನ್ನಪೂಗಳಂ ।
ಸೂಸ:ವವೋಲ್ಸಮಂತು ಪೊಸಸಂಪಗೆಯಿಂ ನವಕರ್ಣಿಕಾರದಿಂ
ದೀಶನಪಾದಪದ್ಮಯುಗಳಕ್ಕುರೆ ಪೂವಲಿಗೆಯ್ದನತ್ತಿಯಿಂ ॥ ೮

ವ॥ ಮತ್ತಮಾವಸಂತಂ ಸಾಷ್ಟಾಂಗಪ್ರಣತನಾಗಿ ಕರಕಮಲಮಂ ಮುಗಿದೆಲೆ ದೇವದೇವಾ ಈಯುಪವನಕ್ಕೆ ಬಿಜಯಂಗೆಯ್ದು ಮದೀಯಪೂಜೆಯಂ ಕೈಕೊಂಡೆನ್ನಂ ಕೃತಾರ್ಥನಂ ಮಾಡಲ್ವೇಳ್ಕೆಂದು ಬಿನ್ನಪಂಗೆಯ್ಯಲದಕ್ಕೊಡಂಬಟ್ಟನಂತಾಭರಣಂಗಳಂ ಚಿತ್ರಾಂಬರಂಗಳಂ ಕೊಟ್ಟವನಂ ಬೀಳ್ಕೊಟ್ಟು,

ಸಿತಶೈಲಾಗ್ರಸ್ಥಕಲ್ಪಾಂಘ್ರಿಪವಮಲಲತಾಯೋಗದಿಂ ತೋರ್ಪವೋಲ್ ಶು
ಭ್ರತೆಯಂ ತಾಳ್ದೊಪ್ಪುತಿರ್ಪಾ ಘನತರವೃಷಭಾರೋಹಣಂಗೆಯ್ದು ಮೇನಾ ।
ಸುತೆಯಂಗಾಶ್ಲಿಷ್ಟನಾಗುನ್ನತಿವಡೆದು ಜನಂ ನೋಡೆ ತಾನಪ್ಸರಸ್ತ್ರೀ
ಶತಲಕ್ಷಂ ಸುತ್ತಿಯೋಲೈಸುತೆ ಬರೆ ನಡೆದಂ ನಂದನಕ್ಕಿಂದುಜೂಟಂ ॥ ೯

ಶರದಭ್ರಂ ನೋಡೆ ದೇವಾಪಗೆಯುರುಜಲಮಂ ಸೂಸುತಿರ್ದಪ್ಪುದೆಂಬಂ
ತಿರೆ ಮುಕ್ತಾಲಂಬನಂಗಳ್ಕರಮೆಸೆವಿನೆಗಂ ನೀಲ್ದ ಕಾಶೀಪುರಾಧೀ ।
ಶ್ವರ ವಿಶ್ವೇಶಂಗೆ ತಂದಿತ್ತಿದ ನವಧವಳಚ್ಛತ್ರಮಂದೊಪ್ಪಿತೆಲ್ಲಾ
ಸುರವೃಂದಕ್ಕತ್ತಿಯಂ ತದ್ಗುಣವರನಿಚಯಕ್ಕೊಳ್ಪನೊಲ್ದೀವುತಾಗಳ್ ॥ ೧೦

ಸರಸಿಜಮಿತ್ರಂ ರಾತ್ರೀ
ಶ್ವರನುಂ ಭುವನತ್ರಯಾಧಿಪತಿಯಾಗಿರ್ಪಾ ।

1 ಭೀತಿಪರ.

ಪರಶಿವನಿರ್ಕೆಲದೊಳ್ವಾ
ಮರಮಂ ಡಾಳಿಸುತೆ ಬಂದರತಿಸಂಭ್ರಮದಿಂ ॥ ೧೧

ತುಂಬಿಗುರುಳ್ಗಳ ತೋರನಿ
ತಂಬದ [1] ನಗೆಮೊಗದ ಪೊಡರ್ಪ ಪೀನಕುಚಂಗಳ ।
ಬಿಂಬಾಧರೆಯಂ ಪಾರ್ವತಿ
ಯಂ ಬಿಡದೋಲೈಸೆ ನಂದನಕ್ಕೆಟ್ತಂದರ್ ॥ ೧೨

ಅಳಿಯುಂ ನವಿಲಂ ನವಕೋ
ಕಿಳಮುಂ ವರಮಂದಮಧುರತಾರಸ್ವನದಿಂ ।
[2] ಪಟಿವಾಮರಗಾಯಕಿಯರ
ಬಳಗಂ ನಡೆತಂದುದದ್ರಿಸುತೆಯೊಡನಾಗಳ್ ॥ ೧೩

ವಾರಿರುಹಗಂಧಿಯರ್ವಾದ
ವಾರಣಗಮನೆಯುರನಂಗಚಕ್ರೇಶ್ವರನ ಕ ।
ಠಾರಿಗಳೆನಿಸುವ ಸತಿಯು
ಗೌರೀಪದಯುಗವನೋಲಗಿಸುತ್ತೇಟ್ತಂದರ್ ॥ ೧೪

[3] ಕೊನರ್ಗಣ್ಮಿಂಚು ಪೊದಳ್ದ ಸೋರ್ವುಡಿ ಮುಗಿಲ್ಭ್ರೂವಲ್ಲಿಗಳ್ವಾಕಶಾ
ಸನಚಾಪಂ ವರಕಂಕಣಧ್ವನಿ ಘನಧ್ವಾನಂಬೊಲೊಪ್ಪುತ್ತಿರಲ್ ।
ಘನಚಿತ್ರಂ ಮಧುಮಾಸದಲ್ಲಿ ಬನಕಾ ಕಾರ್ಗಾಲವೇಟ್ತಂದುದೋ
ಎನೆರುದ್ರಾಣಿಯ ಕೂಡೆ ಬಂದುದೊಲವಿಂದಂ ದೇವನಾರೀಜನಂ ॥ ೧೫

ನೇತ್ರಸಮೂಹವೆಯ್ದೆ ಶಫರಂ ನಳಿತೋಳ್ಗಳೆ ಭಂಗಜಾಲಮಾ
ಗಾತ್ರಮರೀಚಿ ಶಂಬರಮಡಾಗಲೊಡಂ ಬನದಲ್ಲಿ ತೋರ್ಪ ದಾ ।
ಚಿತ್ರನಭಾಗ್ಯಮಂ ಮುದದೆ ನೋಳ್ಪೊಡೆ ಬಂದ ಸಮುದ್ರದಂತೆವೋಲ್
ಗೋತ್ರತನೂಜೆಯುಂ ಬಳಸಿ ಬಂದುದು ನಂದನಕಂಗನಾಜನಂ ॥ ೧೬

ವ॥ ಮತ್ತಂ,

[4] ಸಕಲಗಣರ್ವೆರಸಿ ವಿನಾ
ಯಕನೇಟ್ತಂಡಂ ಮಹೇಶ್ವರನ ಬಲದೊಳ್ತಾ ।

---

1 ನಗೆಮೊಗಮುನಡರ್ಪ. 2 ಪಟಿವಗಂಧರ್ವಸತಿಯುರ. 3 ಕೊನೆಗಣ್ಮಿಂಚು. 4 ಸಕಲಗಣಂಸಹಿತ ವಿನಾ.

ರಕರಿಪು ಸುರಸೇನಾನಾ
ಯಕನೆಡಗಡೆಯಲ್ಲಿ ಬಂದನಾಪರಶಿವನಾ ॥ ೧೭

ಪಿಂತೇಕಾದಶರುದ್ರ
ರ್ಮುಂತೆ ಮಹಾಕಾಳನಂದಿಗಳ್ನಡೆತರಲತಿ ।
ಸಂತೋಷದೊಳಾವುಪವನ
ಮಂ ತೀವ್ರದೆ ಸಾರ್ದನಿಂದುಶೇಖರನಾಗಳ್ ॥ ೧೮

ವರಮಕರಂದವೆಂಬ ಜಲದಲ್ಲಿ ಮುಳುಂಗಿ ಪವಿತ್ರನಾಗಿ ಬಂ
ಧುರಮೆನಿಸಿರ್ಪ ಪುಷ್ಪರಜವೆಂಬ ವಿಭೂತಿಯನಾಂತು ಮಲ್ಲಿಕೋ ।
ತ್ಕರಮುಖಪುಷ್ಪವೃಂದದ ಸುವಾಸನೆಯಂ ಸಲೆ ಕಾಣ್ಕೆಗೊಂಡು ತಾ
ನಿರದಿದಿರ್ವಂದನಾಗಳಭವಂಗೆ ಮನೋಹರಮಂದಮಾರುತಂ ॥ ೧೯

ವ॥ ಅಂತಿದಿರ್ವಂದ ಮಂದಮಾರುತನಂ ಮನ್ನಿಸಿ ವಿಶ್ವನಾಥಂ ವೃಷಭೇಶ್ವರ ನಿಂದವನಿತಳಕ್ಕವತರಿಸಿ ತನ್ನೊಡನೇಟ್ತಂದ ನಂದಿಮುಖ್ಯಗಣಂಗಳಂ ಪೊಱವಳಯ ದೊಳ್ನಿಲಿಸಿ ಪಾರ್ವತಿಯ ಕೈರಾಗಿನೊಳಖಿಳಾಪ್ಸರಸ್ತ್ರೀಪರಿವೃತನಾಗಿ ನಂದನಂ ದೊಕ್ಕು ನಡೆತರ್ಪಾಗಳ್,

ಮಾರಂ ದಿಗ್ವಿಜಯಕ್ಕಂ
ದೋರಂತೆ ತೆರಳ್ವುದಕ್ಕೆ ಪೊಯ್ಸಿದ ಪೊಸ ಗೂ ।
ಡಾರಂಗಳೆಂಬವೋಲ್ಸಹ
ಕಾರಂಗಳನಂತಮಿರ್ದುವಾವುಪವನದೊಳ್ ॥ ೨೦

ತಳಿರಿಂ ಪಿಕಮಂ ಪೂವಿಂ
ದಳಿಯಂ ತನಿವಣ್ಗಳಿಂದೆ ಶುಕಸಂತತಿಯಂ ।
ನೆಬಲಿಂ ನವಿಲಂ ರಕ್ಷಿಸಿ
ಬಳೆದಿನಿಮಾವವುರತರುವಿನಂತೆಸೆದಿರ್ಕುಂ ॥ ೨೧

ಲಲಿತಮೃದೂಕ್ತಿಯಿಂದೆ ತನುಸೌರಭದಿಂ ಮೊಗಗೂಟದಿಂದೆ ಕಂ
ಗೊಳಿಸುವ ಚೆಲ್ವಿನಿಂದೆ ಸಲೆ ಸಂಗದಿನೈದೆವಿಪ್ಪಿಂದ್ರಿಯಕ್ಕೆಯ ।
ಗ್ಗಳಸೊಗಸೀವ ನಾರಿಯವೊಲಾಟಿಡಿಯಿಂಚರದಿಂದೆ ಪೂಗಳಿಂ
ಫಳದೆ ನೆಬಲ್ಗಳಿಂದೆ ತಳಿರಿಂದೆಸೆದಿರ್ದುವು ಚೂತವಲ್ಲಿಗಳ್ ॥ ೨೨

ಒಗೆದನುರಾಗದಿಂದೆ ನವಪಕ್ವಫಳಕ್ಕೆಳಸುತ್ತೆ ಸಾರ್ದದಂ
ಮುಗುಟ್ಟುರೆಗಣ್ಗಳೊಪ್ಪುತಿರೆ ಸೇವಿಸುತಿರ್ದ ಶುಕಂ ನಿವಿರ್ದು ಕೊ ।

ರ್ತಗಲದೆ ರಾಜಿಸಿರ್ಪ ಮನದನ್ನಳ ವಕ್ತ್ರಸರೋಜಬಿಂಬಮಂ
ಮಿಗೆ ಮೊಗಮಿಟ್ಟು ಚುಂಬಿಸುವ ಸದ್ವಿಟನಂತೆಸೆದತ್ತು ಚೂತದೊಳ್ ॥ ೨೩

ಅರಲೊಳಮರ್ಚಿ ತೋರ್ಪ ಪೊಸಮಾಂದಳಿರಂ ನಲವಿಂ ಕರ್ದುಂಕಿ ಬಂ
ಧುರವೆನಿಸಿರ್ಪ ನುಣ್ಚರದೆ [1] ಕೂಗುವ ಕೋಕಿಳಮೆಯ್ದೆ ನೋಟ್ಪಿನಂ ।
ದರಹಸಿತಾಸ್ಯೆಯುಪ್ಪವಳ ಚೆಂದುಟಿಯಂ ಸಲೆ ಸೇವಿಸುತ್ತೆ ಕಂ
ಠರವಮನೆಯ್ದೆ ಮಾಟ್ಪ ವಿಟನಂತೆ ವಿರಾಜಿಸುತಿರ್ದುದಾವಗಂ ॥ ೨೪

[2] ದರುಶನದಿಂದವೋ ಜನಕೆ ಸಂತಸಮಂ ಸಲೆ ಪುಟ್ಟಿಸುತ್ತೆ ಬಂ
ಧುರಫಳಭಾರದಿಂದಖಿಳರಂ ಸಲಪುತ್ತೆ ವಿಚಾರಿಸಲ್ಕದಾ ।
ವಿರಹಿಜನಂಗಳಂ ಬಿಡದೆ ಸಂಹರಿಸುತ್ತಜವಿಷ್ಣುರುದ್ರರೆಂ
ಬರ ಗುಣದೊಪ್ಪಮಂ ತಳೆದು ರಂಜಿಸುತಿರ್ದುದು ಚೂತಸಂಕುಳಂ ॥ ೨೫

ವಿಲಸಿತಮಾಗಿ ತೋರ್ಪ ವನಲಕ್ಷ್ಮಿಯ ಸಂಗದೊಳಂಗವೆಲ್ಲಮುಂ
ಫಲದೊಳಮರ್ಚೆ ಕಂಟಕದೊಳೊಂದಿದುದಾ ಪನಸಾಳಿ ಸಂತತಂ ।
ಲಲಿತವಧೂಸುಸಂಗಮದು ಸಂಜನಿಸಿರ್ಪನ ದೇಹವೆಯ್ದೆ ಸ
[3] ತ್ಪುಲಕುರೆ ಸಂದು ಕಂಟಕದೊಳೊಂದದೆ ಮಾಣ್ಬುದೆ ಭೂತಲಾಗ್ರದೊಳ್ ॥ ೨೬

ಮುದದಿಂ ತಮ್ಮಂ ಮಿಗೆ ಸಲ
ಪಿದ ಧಾತ್ರಿಗೆ ಕಾಣ್ಕೆಗೊಟ್ಟು ನಮಿಸುವ ತೆರದಿಂ ।
ಪುದಿದ ಫಲಭಾರದಿಂ ಬಾ
ಗಿದ ಬಾಳೆಗಳೆಸೆವುತಿರ್ದುವಾ ನಂದನದೊಳ್ ॥ ೨೭

ವ॥ ಅಲ್ಲಿ.

ವನಲಕ್ಷ್ಮಿ ಬಳಲ್ದ ಖೇಚರ
ಜನಕರವಟ್ಟಿಗೆಯನಿಕ್ಕೆ ರಂಜಿಸುತಿರ್ಪಾ ।
ಕನಕೋದಕಕಲಶಂಗಳೊ
ಎನೆ ಚೆಂದೆಂಗುಗಳ ಸತ್ಫಲಂಗಳ್ಮೆಱೆಗುಂ ॥ ೨೮

ತಡೆಯದೆ ಕಂದರ್ಪನೃಪಂ
ಸಡಗರದಿಂ ಬರ್ಪನೆಂದು ಮುದದೆ ಬಸಂತಂ ।

---

1 ಕೂಜಿಪ, 2 ದರುಶನಮಾತ್ರದೊಳ್ಜನಕೆ. 3 ತ್ಪುಲಕುರನಂದಂ,

ಗುಡಿಯಂ ಕಟ್ಟಿದನೆನೆ ಸೊಂ
ಪಿಡಿದಾ ಹೊಂಬಾಳೆಯಿಂದೆ ಕೌಂಗುಗಳೆಸೆಗುಂ ॥ ೨೯

ಬನಕೇಟ್ತಂದೀಶ್ವರನಂ
ಘನಭಕ್ತಿಯೊಳೆಯ್ದೆ ಪೊಗಳ್ವುದಕೆ ಮನದಂದಾ ।
ವನಲಕ್ಷ್ಮಿಯ ಬಾಯ್ದೆರೆಯೋ
ಎನೆ ಮಿಗೆ ಬಿರಿದಿರ್ಪ ದಾಡಿಮಂ ಕಂಗೊಳಿಕುಂ ॥ ೩೦

1 ಒಸೆದಾ ದಾಡಿಮಕಬಳವ
ಪೊಸ ಪೆಣ್ಗಿಳಿಗಳ್ಗೆ ಕುಡುವ ಶುಕಸಂದೋಹಂ ।
ರಸದಂಬುಲದಿಂ ಕುಟುಕಂ
ಸುಸಿಲೊಳ್ಮಿಗೆ ಕುಡುವ ನಲ್ಲರಂತೆಸೆದಿರ್ಕುಂ ॥ ೩೧

ಪೂಂಗಳಸಂಗಳೊಳಮೃತರ
ಸಂಗಳನಂಗಜನೃಪಂಗೆ ಮಧು ತೀವಿರ್ಪ ಬೆ ।
ಡಂಗೆನೆ ಸತ್ಪಳದಿಂ ನಾ
ರಂಗಂ ಕಂಗೊಳಿಸುತಿರ್ದುವಾ ನಂದನದೊಳ್ ೩೨

ತನ್ನಂ ಸಲೆ ಪೊರ್ದಿದರಂ
ತನ್ನಂತೆವೊಲೆಯ್ದೆ ಮಾಳ್ಪ ಸದ್ಗುಣದಿಂದಂ ।
ಪನ್ನಗಸಂಗತಿಯಿಂ ಬಾ
ವನ್ನಂ ಕಾಮಾರಿಯಂತೆ ಕಂಗೊಳಿಸಿರ್ಕುಂ ॥ ೩೩

ಬಗೆಯೊಳ್ಪಿರ್ಕುತೆ ಕುಂದದಿರ್ಪ ಸಸಿಯೊಂದಕ್ಕಿಂಬು ತಾನಾದಳೀ
ಗಗನಶ್ರೀ ಸಲೆ ಪೆರ್ಚುತಿರ್ಪ ಸಸಿಬಿಂದಕ್ಕೆಯ್ದೆ ಬೀಡಾಗುತುಂ ।
ಮಿಗಿಲಾದೆಂ ಬಟಿಕಾಕೆಗೆಂದು ವನಲಕ್ಷ್ಮೀದೇವಿ ತಾಳ್ದಿರ್ದ ಬೆ
ಳ್ನಗೆಯಂತಿರ್ದುವು ಮಲ್ಲಿಕೋದ್ಗಮಗಳಾ ಉದ್ಯಾನದೊಳ್ಸತತಂ ॥ ೩೪

ಮನಮಂ ತನ್ನ ವಿರೋಧಿಯಪ್ಪ ಶಿವನೊಳ್ಸಾರ್ಚಿರ್ದಹಂಕಾರದಿಂ
ಬನದೊಳ್ಪೊಕ್ಕು ಜಿತೇಂದ್ರಿಯರ್ಕಳೆನಿಸುತ್ತಿರ್ಪ್ಪಾಗಳುಂ ತೋರ್ಪ ಸ ।
ನ್ಮುನಿಗಳ್ಗಲ್ಲದೆ ಮುಟ್ಟನೀ ಶರವನೆಂದಾತ್ಮೋದ್ಭವಂ ಮುದ್ರಿಸಿ
ರ್ದನುವಿಂದೊಪ್ಪಿತು ಮಲ್ಲಿಕಾನಿಕರಮಾ ಬಂಡುಂಬ ಭೃಂಗಾಳಿಯಿಂ ॥ ೩೫

---

1 ಒಸೆದು ದಾಡಿಮದ ಕುಟುಕಂ.

ಕಾವ: ಗೆಂದು ಬಸಂತಂ
ಭಾವಿಸಿ ಮಾಣಿಕ್ಯದಿಂದೆ ಮಾಡಿದ ನವ ಪ ।
ರ್ಯ್ಯಾವಳಿಯೆಂಬಿನೆಗಂ ಪೊಸ
1 ಪೂವಿನ ಸಿರಿಯಿಂದೆ ಮಾಮರಂಗಳ್ಮೆರೆಗುಂ ॥ ೩೭

ಹರಿಣಸಮೇತನಾಗಿ ಭರದಿಂದೆ ಚರಿಪ್ಪ ಶಶಾಂಕನೊಳ್ಸದಾ
2 ಚರಿಸುವುದಾಗದಾತನುರೆ ನಿನ್ನ ಸಖಂ ಬಟಿಕೆಮ್ಮ ರಕ್ಷಿಸೆಂ ।
3 ದರಲಲಗಂಗೆ ಪೇಙ್ಪೊಡತಿ 4 ನಿರ್ಭರದಿಂದಿಳಿತಂದ ತಾರಕೋ
ತ್ಕರಮೆನೆ ಯೂಥಿಕಾಕುಸುಮಸಂತತಿಗಳ್ಸೊಗಸಿರ್ಪುವಾವಗಂ ॥ ೩೭

ಪಿರಿದುಂ ವಾಸಂತಿಯ ಕ
ಮ್ಮರಲೆಸೆದುವು ಗಾಡಿಯಿಂದೆ ಬಂದು ಬಸಂತಂ ।
ನೆರೆಯಲ್ಲಂತಸದಿಂದಂ
ಕುರಿಸಿದ ಚಮರ್ವ್ಯಗಳಂತೆಯಾ ಉಪವನದೊಳ್ ॥ ೩೮

ಬೞಸಿದ ಬನಗೞ್ತಲೆಯೊ
ಳ್ಸುಳಿವರ್ಗೆ ಬಸಂತನಿಕ್ಕಿದುರುದೀಪಿಕೆಗಳ ।
ಬಟಗಪೆನಲ್ಚಂಪಕದರ
ಲ್ಗಳ ಸಮುದಯಮಲ್ಲಿ ನೋಡೆ ಕಂಗೊಳಿಸಿರ್ಕುಂ ॥ ೩೯

ಮಿಸುನಿಯ ತನಿವಿತ್ತುಗಳಂ
ಕುಸುಮಶರಂ ಬಿತ್ತಿ ಬೆಳೆದು ರಂಜಿಸುತಿರ್ಪಾ ।
ಪೊಸಬೆಳೆಗಳಿವೆಂಬಿನೆಗಂ
ಕೊಸಗಿನ ಕಮ್ಮರಲ್ಗಳೆಸೆದುವಾ ನಂದನದೊಳ್ ॥ ೪೦

ವ॥ ಇಂತನಂತಸೌಂದರ್ಯಂ ಪೇೞಿ ರಂಜಿತಮಪ್ಪ ತರುಲತಾವಿಲಾಸಮಂ ಪರಶಿವನೀಕ್ಷಿಸುತೆ ಬರ್ಪಿನೆಗಂ,

ಮುಂತೊಂದೆಡೆಯೊಳ್ಪೊಸ ವಾ
ಸಂತಿಯ ಪೊಸವಲ್ಲಿಗೆಯ 5 ಕರಮೆಸೆವ ನವ ಸೇ ।
ವಂತಿಯ ಲತಿಕಾಗೃಹಮೋ
ರಂತಿರ್ದುದು ತುಂಬಿಗಳ್ಗೆ ಬೀಡೆನಿಸುತ್ತುಂ ॥ ೪೧

---

1 ಪೂವಿನಸಿರಿಯಿಂಪೆ. . . .ಮುಐಂಗಳ್ಮೆರೆಗುಂ 2 ಚರಿಸುವದಾರೆವಾತನುರೆ. 3 ದರಲಸರಂಗೆ. 4 ನಿರ್ಭರವಿಂದಳಿತಂದ. 5 ಕುಂದದೊಪ್ಪುವ.

ಇದು ರತಿರಾಜನ ಕೇಳೀ
ಸದನವೊ ಸರೆ ಮಂದಮರುತನಾಡುಂಬೊಲನೋ ।
ಇದು ಚೈತ್ರನ ಚಾವಡಿಯೋ
ಇದನಾವಂ ಬಣ್ಣಿಪಂ ಲತಾಮಂಡಪಮಂ ॥ ೪೭

ವ॥ ಇಂತಧಿಕವಿಲಾಸಂಬಡೆದ ಮಂಡಪದಲ್ಲಿ ಕಮನೀಯಮಾದ ಪದ್ಮರಾಗ ಶಿಲಾವೇದಿಕೆಯೊಳುಮಾಕಾಂತನುಮೆವೆರಸಿ ವಿರಾಜಿಸುತಿರ್ಪಿನಂ,

ಗಿರಿಜಾನುಮತದ ಗಂಗಾ
ಧರ ವಿಶ್ವೇಶ್ವರನನುಜ್ಞೆಯಿಂದಂಗನೆಯರ್ ।
ಹರಿಸದೆ ಪುಷ್ಪಾಪಚಯ
ಕ್ಕಿರದೆಟ್ಟಂದರ್ಬಟಿಕ್ಕೆ ನಾಲ್ದೆಸೆಗಾಗಳ್ ॥ ೪೩

ಇನಕರದಿಂದಂ ಕುಂದದ
ನನೆಯುಲ್ಲದ 1 ಜೀರ್ಣಮಾಗದಳಿಸೋಂಕದ ಮೇ ।
ಣ್ಮಿನುಗುವ ಪುಷ್ಪಂಗಳನಾ
ವನಜದಳಾಕ್ಷಿಯರೆ ಕೊಯ್ದರತಿ 2 ಸಂಭ್ರಮದಿಂ ॥ ೪೪

ಬಿರಯಿಗೆ ಮಿಕ್ಕಿನ ಪೂಗ
ಳ್ಸುರಗಿಗಳಾಗಿರ್ಪುವೆಯ್ದೆ ನೆರೆದೋಪರ್ಗಂ ।
ವಿರಹಿವ್ರಜಕಂ ನೋಡೀ
ಯುರಳ್ಗಳ್ಸುರಗಿಗಳೆನುತ್ತೆ ತಿಱಿದರ್ಸತಿಯರ್ ॥ ೪೫

ಸಹಕಾರನಾಮದಿಂ ಸ
ನ್ನಿಹಿತಮದಾಗೊಪ್ಪುತಿರ್ದುದು ವಿರಹಿವ್ರಾತ ।
ಕ್ಕಹಿತಮದಾಗಿರ್ಪುದೆನು
ತ್ತಹಿವೇಣಿಯರೆಯ್ದೆ ಕೊಯ್ದರಾ ಮಾಂದಳಿರಂ ॥ ೪೬.

ಪಱಿದಲಯಂಗೆಲ್ಲಾಗ
ಳ್ಪೊಱಿಗಾಗಿವು ತೋರ್ಪುವೆಂದು ಕೇತಕಿಯಲರಂ ।
ನೆಱಿವೆಱಿಮೊಗದಂಗನೆಯ
ರ್ತಱಿದರ್ಮುಱಿಳಿಸಿಂದೆ ತಿಟಿವವೋಲಾ ಪೂವಂ ॥ ೪೭

1 ಜೀರ್ಣಮಾಗಳಿದಯಂಜಲಸದ. 2 ಸಂಮುದದಿಂ.

ಪೊದೆಯೆ ತಳಿರ್ತು ಪೂತು ನಲವೇರಿ ಪೊದಳ್ದಿಸೆದಿರ್ಪುವೆಮ್ಮಯಾ
ಪದತಳಸೋಂಕಿನಿಂದಸುಗೆಯೆಂಬ ಮರಂ ಬಟಕೀ ದಳಂಗಳಂ ।
ಪದಕೆಣೆಯೆಂದು ಪೇೞ್ವರೆನುತುಂ ಮಿಗೆ ಮತ್ಸರದಿಂದೆ ಕೊಯ್ವವೋ
ಲ್ಸದತಿಯರೆಯ್ದಿ ಕೊಯ್ದರೊಲವಿಂದಮಶೋಕೆಯ ಪಲ್ಲವಂಗಳಂ ॥ ೪೮

ಸುರುಚಿರಮಾದೆಮ್ಮಯ ತನು
ಪರಿಮಳಕೆ ಸಮಾನವಾಗಿ ತೋರ್ಪುವೆನುತೆ ಮ ।
ತ್ಸರದಿಂದೆ ಕೊಯ್ವವೊಲ್ಪಾ
ದರಿಯರಲ್ಗಳನುಡಿದರಂದು ಪಂಕಜಮುಖಿಯರ್ ॥ ೪೯

ತಾವರೆವೂಗಳವೆಲ್ಲಂ
ತಾವರೆಗಣ್ಣಬಲೆಯರ್ಕಳುಱೆ ತಿಱುವನ್ನಂ ।
ತಾವರೆಯಾದುದರಿಂದಂ
ತಾವರೆವೆಸರಾದುವಂತವಕ್ಕಂದಿಂದಂ ॥ ೫೦

ಕುಮುದವೆಸರ್ತಮಗಿರ್ದುಂ
ಕುವಮುದವನೇ ವಿರಹಿಗಳ್ಗೆ ಮಾೞ್ಪುವಿವೆನುತುಂ ।
ಕುವಮುದಸುಗಂಧಿಯರಾಯ್ದು
ಕರ್ಮುದದ ಪೊಸಪೂಗಳಂ [1] ಮನೋಮತ್ಸರದಿಂ ॥ ೫೧

[2] ಮಲ್ಲೇಶ್ವರಪದಪೂಜೆಗೆ
ಮಲ್ಲಿಗೆ ನೀಂ ಬಾರದಿರ್ದೊಡೊಪ್ಪದದೆನುತುಂ ।
ಮಲ್ಲಿಗೆಯುಂ ಕೊಯ್ದು ಪೊಸ
ಮಲ್ಲಿಗೆಗಂಪಿನವೊಲಿರ್ಪ ತನುಸೌರಭೆಯರ್ ॥ ೫೨

ಇರದೆ ಮಧುಪಂಗಳುಣ್ಬೀ
ಯರಲೆಲ್ಲಪವಿತ್ರಮೆಂದು ಮಿಾಸಲೆನಿಪ ಕ ।
ಮ್ಮರಲ್ಗಳಿವೆನುತುಂ ಕೊಯ್ದು
ಪರಿಮಳವಾಂತೆಸೆವ ಸಂಪಗೆಯ ಪೊಸಪೂವಂ ॥ ೫೩

ಪುಟ್ಟುತೆ ದಿವ್ಯಜ್ಞಾನಂ
ಪುಟ್ಟಿದ ಚರಮಾಂಗಿಯಂತೆ ಪರಿಮಳಸಹಿತಂ ।

---

1 ಮನೋಮುದದಿಂದಂ. 2 ಮಲ್ಲಿಕಾರ್ಜುನನಪೂಜೆಗೆ.

ಪುಟ್ಟಿದ ಮರುಗವನೊಲವಿಂ
ಪೆಟ್ಟುಗೆಯುರ್ಕೊಯ್ದು ರತಿಮನೋಮುದದಿಂದಂ ‖ ೩೪

ದವನವೆ ನೀಂ ಬೆಳೆದೊಪ್ಪಿ
ರ್ದವನಂದವನಂತೆ ವಿರಹಿಗಪ್ಪುದೆನುತ್ತುಂ ।
ದವನಂಗಳನುಡಿದರುಮಾ
ಧವನಾಕಲ್ಪಕ್ಕೆ ನಾರಿಯರ್ಸಂತಸದಿಂ ‖ ೩೫

ವ॥ ಇಂತನೇಕವಿಲಾಸದಿಂ ಪುಷ್ಪಾಪಚಯಂಗೆಯ್ಯೆ,

ಸೊಗಯಿಪ ಪೂಗಳಂ ಕಮಲಗಂಧಿಯರಾಯುತ್ತಿರೆ [1] ಪಚ್ಚೆಗೊಮ್ಮೆ ನೆ
ಟ್ಟಗೆ [2] ಮೊರೆಯುತ್ತೆ ಬರ್ಪಳಿವಿತಾನಮದೀ ಸತಿಯರ್ಕಳೆಮ್ಮವ !
ಸ್ತುಗಳನೊಡಲ್ದು [3] ತಂದರಹಹೆಂದೆನುತುಂ ಭರದಿಂದೆ ಬಂದು ಶಂ
ಭುಗೆ ಮಿಗೆ ಪುಯ್ಯಲಿಟ್ಟಿರದೆ ದೂರುವವೋಲೆಸೆದಿರ್ದುದೊಳ್ಪಿನಿಂ ‖ ೩೬

ಕಳಿಕಾಶುಗಶರತತಿಯುಂ
ಸೆಳೆತಂಡೊಪ್ಪಿಸುವ ತೆರದೆ ನಾರೀನಿವಹಂ ।
ಸುಳಿಯಡಿಗಳ್ಗಿತ್ತುದು ಪರಿ
ಮಳವಾಂತಿರದೊಪ್ಪುತಿರ್ಪ ಪೂಗಳನಾಗಳ್ ‖ ೩೭

ವ॥ ಇಂತು ಗೌರೀವಲ್ಲಭಂಗೆ ಪೂಗಳಂ ಕೊಟ್ಟಲರ್ವಟ್ಟಂಗಳಂ ಮಾಡಿ ದೇವಿಯರ್ಗಿತ್ತು ತಾವುಂ ತೊಟ್ಟು ಕಾಮಿನೀಜನಂ ಪರಿತೋಷದೊಳಿರ್ಪಿನಂ ಪಾರ್ವತಿಯನೊಡಗೊಂಡು ವಿಶ್ವೇಶ್ವರಂ ಜಲಕ್ರೀಡೆಗೇಳ್ತರ್ಪಾಗಳ್ ದೇವಿಯು ರೊಡನೆ,

ಮೊಲೆಗೆಣವಕ್ಕಿಯುಂ ಮೊಗಕೆ ತಾವರೆಯುಂ ನಯನಕ್ಕೆ ತೋರ್ಪ ನೆ
ಯ್ದಿಲ ಪೊಸಪೂಗಳಂ ತನುಮರೀಚಿಗೆ ಪುಷ್ಕರಮಂ ಸಮಂತು ತಾ ।
ನಲಗಣಸಾಗಿ ಮಚ್ಚರಿಪುದೆಂದುಱೆ ದಾಟಿಡುವಂತೆ ಬಂದರಾ
ಲಲನೆಯರೊಪ್ಪವೆತ್ತೆಸೆವ ಪೂಗೊಳಕಾಗಿ ಮನೋನುರಾಗದಿಂ ‖ ೩೮

ವ॥ ಅಲ್ಲಿ,

ಘನ ತರವಾರಿಸಂಯುತಮುದಾರಮುದಱಿಂ ತುಟಿಲಾಳ್ಗಳಂತೆಮೋ
ಲ್ಮನುಗುವ ಪದ್ಮದಿಂದಥವಮಿತ್ರನವೊಲ್ಸಲೆ ಲಕ್ಷ್ಮಣಾಭಿನಂ ।

---

1 ಪಚ್ಚೆಗೊಮ್ಮ. 2 ಮೊರೆವುತ್ತೆ. 3 ತಂದರಿವರೆಂದೆನುತುಂ.

ದನವೆನಿಸುತ್ತೆ ತೋರ್ಪುದಱಿನಾರಯೆ ಮೇಣ್ಸಿರಿರಾಮನಂತೆ ರಂ
ಜನೆವಡೆದೊಪ್ಪಿದತ್ತು ನವನಂದನದಲ್ಲಿ ಪೊದಳ್ದ ಪೂಗೊಳಂ ॥ ೫೯

ಏಕಾಬ್ಜದೇಕಹಂಸದಿ
ನಾಕಾಶಂ ತೋರ್ಪುದೆಂದದಂ ಪಟಿವುತ್ತುಮ ।
ನೇಕಾಬ್ಜಹಂಸತತಿಯಿಂ
1 ದಾಕೊಳನೀಕ್ಷಣಕೆ ಸೊಗಸನೀವುತ್ತಿರ್ಕ್ಕುಂ ॥ ೬೦

ಬೆಳೆದರುಣಾಬ್ಜದಳಂಗಳ
ನೆಟಲಾಜಲದಲ್ಲಿ ಪೊಳೆದು ಮಿಗೆ ತೋರ್ಪಿನೆಗಂ ।
ತೊಳಗುವ ಪವಳದಿನೊಪ್ಪುವ
ಜಳನಿಧಿಯೆಂಬಂತೆ ಸರಸಿ ಕಂಗೊಳಿಸಿರ್ಕುಂ ॥ ೬೧

ರನ್ನದ ಸೋಪಾನಮನಾ
ಕನ್ನೆಯರಿಳಿದಮಲವಾರಿಯಂ ತುಂಬುತೆ ಚೆಂ ।
ಬೊನ್ನಜಲಯಂತ್ರದಿಂದಂ
ಪನ್ನಗಧರನಂಗದಲ್ಲಿ ಸೂಸಿದರಾಗಳ್ ॥ ೬೨

ವ॥ ಮತ್ತಮಾಗಳ್,

ಬಾವನ್ನದ ರಸಮಂ ಬೆ
ಳ್ದಾವರೆಯೆಸಳಿಂದೆ ತೆಗೆದು ಸೂಸಿದ ಪದದೊ ।
ಳ್ದಾವಜಹರನೆಸೆದಂ ಕುಳಿ
ರಾವರಿಸಿದ ಪರ್ವತಂಬೊಲುಱೆ ರಂಜಿಸುತಂ ॥ ೬೩

ಇದು ಚಿತ್ರಮಿನಕರಂಗ
ಳ್ಗೊದೆಯೊಡಲನನೆಯ್ದೆ ಮುತ್ತುತಿರ್ದಪ್ಪುವೆನ ।
ಲ್ಸದತಿಯದೊರ್ವಳ್ಕಾಶ್ಮೀ
ರದ ರಸಮಂ ಸೂಸಿದಳ್ಶಿವನ ವಿಗ್ರಹದೊಳ್ ॥ ೬೪

ವರಕುಂಕುಮಜಲಕಣಮೇ
ದುರ ಗಿರಿಜಾನಾಥವಿಗ್ರಹಂ ಪೆಂಪಿಂದಂ ।
ಕುರುವಿಂದಸ್ತಬಕಾಂಕಿತ
ಸುರಭೂರುಹದಂತೆ ಕಣ್ಗೆ ಸೊಗಸಿದುದಾಗಳ್ ॥ ೬೫

---

1 ದಾಕೊಳನದು ಕಣ್ಗೆ.

ಘುಸೃಣೋದಕಮಂ ಜಂತ್ರದೊ
ಳಿಸುವಿನೆಗಂ ದೇಹಮೆಯ್ದೆ 1 ಕೆಂಪಡರ್ದೀ ಪೊಂ ।
ಬಸಿರನಿದೆ ಬಂದನೆನುತುಂ
ಬಿಸಜಾಂಬಕಿಯೊರ್ವಳಲ್ಲಿ ನಗಿಸಿದಳುಮೆಯುಂ ॥ ೬೬

ಮೃಗಮದಜಲಮಂ ಸೂಸ
ನ್ಮೃಗಧರಧರನಂಗವೆಯ್ದೆ ತನ್ಮಯವಾಗ ।
2 ಲ್ಕೃಗಧರಜೆಗೆಲ್ಲ ತನುವಂ
ಮಿಗೆ ಕೊಟ್ಟಂ ಶಂಭುವೆಂದು ನಗಿಸಿದಳೊರ್ವಳ್ ॥ ೬೭

ವ॥ ಮತ್ತಮೊರ್ವಳ್ ಮೃಗಮದೋದಕಮಂ ಸೂಸಿ,

ತನುವಂ ಪತ್ತಿದ ಪಲವುಂ
ಪನಿಗಳ್ನೇತ್ರಂಗಳಂತೆ ರಂಜಿಸಿ ದೇವೇಂ ।
ದ್ರನವೋಲ್ಕಣ್ಗೆಸೆದಿರ್ದಂ
ವನಿತಾವೃತನಾದ ವಿಶ್ವಪತಿಯೊಲವಿಂದಂ ॥ ೬೮

ವ॥ ಮತ್ತಮೊರ್ವಳ್ಪ್ರೌಢಾಂಗನೆ,

ಸ್ಥಾಣುಗಿರದೆರೆದು ನೀರಂ
ಕಾಣರ್ಮನುಜರ್ಫಲಂಗಳಂ ನಾನಿಂದೀ ।
ಸ್ಥಾಣುಗೆ ನೀರೆರೆದೀಗ
ಳ್ಮಾಣದೆ ಫಲವಡೆವೆನೆಂದು ನುಡಿವುತ್ತಿರ್ದಳ್ ॥ ೬೯

ಅತನುವಿರೋಧಿಯಾಜ್ಞೆಯೊಳುಮಾಂಗದಮೇಲೆ ಸುರಾಂಗನಾವ್ರಜಂ
ಸಿತತರಚಂದನಂದೆರೆದ ನಿರ್ಮಲವಾರಿಯ ಸೂಸೆ ತೋರ್ಪ ಸಂ ।
ವೃತಸಿತಬಿಂದುಗಳ್ಪುದಿದ ದೇಹಮದೊಪ್ಪಿತು ಪೂತಮಲ್ಲಿಕಾ
ಲತೆಯುವೊಲಾರಯಲ್ಪಡದೆ ನೋಟ್ಪರ ಕಣ್ಗಿನಿದೀವುತಾವಗಂ ॥ ೭೦

ಎಡೆವಿಡದೊಪ್ಪಿ ತೋರ್ಪಫಲಘುವೃತ್ತಕುಚಂಗಳೊಳೆಯ್ದೆ ಸಿಲ್ಕಿದಾ
ಜಡಧಿ ನಗಾತ್ಮಜಾತೆ ನಿಜವಲ್ಲಭನಂದು ಶಿರೋಗ್ರದಲ್ಲಿ ತಾ ।
ಳ್ದೊಡ ಜಲಮಂ ಬಳಿಕ್ಕದನೆ ಮತ್ಸರದಿಂದೆರ್ದೆಯಲ್ಲಿ ತಾಳ್ವವೋ
ಲ್ಕಡು ಸೊಗಸೀಯೆ ರಂಜಿಸಿದಳಾಜಳಕೇಳಿಯೊಳೆಯ್ದೆ ನೋಳ್ಪನಂ ॥ ೭೧

1 ಕೆಂಪೊಡರ್ದೀ. 2 ಲ್ಕೃಗಧರಂಗೆಲ್ಲತನುವಂ.

ನಾರಿಯದೊರ್ವಳ್ಕಸ್ತುರಿ
ನೀರಂ ಸಲೆ ಸೂಸೆ ಮಂಗಳೆಗೆ ಕಾಳಿತ್ವಂ ।
ಸೇರಿರ್ದಂದದೆ ಕರ್ಪಿಂ
ಗೌರಿಯ ತನು ರಂಜಿಸಿತ್ತು ಬಳಿಕಾ 1 ಕೊಳದೊಳ್ ॥ ೭೨

ವ॥ ಮತ್ತಮೊರ್ವಳ್ಕಾಕ್ಷ್ಮೀರರಸಮಂ ಸೂಸೆ,

ಘುಸ್ಮಣರಸದಿಂದೆ ನಾಂದಿರೆ
ಪೊಸದುಗುಲಂ ಗಿರಿಜೆಯೊಪ್ಪಿದಳ್ಮುದದಿಂದಂ ।
ಕಿಸುಸಂಜೆಯಿನಿರದೊಪ್ಪುವ
ಶಶಿರೇಖೆಯ ತೆರದೆ ಕಣ್ಗೆ ಸೊಗಸೀವುತ್ತಂ ॥ ೭೩

ಗೌರಿಯನುಜ್ಞೆಯೊಳೆಲ್ಲಾ
ನಾರೀಜನವೆಯ್ದೆ ಪರಿಮಳಂಬೆರೆದೊಪ್ಪುವ ।
ನೀರಂ ಜಲಯಂತ್ರದಿನಾ
ಮಾರಾರಿಯಮೇಲೆ ಸೂಸುತಿರ್ದುದು ಮುದದಿಂ ॥ ೭೪

ಅರುಣಾಪಾಂಗಂ ಬೆಳ್ಪಾಂ
ತಿರದೆಸೆವಧರಂ ಪೊದಳ್ದ ಪುಳಕಮೆಸೆಯೆ ಶಂ ।
ಬರಕೇಳಿಯಬಲೆಯರ್ಶಂ
ಬರರಿಪುಕೇಳೀವಿಲಾಸಿನಿಯರಂತಿರ್ದರ್ ॥ ೭೫

ವನಕೇಳಿಯಿಂ ಬಟಲ್ದಾ
ವನಜಾಕ್ಷಿಯರೆಯ್ತರಲ್ದು ಕೂರಾಂಬರಮಂ ।
ಡನತತಿಗಳನಿತ್ತಳ್ಗಿರಿ
ತನುಜಾತೆ ಮನೋನುರಾಗದಿಂದವರ್ಗಾಗಳ್ ॥ ೭೬

ಸುರುಚಿರದಿವ್ಯಾಂಬರಮಂ
ಗಿರಿವರಸುತೆಯುಟ್ಟು ರನ್ನವಟ್ಟಮನಾಂತಾ ।
ಕರಿಚರ್ಮಧರನ ಸರ್ಪಾ
ಭರಣನ ವಾಮಾಂಕಪೀಠದೊಳ್ಮಂಡಿಸಿದಳ್ ॥ ೭೭

1 ತಳದೊಳ್.

ವರಕಲ್ಪವಲ್ಲಿ ಮಿಗೆಯಾ
ವರಿಸಿದ ಹರಿಚಂದನಕ್ಕೆ ದೊರೆಯೆನಿಸುತ್ತುಂ ।
ಗಿರಿಜಾಲಿಂಗನದಿಂದಂ
ಪರಮೇಶಂ ಪರಮಸುಖದೊಳೊಪ್ಪುತ್ತಿರ್ದಂ ॥ ೭೮

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹಮೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರಮಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆಱೆದಿರ್ಪುದು ಭೂತಳಾಗ್ರದೊಳ್ ॥ ೭೯

ಮುಳಿಯಲಗೇಂದ್ರಜಾತೆ ತೆರೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳಮೆಯ್ದೆ ಪುಟ್ಟತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ ।
ತುಟಿಲ 1 ನೊಡರ್ಚಲಾಲ್ದು ಮೊಗದೊಳ್ಮೊಗಮಿಕ್ಕುತೆ ಸಂತವಿಟ್ಟು ಬಾಂ
ಬೊಳೆಗೋಲವಿತ್ತ ಜಾಣ ಸಲಪೀ ಜಗಮಂ ಗುರುವಿಶ್ವವಲ್ಲಭಾ ॥ ೮೦

ಉತ್ಸಾಹವೃತ್ತ ॥ ಗಿರಿಯುಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊಳ್
ಬೆರೆದ ರಜಮ2 ನಿರದೆ 3 ಸವಿದು ತಣಿದು ತನ್ನ ಲೀಲೆಯಿಂ ।
ಮೊಱೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊಱೆವ ಗರಳಗಳನ ಚರಣಕಮಲಮೀಗಭೀಷ್ಟಮಂ ॥ ೮೧

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಣಿಮಕುಟಮಣಿವಿರಾ
ಜಿತಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪಾದಪಂಕೇಜಮಕ
ರಂದಮಧುಕರಾಯಮಾಣ ಶ್ರೀಕಂಠಪಂಶಾರ್ಣವಪೂರ್ಣಚಂದ್ರ
ನೆನಿಪ ಸತ್ಕವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ
ಶ್ರೀ ವೀರಭದ್ರವಿಜಯ ಮಹಾಪ್ರಬಂಧದೊಳ್ವಸಂತ
ಸಮಯಪುಷ್ಪಾಪಚಯಜಲಕೇಳೀವರ್ಣನಂ
ತೃತೀಯಾಶ್ವಾಸಂ ಸಂಪೂರ್ಣಂ.

---

1 ನೊಡರ್ಚದಾಲ್ದು. 2 ನುರಡೆ. 3 ನಱದು.

# ಚತುರ್ಥಾಶ್ವಾಸಂ

ಮಂದರಮುಮಂ ಸಿತನಗಮುಮಂ
ಕುಂದಣವೆಟ್ಟುಂ ಪ್ರಪಾತಭಾಜನಮೆಂದಗ ।
ನಂದನೆಯ ಕುಚಾದ್ರಿಗೆ ಬಗೆ
ದಂದಾಪ್ರಭು ವಿಶ್ವನಾಥ ರಕ್ಷಿಪುದೆಮ್ಮಂ ॥ ೧

ಇಂತು ವಸಂತರ್ತುವನತಿ
ಸಂತಸದಿಂದಾ ವನಾಂತರಾಳದೊಳಗಜಾ ।
ಕಾಂತಂ ಗುರು ವಿಶ್ವೇಶಂ
ಶಾಂತಂ ಕಳೆವುತ್ತಜಸ್ರಮೊಪ್ಪಿರ್ಪಿನೆಗಂ ॥ ೨

ವ॥ ಆ ಸಮಯದೊಳ್ಗ್ರೀಷ್ಮಕಾಲವೆಟ್ತಂದುದದೆಂತೆನೆ,

ಇರಲಾರ್ಪನೆ ನಾನೆಟ್ತರು
ತಿರೆ ಮಧುಮಯನನಿಸುವಾ ಬಸಂತನೆನುತೆ ಶುಚಿ ।
ದರಹಾಸಂಗೆಯ್ದುವೊಲಱೆ
ವಿರಿದೊಪ್ಪುವ ಮಲ್ಲಿಕೋತ್ಕರಂ ರಂಜಿಸಿಗುಂ ॥ ೩

ಕಡುಮುಳಿಸಿಂ ಮುಪ್ಪೊಳಲಂ
ಸುಡೆ ಭರ್ಗಂ ಗಗನದಲ್ಲಿ ಸಿಲ್ಕರ್ದಂದಿನ ।
ಕಿಡಿಗಳ ಸಮುದಯವೆಂಬಂ
ತೆಡೆವಿಡದಿನತಿಗ್ಮರೋಚಿ ಸೂಸಿದುವಾಗಳ್ ॥ ೪

ಮೃಗವೆಲ್ಲಂ ಕೃಷ್ಣಮೃಗಂ
ಖಗವೆಲ್ಲಂ [1] ಕೋಕಿಳಮೆನೆ ನಾಗಮದೆಲ್ಲಂ ।
ಮಿಗೆ ನೀಳಾಚಳಮೆಂಬ
ನ್ನೆಗಮೆಸೆದುವು ಬಿಸಿಲಬೇಗೆಗುಱೆ ಕುಂದುತ್ತುಂ ॥ ೫

---

1 ಕೋಕಿಳಂನಾಗಮೆಲ್ಲಂ.

ತರಣಿಯುಮೋರ್ವ್ವಾಯಾತ
ತ್ಪುರರೆನಿಸುತೆ ರಾಹುಗಿಳಿತವಿಧುಬಿಂಬದವೋ ।
ಲ್ಪರಿಗಳಿತಾಂಶುಕರಾಗುತೆ
ನರರಾ ಬೇಸಗೆಯೊಳೆಯ್ದೆ ತೋರುತ್ತಿರ್ಪರ್ ॥ ೬

ಜಲಶಯನನಾದನಂಬುಜ
ದಳನೇತ್ರಂ ತುಹಿನಕರನದೆಲ್ಲಾಗಳ್ಮಿಗೆ ।
ತಲೆಯೊಳ್ತಾಳ್ದಿರ್ಪಂ ಫಣಿ
ವಲಯುವ ಮುನ್ನರಿದು ಬೇಸಗೆಯ ತೀವ್ರತೆಯಂ ॥ ೭

ಜಲಜಸಖಂ ಬೇಸಗೆಯೊ
ಳ್ಕಿಲನರಿಯದ ತೆರದೆ ಬಹುಜಲಂಗಳನೀಂಟ ।
ಲ್ಬಲತಸ್ಕರನೆಂಬ ಪೆಸ
ರ್ಕಿಲಸಿತ್ತಂದಿಂದಮಾ ದಿನೇಶಂಗದಱಿಂ ॥ ೮

ಇರದಮೃತವನುಱೆ ಸೇವಿಸಿ
ಸುರರಂತಿರ್ದುಂ ಬಟಿಕ್ಕೆ ರಕ್ಕಸರಂದದೊ ।
ಳಿರುಳೊಲವಿಂ ಸಂಚರಿಪ
ರ್ನರರಾ ಶುಚಿಸಮಯದಲ್ಲಿದಚ್ಚರಿಯಲ್ತೇ ॥ ೯

ವ॥ ಇಂತಪ್ಪ ಬೇಸಗೆಯೊಳ್ವಿಶ್ವನಾಥಂ ಕುಳಿರಮಂಡಪದೊಳೊಪ್ಪುವ ಕಾಳಿ ಗರ್ಲ್ಲಪಸೆಯೊಳ್ಗಿರಿಜೆವೆರಸಿ ಸುಖಸಂಕಥಾವಿನೋದದೊಳಿರ್ಪಿನಮಾ ಸಮಯ ದೊಳ್,

ನರುಗಂಪಿರ್ದೆಡೆಯಂ ಮಿಗೆ
ಪರಮೆಗಳಱಿದೆಯ್ದೆ ಬರ್ಪವೋಲ್ಭರದಿಂದಂ ।
ಕರಿಗೊರಲನಿರ್ದ ತಾಣಮ
ನರಸುತ್ತಾ ಬನಕೆ ಬಂದರಾಗಳ್ಮುನಿಗಳ್ ॥ ೧೦

ಬಟಲ್ದ ಜಟಾಬಂಧದ ನೆಲ
ಕೆಟಲ್ವ ಬಹಿರ್ವ್ಯಾಸವಲ್ಕದೋತ್ರಂಗಳ ಬೆಮ ।
ರ್ದಿಟವ ವಿಭೂತಿಯ ಮುನಿಗಳ
ಬಟಗಂ ನಡೆತಂದುದಘವನಿರ್ದೆಪಗಾಗಳ್ ॥ ೧೧

ಬಂದಾ ದ್ವಿತೀಯಶಂಕರ
ನೆಂದೆನಿಸುವ ನಂದಿನಾಥನನುಮತದಿಂ ಬಾ ।
ಲೇಂದುಧರನಂಘ್ರಿಯುಂ ತಾ
ವಂದೀಕ್ಷಿಸಿ ಮಂಡೆ ಚಾಚಿ ನುತಿಸಿದರಾಗಳ್ ॥ ೧೨

ಹರ ಜಯ ಭರ್ಗ ಭೀಮ ಜಯ ಶಂಭು ಸದಾಶಿವ ಶಾಂತಮೂರ್ತಿ ಸ
ದ್ಗುರು ಜಯ ಶಾಶ್ವತಾಂಗ ಜಯ ನಿರ್ಮಲ ನಿತ್ಯ ಮಹೇಶ ರುದ್ರ ಶಂ ।
ಕರ ಜಯ ಮನ್ಮಥಾರಿ ಜಯ ಮಂದರಶೈಲನಿವಾಸ 1 ಜಾಹ್ನವೀ
ಧರ ಜಯ ಭಾಳನೇತ್ರ ಜಯ 2 ಎಂದೆನುತಂದು ಪೊಗಳ್ದರತ್ಯುಯಿಂ ॥ ೧೩

ದೇವ ಪಂಕಜಪುತ್ರವಾರಿಜನೇತ್ರವಂದಿತಪಾದರಾ
ಜೀವ ವಾಸುಕಿಭೂಷ ಕಾಲವಿನಾಶ ಪಾವಕಚಂದ್ರರಾ ।
ಜೀವಮಿತ್ರವಿಲೋಚನತ್ರಯ ಶೈಲರಾಜಕುಮಾರಿಕಾ
ಜೀವ ರಕ್ಷಿಸೆನುತ್ತೆ ಬಂಗಿದರಾ ಮುನೀಶ್ವರರತ್ಯುಯಿಂ ॥ ೧೪

ವ॥ ಇಂತು ನುತಿಸಿ ಸಾಷ್ಟಾಂಗಪ್ರಣತರಾಗಿ ಕರಕಮಲಮಂ ಮುಗಿದು ಭಯವಿಹ್ವಳರಾಗಿರ್ದ ಮುನಿಗಳಂ ಕಂಡೀಶ್ವರನಿಂತೆಂದಂ,

ಅಬ್ಬಕ್ಕದಿರಬ್ಬಕ್ಕದಿರಬ್ಬಕ್ಕದಿ
ರಬ್ಬಕ್ಕದೆ ನೀವೀಗಳಟಲ್ದು ಬಂದೀಪದನಂ ।
ನಿಬ್ಬರಿಸಿ ಪೇಳಿಮೆನೆ ಪಣೆ
ಯೊಳ್ಕೈಸಾರ್ಚುತ್ತೆ ಮುನಿಗಳಿಂತೆಂದುಸಿರ್ದರ್ ॥ ೧೫

ಇನಿತು ದಿನಂ ನಿಮ್ಮಯ ಸೇ
ವನೆಯೋ ಜೀವನಮದಾಗಿ ನಿಷ್ಕಂಟಕದಿಂ ।
ಬನದೊಳ್ಬಾಡ್ದವು ನಮಗಾ
ವನದ ರಿಣಂ ತೀರ್ದುದೆಂದು ಮತ್ತಿಂತೆಂದರ್ ॥ ೧೬

ಈ ನೆಲನಂ ಸಮಂತು ಪೊರಲೊಲ್ಲದೆ ನೋಡೆ ಬಿಸುಟ್ಟು ಬಂದ ಸೊ
ಕ್ಕಾನೆಯೊ ಕುಂಜರಾಕೃತಿಯೊಳೀಜಗಮಂ ಸಲೆ ನುಂಗಬಂದ ಭೀ ।
ಷ್ಮಾನನಮೃತ್ಯುವೋ ಬಟಿಕದಂ ತಿಳಿಯಲ್ಕಯಸಾಧ್ಯಮಾಗಳೀ
ಕಾನನಮಧ್ಯದಲ್ಲಿ ನೆಲಸಿರ್ದಪುದೊಂದು ಮಹೋಗ್ರವಾರಣಂ ॥ ೧೭

---

1 ಯಾಪಗಾ. 2 ಎಂದೆನುತೆಪೊಗಳ್ದರಬ್ರುಯಿಂ,

ನಡೆಗಲ್ತ ನೀಲಗಿರಿಯೋ
ಬಿಡದಂಗಂಗಳನೆ ತಾಳ್ದ ಕಾರ್ಮುಗಿಲೋ ಅಸು ।
1 ವಿಡಿದ ಕಟ್ಟಲೆಯೋ ಬಗೆಗಳ
ವಡದುಸಿರ್ವೊಡೆನುತ್ತ ಪೇಳ್ದುದಾ ಮುನಿವೃಂದಂ ॥ ೧೮

ನಡದೊಡೆ 2 ಕಾಲ್ಸೋಂಕಿದವೋ
ಲ್ಬುಡಿಸುವುದೀಯವನಿಯದಟಿ ತೊಡೆಯೊರಸಲ್ಕೇ ।
ಙ್ಪುಡಿಯಪ್ಪವು ಬೆಟ್ಟುಗಳದ
ಟೊಡಲಮಹತ್ವವನದಾವವಂ ಬಣ್ಣಿಸುವಂ ॥ ೧೯

ಪರಪಿಂದಂ ತೋರ್ಪ ಮತ್ತಾಗಜದತಿಮದಧಾರಾಪ್ರವಾಹಂ ತರಂಗೋ
ತ್ಕರದಿಂದಂ ಫೇನದಿಂದಂ ಸುಟಿಗಳಿನಿರದೊಪ್ಪುತ್ತೆ ಕಾಳಿಂದಿವೋಲ್ಬೋ ।
ರ್ಗರೆವುತ್ತಂ ಪೋಗಿ ರತ್ನಾಕರದೊಳಮರಲಾ ಸಾಗರಂ ಧಾತ್ರಿಯುಟ್ಟಿ
ರ್ದುರುನೀಲಾಚ್ಛಾದನಂಬೋಲ್ಕರಮೆಸೆವುದದಂ ಬಣ್ಣಿಸಲ್ಬಲ್ಲನಾವಂ ॥ ೨೦

ಅಜನಂ ಹರಿಯಂ ಕಾಣು
ತ್ತಜಹರಿಗಳ 3 ನೀಕ್ಷಿಪಂತಿರಿರ್ದತ್ತಾ ಮದ ।
4 ಗಜಮೇಂ ಮಿಕ್ಕಿನ ದೇವ
ವ್ರಜಮಂ ಬಲ್ಲುದೆ ಬಟಕ್ಕೆ ಮದನಧ್ವಂಸೀ ॥ ೨೧

ಆನೆಯ ಘನದರ್ಪಂ ಪಂ
ಚಾನನದಿಂದಳಿವುದೆಂಬರೆಲ್ಲರ್ಕಡುಸೊ ।
5 ರ್ಕಾನೆಯ ಸಮೀಪದೊಳ್ಪಂ
ಚಾನನನಾಗಿರ್ಪ ನೀನೆ ಕೇಳ್ತ್ರಿಪುರಹರಾ ॥ ೨೨

ಪೊಡಮಟ್ಟಿಂತೆಂದುದು ಮೃಡ
ನಡಿದಾವರೆಗಳ್ಗೆ ಸಕಲಮುನಿಸಂತತಿ ನಿ ।
ಮ್ಮಡಿಯಿಂದಲ್ಲದೆ ಮದಕರಿ
ಮಡಿಯದಿದಂ ನೀನೆ ಬಲ್ಲೆ ಮಖವಿಧ್ವಂಸೀ ॥ ೨೩

---

1 ವಿಡದ. 2 ಪದಸೋಂಕಿದವೋಲ್. 3 ನೀಕ್ಷಿಸವೋಲಿರ್ದತ್ತಾಮದ.
4 ಗಜಮದು.
5 ರ್ಕಾನೆಸಮೀಪದೊಳತಿಪಂ
ಚಾನನನಾಗಿರ್ಪಮೂರ್ತಿಕೇಳ್ತ್ರಿಪುರಹರಾ ॥

ವ॥ ಇಂತು ಬಿನ್ನವಿಸಿ ಕರಕಮಲಂಗಳಂ ಮುಗಿದಿರ್ದ ಮುನಿಗಳಂ ಕಂಡು ವಿಶ್ವೇಶ್ವರನಿಂತೆಂದಂ,

ಆನೆಯುದಲುತ್ತರು ಮಹಿಷನ
ಸೂನು ಗಜಾಸುರನೆನಿಪ್ಪವಂ ಸೊರ್ಕಿಂದೀ ।
ಕಾನನಕೇಲ್ತಂದಿರ್ದಪ
ನಾನವನಂ ಕೊಂದು ನಿಮ್ಮನುಜಿಪ ರಕ್ಷಿಸುವೆಂ ॥ ೨೪

ಪಿಂದವನ ತಂದೆಯುಂ ಗಿರಿ
ನಂದನೆ ಕೊಂದೆಲ್ಲ ಸುರರನೋವಿದಳೊಲವಿಂ !
ದಿಂದೀಗಳ್ನಾನವನಂ
ಕೊಂದು ಬಟಿಕ್ಕೆಯ್ದ ನಿಮಗೆ ಮಾಪ್ಪೆಂ ಮುದಮಂ ॥ ೨೫

ಮುನ್ನಂ ವಿಧಾತ್ರನಿಂದಂ
ತನ್ನಿಚ್ಛಾಧೀನಕಾಮನಾದವನಿಂದಸು ।
ವಂ ನೀಗುವ ಘನವರಮುಂ
ತಾಂ ನಲವಿಂ ಪಡೆದು ತೋರ್ಪನೀಗಜದೈತ್ಯಂ ॥ ೨೬

ಅದರಿಂದಂ ವಿಷ್ಣುವಂ ಲೆಕ್ಕಿಸನುಜಿ ತನಗೊಲ್ದಾವರಂಗೊಟ್ಟು ತೋರ್ಪಾ
ಬಿದಿಯಂ ಮಾತಾಡಿಸಂ ದಿಕ್ಪತಿಗಳ ಸಿರಿಯುಂ ಸೂಱೆಗೊಂಡಲ್ಲ ಕಾರಾ ।
ಸದನಕ್ಕಿಂಬಿಟ್ಟುಕೊಂಡಿರ್ದಪನವರ್ಗಳನಾ ದಾನವಂ ತನ್ನ ತೋಲಂ
ಪೊದೆಪಂ ಕೊಂದಿಕ್ಕಿ ನೀವಂಜದಿರೆನುತಭಯಂಗೊಟ್ಟನಾ ವಿಶ್ವನಾಥಂ ॥ ೨೭

ವ॥ ಇಂತಭಯಮಂ ಕೊಟ್ಟು ಮುನಿಜನಮಂ ಕಳುಪಿ

ಆಗಳ್ಭೀಮಾಕೃತಿಯುಂ
ಬೇಗದೊಳಾಂತಲ್ಲಿ ಸಕಲಗಣಸಹಿತಂ ಶಿವ ।
ನಾ ಗಜದೈತ್ಯೇಯಂಗಿಂ
ಬಾಗಿರ್ದ ಮಹಾದ್ರಿಗಾಗಳೊಲವಿಂ ಬಂದಂ ॥ ೨೮

ಮುದದೊಳ್ಪುರಥವಾಸಮಾದಕತದಿಂ ಗೌರೀವಿಳಾಸಕ್ಕೆಯಾ
ಸ್ಪದಮಾಗಿರ್ದುದಱಿಂದೆ ನಂದಿಯಿನಜಸ್ರಂ ರಂಜಿಪೌನ್ನತ್ಯದಿಂ ।
ದೊದವಿಂದಂ ಗಣವೇಶ್ಮವಾದುದಱಿನಾಶ್ಶೈಲಂ ಸಿತಗ್ರಾವದಂ
ದದಿನಾನಂದಕೆ ಬೀಡದಾಗಿ ಸೊಗಸಿತ್ತೇನೆಂಬೆನಾಶ್ಚರ್ಯಮಂ ॥ ೨೯

ಅನಲಾಸ್ಯಾಶ್ರಯದಿಂ ಸಂ
ಜನಿಸಿದ ಮಂದಾರದಿಂದಮೈರಾವತದಿಂ ।
ಮಿನುಗುವ ರಂಭಾನ್ವಯದಿಂ
ದನಿಮಿಷಗಿರಿಯಂಬೊಲಿರ್ದುದಂತಾಶ್ಯೈಲಂ ॥ ೩೦

ಗಿರಿಶಿಖರಂ ಮೇಘಂಗಳ
ನೊರಸಲ್ತಚ್ಛಿರದೊಳುದಿರ್ದ ಮೌಕ್ತಿಕಗಳ್ಪೇ ।
ಚರತತಿ ಮಾಲಿಂಗಕೆ ಬೆ
ಳ್ಗಲರಂ ಪೂಜಿಸಿದ ತೆರದೆ ಕಂಗೊಳಿಸಿರ್ಕುಂ ॥ ೩೧

ಆ ಶೈಲಾಗ್ರಸ್ಥಮಾಗಿರ್ದುರುಮದಗಜಮಂ ಕಾಮುರ್ಗಿಲ್ಗೆತ್ತು ದಂತಾ
ಳೀಶೋಭಾವೃಂದಮಂ ಮಿಂಚುಗಳ ಬಳಗಗೆತ್ತಾವಗಂ ಗೂಢದೊಳ್ನಿ
ರ್ವೈಶದ್ಯಂಬೆತ್ತು ಸೋರ್ವಾ ಮದವನೆ ಮಿಗೆ ವೃಷ್ಟಿವ್ರಜಂಗೆತ್ತು ಕಾರೆಂ
ಬಾಶಾಭಾವಂ ನೆಗಟ್ವಲ್ಕುಣಿವುದನುದಿನಂ ನೀಲಕಂಠಪ್ರತಾನಂ ॥ ೩೨

ವ॥ ಇಂತಪ್ಪದ್ರಿಯಂ ಪೊರ್ದಿ ಮಹಾರಣ್ಯಮಿರ್ದುದದೆಂತೆಂದೊಡೆ,

ವರಲಕ್ಷ್ಮೀಸಂಗದಿಂದಂ ಪರಿಯವೊಲಮರ್ದೊಪ್ಪಿರ್ಪಗಾಯತ್ರಿಯಿಂ ಭೂ
ಸುರರಂತಿಂದ್ರಾಣಿಯಿಂದಂ ಬಗೆವಡೆದಮರಾಧೀಶನಂತೊಪ್ಪುವಕ್ಷೋ ।
ತ್ಕರದಿಂ ರಂಜಿಪ್ಪ ದೇಹಪ್ರಕರಮುದಯಿಸಿರ್ದಂದದಿಂ ಲಕ್ಷ್ಮಿಯಂ [1] ಮೇ
ಣಿರದಾಗಳ್ಕಾನನಂ ತಾಂ ಪರಿಭವಿಸುತೆ ಕಣ್ಗಿಡ್ಡಮಾಗೊಪ್ಪಿತೇಗಂ ॥ ೩೩

ವ॥ ಮತ್ತಮಾ ವಿಪಿನಂ ಕಮಲಾಲಯಮಾಗಿಯುಂ ಕಮಲಮಲ್ತು, ಯಕ್ಷಾವಾಸರಾಜಿತಮಾಗಿಯುಮಳಕಾಪುರಿಯಲ್ತು, ಶರ್ಯೋದ್ಭಾಸಿತಮಾಗಿಯುಂ ಮಗಧದೇಶಮಲ್ತು, ಶೈಲೂಷಾಶ್ರಯಮಾಗಿಯುಂ ನಾಟ್ಯಶಾಲೆಯಲ್ತು, ವೈದೇಹೀಜನ್ಮಭೂಮಿಯಾಗಿಯುಂ ಮಿಥಿಲಾಪುರಮಲ್ತು, ರಾಜಾರ್ಕಯೋಗಮಿರ್ದುಂ ದರ್ಶಮಲ್ತು, ಅರ್ಧಚಂದ್ರಾಧಿಷ್ಠಿತಮಾಗಿಯುಂ ಹರಕಪರ್ದಮಲ್ತು, ಶಬರೀಸಮೇತಮಾಗಿರ್ದುಂ ಕಿರಾತನಲ್ತು, ದೈತ್ಯಮಥನಾವಾಸಮಾಗಿರ್ದುಂ ವೈಕುಂಠಮಲ್ತು, ಜೀಮೂತಾವೃತಮಾಗಿಯುಂ ಕಾರ್ಗಾಲಮಲ್ತು ಇಂತನಂತಾಶ್ಚರ್ಯಕ್ಕಿಂಬಾದ ಕಾಂತಾರಂ ಸೊಗಯಿಸಿರ್ದುದಂತುಮಲ್ಲದೆಯುಂ,

ಕಾಮಾಂಗಸಂಗದಿಂದಭಿ
ರಾಮುತೆಯುಂ ತಳೆದು ರತಿಯವೋಲ್ತ್ರೋರುತ್ತಂ ।

---

1 ತಾಂ। ಪರಿಭಾವಿಸಿತ್ತಾರಣ್ಯಮದು ಕಣ್ಗತಿಮೋದಮನೀವುದಾವಗಂ.

ಹೈಮವತೀಸಮ್ಮೇಳದಿ
ನಾ ಮಾಗಾನಂ ಮಹೇಶನಂತೆಸೆದಿರ್ಕುಂ ॥ ೩೪

ವ॥ ಇಂತತಿರಮ್ಯಮಾದರಣ್ಯಮಂ ವಿಶ್ವನಾಥಂ ನೋಡುತ್ತಂ ನಡೆತರ್ಪಾ
ಗಳ್ಮಂತೊಂದೆಡೆಯೊಳ್,

ಕಾರ್ಮುಗಿಲ್ಗಳ ಕಡುಕರ್ಪಂ
ಬರ್ಮಂ ತೆಗೆದೊಳ್ಪಿನಿಂದಿವಂದಿರನೊಲವಿಂ ।
ನಿರ್ಮಿಸಿದಂದದೆ ಕರ್ಪಿನ
ಪೆರ್ಮೆಯಿನಾವಿಪಿನದೊಳ್ಕಿರಾತರ್ಕ್ಕೆಸೆದರ್ ॥ ೩೫

ಜೀಮೂತೋರುಕುಚಂಗಳ
ಜೀಮೂತಕ್ಕೆಣೆಯೆನಿಪ್ಪ ಮೃದುಯಾನದ ನವ ।
ಜೀಮೂತಕಚಪ್ರಚಯದ
ಜೀಮೂತಾಂಗದ ಪುಳಿಂದಿಯರ್ಕಣ್ಗೆಸೆದರ್ ॥ ೩೬

ನವಿಲುಂ ಘೋರಾಹಿಯುಂ ಬಂಧುರಮದಗಜಮುಂ ಸಿಂಹಮುಂ ತಮ್ಮ ಶತ್ರು
ತ್ವವನೆಲ್ಲಾ ಕಾಲದೊಳ್ಬಿಟ್ಟಮರ್ದತಿಶಯದಿಂದಿರ್ದ ಋಷ್ಯಾಶ್ರಮಂಗ ।
ಳ್ವವದಿಂ ಪೆಣ್ಣಾಗಿ ನಾಗಾಸುರಭಯವಿಡಿದೋರಂತೆ ತೋರ್ಪಂದವೋ ಎಂ
ಬುವೊಲಾಗಳ್ಕಣ್ಗೆವಂದತ್ತುರುಗಹನದೊಳಾ ವ್ಯಾಧನಾರೀಕದಂಬಂ ॥ ೩೭

ನಡೆಗರಸಂಚೆಯುಂ ಸರಕೆ ಕೋಕಿಲಮಂ ಬಗೆವೆತ್ತು ತೋರ್ಪ ಮೆ
ಲ್ನುಡಿಗೆ ಶುಕಂಗಳಂ ಕುಚಯುಗಂಗಳ ಪೆರ್ಮೆಗೆ ಜಕ್ಕವಕ್ಕಿಯುಂ ।
ಮುಡಿಗೆ ನವಿಲ್ಗಳಂಡವನೆ ಪೋಲ್ತು ಕಿರಾತನಿತಂಬಿನೀಜನಂ
ಬಿಡದೆ ವಿಜಾತಿಯೆಂಬುದದು ಸಾರ್ಥಕಮಾಗೆಸೆದಿರ್ಪುದಾವಗಂ ॥ ೩೮

ವ॥ ಮತ್ತೊಂದೆಡೆಯೊಳ್,

ಘನಕುಂಭಶ್ರೀಯನಾರ್ಪಿಂ ಗುರುಕುಚದೆಡೆಯೊ[1] ಳ್ಮತ್ಕರಶ್ರೀಯನೇ ಕ
ಣ್ಗೆಸಿದೀವುತ್ತೊಪ್ಪುವೀ ನುಣ್ಪೊಡೆಗಳೊಳನಿಶಂ ತಾಳ್ದಿರಂತೀಕಿರಾತಾಂ ।
ಗನೆಯರ್ತಾವೆಂದು ಧೂಳಂ[2] ಮಿಗೆಯುದವಟಲೇಂ ಪೊಯ್ದುಕೊಳ್ವಂದವೋ ಎಂ
ದೆನೆ ಪಾಂಸುಕ್ರೀಡೆಯಿಂದಂ ಮೆಱೆದುವು ಮುದದಿಂ ಗಾನದೊಳ್ಕುಂಜರಂಗಳ್॥

ಇಳೆಗೆ ಪೊಡರ್ಪಿನಿಂದಿಳಿದು ಕಾರ್ಮುಗಿಲ್ಗಳ್ನಭದಂತರಕ್ಕೆ ಪೆ
ರ್ಮಳೆಗಳನಳ್ತಿಯಿಂ ಕರೆವುತಿರ್ಪ ಬೆಡಂಗಿದು ಚಿತ್ರವೆಂಬಿನಂ ।

---

1 ಳ್ಮತ್ಕರಶ್ರೀಯನೇ.   2 ಮಿಗೆಯುದವಳಂ.

ಮಿಳಿರ್ವ ಕರಾಗ್ರದಿಂದೆ ಜಳಮಂ ನಭಕ್ಕೊಲ್ದುಱೆ ಸೂಸುತಂದು ನಿ
ರ್ಮಳನದದಲ್ಲಿ ಕಣ್ಗೆ ಸೊಗಸಿರ್ದುವನೇಕಮದೇಭರಾಜಿಗಳ್ ॥ ೪೦

ಬಲಯುತಗಜದೈತ್ಯಂ ಪೆಱು
ದಲೆಯನೊಳುಱೆ ಪೊಣರ್ವುದಕ್ಕೆ ಮಾಯೆಯಿನಿರದಾ ।
ಪಲರೂಪಂತಾಳ್ದಂತಾ
ಸ್ಥಲದೊಳ್ಸೊರ್ಕಾನೆವಿಂಡು ರಂಜಿಸುತಿರ್ಕುಂ ॥ ೪೧

ನಳಿನಶರಾರಿಯೆಂಬ ಪೆಸರ್ವೆತ್ತೆಸೆದಿರ್ಪ 1 ನುಮೇಶನೀತನೊ
ಳ್ಕೊಳುಗುಳಮಾಗದೆಂದು ಪೆಸರಿಟ್ಟು ಶರಣ್ಬುಗಲೆಂಗು ಮಕ್ಕಳಂ ।
ಕಳುಪಿದನೋ ಸ್ಮರಾರಿಯೆಡೆಗಾ ಗಜದೈತ್ಯನೆನಿಪ್ಪನೆಂದೆನ
ಲ್ಕಳಭಸಮೂಹಮೆಯ್ದೆ ಚರಿಸುತ್ತೆಸೆದಿರ್ದುದರಣ್ಯಮಧ್ಯದೊಳ್ ॥ ೪೨

ಮಿಗೆ ಬನದಲ್ಲಿ ಸಂಚರಿಪ ನಾರಿಯರಕ್ಷಿಗಳಂ ವಿಳಾಸಮಂ
ದಗತಿಯನೊಪ್ಪುವೆತ್ತ ನಡುವಂ 2 ನಡೆ ನೋಡಿ ಮೃಗಾಳಿಮತ್ತಹ ।
ಸ್ತಿಗಳುರುಸಿಂಹರಾಜಿ ಸರೆ ತಮ್ಮಯ ಜಾತಿಯುವೆಂದು ನಾಡೆ ಭೀ
ತಿಗೆ ಱಗೆದಾರದುಂತೆ ನಿಲಲಾರ್ದಿಸುವರ್ಬಿಯದಮೃಗಂಗಳಂ ॥ ೪೩

ಇರದೆ ಕಿರಾತರಾರ್ದಿಸುವಿನಂ ಬರಿಕ್ಕೈ ಪರಿದುರ್ಕಿನಿಂದೆ ಸಂ
ಚರಿಸುವ ಮತ್ತವಾರಣಸಮೂಹವೊ ಆದಿವರಾಹನೊರ್ವನೋ ।
ಧರಣಿಯೊಳೀಗಳಿಂತು ಪಲವಾಗೆಸೆದಿರ್ಪ ಬೆಡಂಗೊ ತಾನೆನ
ಲ್ಚರಿಸುವ ಕಾಡಪಂದಿಗಳ ಗೊಂದಣವೊಪ್ಪಿತರಣ್ಯಮಧ್ಯದೊಳ್ ॥ ೪೪

ನೆಗಟ್ದು ಪುಳಿಂದಿಯಕ್ಷಿಗಳನೀಕ್ಷಿಸುತೊಂದು ಮೃಗಾದನಂ ಪಲಂ
ಮೃಗಶಿಶುಗೆತ್ತು ಗರ್ಜಿಸುತೆ ಬರ್ಪಿನಮಂತವಳೆಯ್ದ ನೇತ್ರಮಂ ।
ಸುಗಿ 3 ನೆರೆಗೊಂಡು ಮುಚ್ಚೆ ಮೃಗವೋಡಿದುದೆಂದರಸತ್ತೆ ನಿಂದಿರ
ಲ್ಮೃಗವಗೆಯುಂ ಕನಲ್ದು ಮಿಗೆ ಬೊಬ್ಬಿರಿ 4 ದೆಚ್ಚನದಾರ್ದು ಬೀಳ್ವಿನಂ ॥ ೪೫

ಹರಿಣಮನೊರ್ವ ಕಿರಾತಂ
ಸರಳೆಸೆಯಲ್ಕೆಲಕೆ ಬೀಳಲೊಡನೆಯೆ ಹರಿಣಂ ।
ಹರಿಣಿಯುದು ಬೀಳ್ದುದೊಂದೇ
ಹರಣವೆನಿಸಿದಿನಿಯುನಳಿಯಲುಳಿದವರೊಳರೇ ॥ ೪೬

---

1 ಮಹೇಶ. 2 ಈ ನಾಲ್ಕು ಅಕ್ಷರಗಳು ಮೂಲಗ್ರಂಥದಲ್ಲಿ ಲುಪ್ತವಾಗಿದ್ದು ದರಿಂದ ಹೊಸದಾಗಿ ಸೇರಿಲ್ಪಟ್ಟಿವೆ. 3 ನೆಲೆಗೊಂದಪುರ್ಷೆ. 4 ದರ್ಪ.

ಭಿಲ್ಲರ ವೊತ್ತನುಂ ಭಯದೊಳೀಸುಕ್ಷಿಸುತಲ್ಲಿ ಮೃಗೋತ್ಕರಂ ಕರಂ
ನಿಲ್ಲದೆ ಲಂಪಿಸುತ್ತೆ ನೆಱೆ ಪೋಗಿಯಡಂಗಿದುವಾಗಳಲ್ಲಿ ತಾಂ ।
ಪುಲ್ಲೆಯದೊಂದು ತನ್ನ ಮಱಿ ಬಾರದಿರಲ್ಕೆಲಸಿತ್ತು ಮೋಹವಿ
ರ್ದಲ್ಲಿ ಭಯಂ ಪೊದಳ್ದು ತಲೆದೋರ್ಪುದೆ ನೋಡೆ ಧರಾತಲಾಗ್ರದೊಳ್ ॥ ೪೭

ಪಿರಿದುಂ ರಾಹುಭಯಕ್ಕ
ಳ್ಕಿರದೆ ಸುಧಾಕರನನುಳಿದು ಧರೆಗೆಟ್ಟಂದಾ ।
ಎರಳೆಯಿದೆಂಬಂದದೊಳೊಂ
ದೆರಳೆ ಕರಂ ಸೊಗಸಬೀರುತಿರ್ದತ್ತಾಗಳ್ ॥ ೪೮

ಇರದೆ ಕಿರಾತನಾಮೃಗವನಾರ್ದಿಸುವನ್ನೆಗವೊಪ್ಪಿ ತೋರ್ಪ ಕೋ
ಡೆರಡುಡಿಯಲ್ಕದಾಗಳತಿಭೀತಿಯೊಳೋಡಿ ಬಳಲ್ದು ತೃಷ್ಣೆಯಿಂ ।
ತ್ವರಿತದಿ ನೀರ್ಗೆ ಸೇರಿ ನಿಜಬಿಂಬಮನೀಕ್ಷಿಸಿ ಪುಲ್ಲೆಗೆತ್ತು ತಾಂ
ಸುರತಕೆ ಸಾರ್ದುದಿಂತು ಮದನಾತುರದಲ್ಲಿ ವಿವೇಕಮಿರ್ಪುದೇ ॥ ೪೯

ಕಡುಪಿಂ ಬರ್ಪಂಟಡಿಯಂ
ಪಿಡಿಪಿಡಿಯೆಂದೊರ್ವ ಶಬರಿ ಶಬರನೊಳುಸಿರ ।
ಲ್ಪುಡಿಯಲೆತ್ತಂದವನುಸಿರ್ದಾ
ನುಡಿಯಂ ಸಲೆ ಕೇಳ್ದು ಪೊರೆಯವರ್ನಗುತಿರ್ದರ್ ॥ ೫೦

ಗಜಕರ್ಣಿಕೆಯನದೊರ್ವಂ
ಭುಜಬಲದಿಂದೆಸೆಯಲದು ನೆಲಕೆ ಬೀಳ್ವನೆಗಂ ।
ಆಜಗರವೆಂದತಿಭಯದಿಂ
ನಿಜಕಾಂತನನಪ್ಪಿದಳ್ಪುಳಿಂದಿಯದೊರ್ವಳ್ ॥ ೫೧

ತನ್ನಯ ಪುತ್ರನಪ್ಪ ಗಜದೈತ್ಯನ ಬೇಂಟೆಗೆ ಬರ್ಪ ಶೂಲಿಯೊ
ಳ್ಮನ್ನಮೆ ತಾಂ ಪೊಣರ್ಕೆಗೆನುತುಂ ಮಹಿಷಂ ಮಿಗೆ ಬಂದನೆಂಬಿನಂ ।
ಉನ್ನತಗಾತ್ರದಿಂದೆ ಭಯಮಂ ಬಿಯದರ್ಗುಱೆ ಪುಟ್ಟಿಸುತ್ತೆ ಕೋ
ಣಂ ನಗವೃಂದಮಂ ಕೆಡಪುತಟ್ಟರುತಿರ್ದುದದೊಂದು ತಾಣದೊಳ್ ॥ ೫೨

ಬರ್ಪ ಲುಲಾಯಮದೊರ್ವನ
ನಾರ್ಪಿಂಪೊಯ್ವುತ್ತೆ[1] ಬೆಂಗೆವಾಯ್ದಾತಂ ಮೆ ।

---

1 ಬೆನ್ಗೆ.

ಯ್ಗರ್ಪಿಂದೆಸೆದಂ ತನ್ನ ಘೊ
ಡರ್ಪಿಂದೆಟ್ಟಂದ ದಂಡಧರನೆಂಬಿನೆಗಂ ॥ ೫೩

ವ॥ ಮತ್ತಮೊಂದೆಡೆಯೊಳ್,

ಬಡನಡುವಿನ ನಿನ್ನೀನಾರಿಯಂ ಬಿಟ್ಟು ನೀನೊಂ
ದಡಿಯನಿಡಲುಮಾರ್ಪೀಯಾನೆವಿಂಡಾಕೆಯಂ ಕಂ ।
ಡಡಗುವುದೆನುತೊರ್ವಳ್ಬೇಂಟೆಯಿಂತಾಗದೆಂದುಂ
ನುಡಿಯೆ ಮನದಿ ತಾಳ್ದಂ ಚಿಂತೆಯಂ ವ್ಯಾಧನಾಥಂ ॥ ೫೪

ಇನಿಯನ ಕೂಡೆ ಬೇಂಟೆಗೆ ತೆರಳ್ದೊಡೆ ನಿನ್ನಯ ಕಣ್ಗಳಂ ಘನ
ಸ್ತನದ ವಿಳಾಸಮಂ ಬಿಡದೆ ಕಂಡೊಡೆ ದಲ್ಪುಲಿ ಸಿಂಗವಿಂಡುಗ ॥
ಳ್ಮನಿವುವು ಪೋಗದುಂತೆ ನಿಲೆ ಮನ್ಮಥನೆಂಬವ [1] ನಟ್ಟಿ ಸುಟ್ಟಪಂ
[2] ನಿನಗಿರಗಾಣೆನೀತೆರದೊಳೆಂದವಳದೊರ್ವ ಪುಳಿಂದಿ ಪುತ್ರಿಯೊಳ್ ॥ ೫೫

ಇಂತೆಸೆದಿರ್ಪ ಪುಳಿಂದರ
ನಂತೀಕ್ಷಿಸುತಲ್ಲಿ ವಿಶ್ವವಲ್ಲಭನೊಲವಿಂ ।
ಸಂತಸದಿಂ ಬರ್ಪಾಗ
ಳ್ಕಂತಿರ್ದುದು ಮುನಿಗಳಾಶ್ರಮಂ ಸೊಗಸುತ್ತುಂ ॥ ೫೬

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಲಾಗ್ರದೊಳ್ ೫೭

ಮುಳಿಯಲಗೇಂದ್ರಜಾತೆ ತಲೆಯಿಂ ಸರೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ವಿನಿಂ ।
ತುಟಿಲನೊಡರ್ಚೆ [3] ಲಾಲ್ದು ಪೊಗದೊಳ್ಮೊಗವಿಕ್ಕುತೆ ಸಂತವಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಪೀ ಜಗಮಂ ಗುರುವಿಶ್ವವಲ್ಲಭಾ ॥ ೫೮

ಉತ್ಸಾಹವೃತ್ತಂ॥ ಗಿರಿಯುಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬೆರೆದರಜಮು [4] ನಿರದೆ [5] ಸವಿದು ತಣಿದು ತನ್ನ ಲೀಲೆಯಿಂ ।

1 ನಟ್ಟೆ. 2 ನಿನನಿರಗಾಣೆ. 3 ದಾಲ್ದು. 4 ನುರದೆ. 5 ಸಬಿದು.

ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯುಂ
ಪೊರೆವ ಗರಳಗಳನ ಚರಣಕಮಲಮೀಗಭೀಷ್ಟಮಂ ॥ ೫೯

ಇದು ಸಮಸ್ತಬ್ರಹ್ಮಾಂಡಸಕಲಸುರಮಣಿಮಕುಟವಿರಾಜಿತಪಾದಪದ್ಮ ಶ್ರೀಕಾ
ಶೀಪುರಾಧೀಶ್ವರ ವಿಶ್ವನಾಥಪಾದಪಂಕೇಜಮಧುಕರಾಯಮಾಣ ಶ್ರೀಕಂಠ
ವಂಶಾರ್ಣವಪೂರ್ಣಚಂದ್ರಸನಿಪ ಸತ್ಕವೀಶ್ವರ ವೀರಭದ್ರನೃಪಾಲನಿಂ
ವಿರಚಿತಮಪ್ಪ ಶ್ರೀವೀರಭದ್ರ ವಿಜಯ ಮಹಾಪ್ರಬಂಧದೊಳ್ಗ್ರೀ
ಷ್ಮಾರಣ್ಯವರ್ಣನಂ ಕಿರಾತವರ್ಣನಂ
ಚತುರ್ಥಾಶ್ವಾಸಂ.

———

# ಪಂಚಮಾಶ್ವಾಸಂ

1 ವೈರಿಯಹ ಮನ್ಮಥನಿಗುಪ
ಕಾರಿಣಿಯಾಗಿರ್ದಳೆಂದು 2 ಸತಿಗರೆಯೊಡಲಂ ।
3 ಓರಂತಿತ್ತಾ ಕರುಣಾ
ವಾರಿಧಿ 4 ವಿಶ್ವೇಶನಾವಗಂ ಪೊರೆಗೆಮ್ಮಂ ॥ ೧

ಇದು ಸ್ಮೈಪಿನ ಸಾಗರಮೋ
ಇದು ಸಾಲೋಕ್ಯಾದಿಪದದ ಸಿದ್ಧಿಸ್ಥಲವೋ ।
ಇದವಿದ್ಯಾತಿಮಿರಂ ಪೊ
ರ್ದದ ಹಂಸಾಸ್ಪದವೊ ಎನೆ ವಿರಾಜಿಸುತಿರ್ಕುಂ ॥ ೨

ವ॥ ಅಲ್ಲಿ,

ಜಿತದರ್ಪಕತೆ ಹೃಷೀಕೇ
ಶತೆ ನಿರುತಂ ವಾಕ್ಪತಿತ್ವಮೊದವಿರ್ದಲ್ಲಿಯು ।
ಜತಿಗಳ್ತ್ರಿದೇವತೆಗಳಂ
ಸತತಂ ಪೋಲ್ತೆಯ್ದೆ ಕಣ್ಗೆವಂದರರದಾಗಳ್ ॥ ೩

ಮುನಿದೊಡೆ ವಿಧಿಯುಂ ತೃಣವೆಂ
ದೆನಿಸುವ 5 ಕರುಣಿಸಿದೊಡಂತೆ ಮತ್ತಾತೃಣಮುಂ ।
ವನಜಭವನೆನಿಸಿ ತೋರ್ಪೀ
ಘನತೆಯನಾಂತಿರ್ಪ ಮುನಿವಿತಾನಂ ಮೆರೆಗುಂ ॥ ೪

ಪೇಳಲದೇಂ ಸುರತರು ಜಳ
ಜಾಳಮು 6 ನೀಂಟುತ್ತಮಾವುದಿಷ್ಟಮನೆನುತುಂ ।
7 ಆಟಿಗೊಳುತ್ತಾರಿಸಿಗ
ಳ್ಗಾಳಿಯನುಂಡೀವರೆಱುದವರ್ಗೀಪ್ಸಿತಮುಂ ॥ ೫

---

1 ವೈರಿಯಾದತನುಸತಿಗುಪ. 2 ಸತಿಗರ್ಧಾಂಗೀ. 3 ಕಾರಮುನೆಸಗಿದ ಕರುಣಾ
4 ಗುರುವಿಶ್ವನಾಥ ರಕ್ಷಿಪುದೆಮ್ಮಂ. 5 ಕಾರುಣ್ಯಮಾದೊಡಂತಾ ತೃಣಮುಂ.
6 ನೀಂಟುವುದೀಪ್ಸಿತಂಗಳನೆನುತದ. 7 ನಾಳಿ.

ವ॥ ಮತ್ತಮಾ ಮುನಿವರರ್ಪರಮೇಶ್ವರನಂತೆ ಸತ್ಯಾಸ್ಪದರುಂ, ರಾಮಚಂದ್ರನಂತೆ ಧರ್ಮಶಾಸ್ತ್ರಕೋವಿದರುಂ, ಮಂತ್ರಿಜನದಂತೆ ಯೋಗಾಸ್ವಿತರುಂ, ಶಿಶಿರಕಾಲದಂತೆ ತಪೋವಿರಾಜಿತರುಂ, ಋಷ್ಯಶೃಂಗನಂತೆ ಶಾಂತಾಂತಃಕರಣರುಂ, ಇಂದ್ರನಂತೆ ಸದಾರಂಭಾಸಕ್ತರುಂ, ಸಮವರ್ತಿಯಂತೆ ದಂಡಧರರುಂ, ಕೋದಂಡದಂತೆ ಸದ್ಗುಣೋಪೇತರುಂ, ಉಪವನದಂತೆ ಕಾರಕಾನ್ವಿತರುಂ, ವಿನತಾಗರ್ಭದಂತ ವಿಭೂತಿಭಾಸುರರುಂ, ಶುಕನಿಕರದಂತೆ ಫಲತರುದ್ರಾಕ್ಷಾಸಕ್ತರುಂ, ಹುತವಹನಂತೆ ಸಪ್ತಶಿಖಾನ್ವಿತರುಂ, ಮಹಾರಣ್ಯದಂತಕ್ಷಮಾಲಾವಿರಾಜಿತರುಂ, ಸುಮನೋಬಾಣನಂತೆ ಸುರಭಿಸಮೇತರುಮಾಗಿರ್ಪರಂತುಮಲ್ಲದೆಯುಂ,

ಪವನಾಶಿಗಳಾಗಿರ್ದುಂ
ಪವನಾಶಿಗಳಲ್ತು ಮುನಿಗಳೆನಿಸುತ್ತುಂ ಮ ।
ತ್ತವರ್ಗಳ್ಮನಿಗಳೆಯಲ್ತಂ
ತು ವಿಚಿತ್ರಂ ನೋಡಲಾ ತಪಸ್ವಿಗಳಿರವಂ ॥ ೬

ವ॥ ಇಂತಪ್ಪ ಋಷಿಗಳ ಆಶ್ರಮಂಗಳಂ ನೋಡುತ್ತೆ ಸಮಸ್ತಪ್ರಮಥಗಣಸಮೂಹಸಹಿತಂ ವಿಶ್ವನಾಥಂ ಮುಂದೆ ನಡೆತರ್ಪಾಗಳ್ಗಜಾಸುರಂ ಕೇಳ್ದು ತನ್ನ ಮೇಲೇಟ್ಟರ್ಪ ದಾಳಿಯೆಂದಱಿದು ಮನದೊಳೆ ಖತಿಯಂ ತಾಳ್ದು ತನ್ನ ಸೇನಾಪತಿಯದೊರ್ವ ರಕ್ಕಸನೊಳಿಂತೆಂದಂ,

ಬರ್ದುಕಿದೆನಿನಿತು ದಿನಂ ನನ
ಗಿದಿರ್ವಂದು ಪೋಣರ್ಚಿದವನ ನಾಂ ಕಂಡಱಿಯೆಂ ।
ಇದು ಚಿತ್ರಂ ಪೆಣ್ಮೆಯ್ಯಂ
ಕದನಕ್ಕೆಟ್ಟಂದ ಗಡಮೆನುತ್ತವನುಸಿರ್ದಂ ॥ ೭

ಮಂದರಮನುರುಪಿ ಸಿತನಗ
ಮಂ ದಹಿಸಿ ಸುವರ್ಣಶೈಲಮಂ ಪಿರಿದುಂ ಸು ।
ಟ್ಟಿಂದೀಗಳ್ಮಸಣದೊಳಿ
ರ್ಪಂದದೆ ನಾಂ ಮಾಡುವೆಂ ಕಪಾಲಿಯನಧಟಿಂ ॥ ೮

ವ॥ ಇಂತೆಂದು ತನ್ನಸೇನಾಪತಿಯೊಳುಸಿರ್ವನ್ನಮಾ ಸಮಯದೊಳ್ಮಹೇಶ್ವರಂ ಲೋಕಾನುಗ್ರಹಕ್ಕೆ ರಾಜಧರ್ಮವನನುಸರಿಸುತ್ತೊರ್ವ ಗಣೇಶ್ವರನಂ ಗಜಾಸುರನಿರ್ದೆಡೆಗೆ ಕಳುಪಲಾತನೆಟ್ಟಂದವನೊಳಿಂತೆಂದಂ,

ಮಂದರವಾಸನುಗ್ರಫಣಿರಾಜವಿಭೂಷಣನಂಧಕಾರಿ ಗೋ
ವಿಂದಮುಖಾಮರಪ್ರತತಿವಂದಿತಪಾದಪಯೋಜನದ್ರಿಜಾ ।
ನಂದಸುಧಾಬ್ಧಿಚಂದ್ರನಸಮಾಯುಧದರ್ಪಘನಪ್ರಭಂಜನಂ
ಬಂದಿರದೆನ್ನನಟ್ಟಿ ನಡೆತಂದೆನಿದಿಲ್ಲಿಗೆ ಮರ್ತ್ಯಸೂದನಾ ॥ ೯

ದಂಡಧರಾಭಿಮಾನಧರಣೀಧರವಜ್ರನೆನಿಪ್ಪ ಭರ್ಗನಂ
ಚಂಡಕರಾಗ್ನಿಸೋಮನಯನತ್ರಿತಯೋರ್ಜಿತಮೂರ್ತಿಯಂ ಸದಾ ।
ಖಂಡಲಮಸ್ತಕಾಂಚಿತಪದಾಂಬುಜನಂ ಗುರುವಿಶ್ವನಾಥನಂ
ಕಂಡು ಬದುರ್ಕುಂಕು ಕಾಣದೊಡೆ ತಪ್ಪದೆ ಬರ್ಪುದಪಾಯವೀಕ್ಷಣಂ ॥ ೧೦

ಬಂದನಿದೆ ಶಂಭು 1 ನೀನೇ
ಬ್ದಂದು ಶರಣ್ಬುಗೆ ಬಳಿಕ್ಕೆ ರಕ್ಷಿಸುವಂ ಕೇ ।
ಳೆಂದೆನೆ ಗಜದೈತ್ಯಂ ಕೋ
ಪಂದಾಳ್ದು ಗಣೇಶನೊಡನೆ ತಾನಿಂತೆಂದಂ ॥ ೧೧

ನಾಕಂ ನೋಡ್ಪೊಡೆ ನನ್ನದು
ವೈಕುಂಠಂ ನನ್ನ ಠಾಣೆಯಂ ಪರಮೇಷ್ಠಿಯ ।
ಲೋಕಂ ನನ್ನಾಡುಂಬೊಲ
ಮಾಕಾಲಗ್ರೀವನೆನಗೆ 2 ಸಾಟಿಯೆ ಗಣಪಾ ॥ ೧೨

ಸಿರಿವೆಣ್ಣಿನ್ನಯ ಪಂಜರ
ದರಗಿಳಿಯಜಕಾಂತೆಯೆನ್ನವಶಮಾಗಿರ್ಪಳ್ ।
ಳ್ಧರಣೀತಳಮಂಬುಧಿ ಮ
ತ್ಕರಪಂಕಜರೇಣುಪುಷ್ಪಷಟ್ಪತಂಗಣಪಾ ॥ ೧೩

ನನ್ನಯ ಪಿತನಂ ಮುಳಿಸಿಂ
ತನ್ನಂಗನೆ ಕೊಂದ ಹರಿಬವಂ ನಾಂ ತೆಗೆಯದ ।
ಮುನ್ನಂ ಕಂಡೊಡೆ ಸರಿಯುವ
ರೇಂ 3 ನಗರೇ ನನ್ನನೆಂದನಾ ಗಜದೈತ್ಯಂ ॥ ೧೪

ದೊಪ್ಪನ ಕೊಲೆಯಂ ತೆಗೆವೆಂ
ಕಪ್ಪವನುಚಿ ಕೊಂಡು ತಿಸುಟಿ ತಿಱಿವಂತೀಗ ।

1 ನಿನಗೇ. 3 ಶರಣೆನೆ. 3 ಸಗಲೇ.

ಳ್ಕಪ್ಪರವಂ ಕುಡದಿರ್ದೊಡೆ
ಬೊಪ್ಪಂಗಾಂ ಪುಟ್ಟಿದಾತನಲ್ತು ಗಣೇಶಾ ॥ ೧೫

ತಿಱುಕಂ ದಿಗಂಬರಂ ಪೆ
ರ್ಗೊರವಂ ಪಾರ್ವಂ ಮರುಳ್ಗಳರಸೇಕಾಕಿಯು ।
ನಿರದಿಕ್ಕುವುದನುನಯ ಕುರೆ
ವಿರುದ್ಧವೆಂದಱಿದು ಕಾಯ್ದೆನವನಂ ಮುನ್ನಂ ॥ ೧೬

ವ॥ ಇಂತುದ್ಧತವೃತ್ತಿಯಿಂ ತನ್ನ ಪೌರುಷಮಂ ಪೇಳ್ದಿಧದಾನವನೊಳ್ಗಣೇಶ್ವರನಿಂತೆಂದಂ,

ಪಿರಿದುಂ ರಾಗದ್ವೇಷಂ
ದೊರೆಕೊಂಡರ್ಗಮೃತಮಿಲ್ಲವೆಂದು ಮುನೀಶ !
ಗೊರೆಯಲ್ಭಿಕ್ಷುಕನಾದಾ
ಪರಶಿವನಂ ತಿಱುಕನೆಂಬರೇ ಮದಮತ್ತಾ ॥ ೧೭

ನಿರುತಂ ದಶದಿಕ್ಕೆಲ್ಲಂ
ವರವಸ್ತ್ರ [1] ಮದಾಗೆ ಪೊದೆದು ರಾಜಿಸುತಿರ್ಪಾ ।
ಪರಿಪೂರ್ಣನನೆಲವೊ ದಿಗಂ
ಬರನೆಂದೊಬ್ಬರೆ ವಿಚಾರಿಸಲ್ಪಾಮರನೇ ॥ ೧೮

ತನ್ನಂ ತಾನೇ ಕಾಣಿಸಿ
ತನ್ನಡಿಗಳನಖಿಳರಿಂದೆ ಪೂಜಿಸಿಕೊಳ್ಪಾ ।
ಸನ್ನುತಕರುಣಾಂಭೋಧಿಯ
ನನ್ನೆಯವೆಲೊ ಗೊರವನೆಂಬುದಮರವಿರೋಧೀ ॥ ೧೯

ಯಜ್ಞಾಹುತಿಯಂ ಕೊಂಡಾ
ಯಜ್ಞಫಲವನೀವ ಯಜ್ಞಪತಿಯೆನಿಸಿದ ಸ ।
ರ್ವಜ್ಞಂ [2] ಬ್ರಾಹ್ಮಣನಲ್ಲವೆ
[3] ಯಜ್ಞತೆಯಿಂ ಪಾರ್ವನೆಂದೊಡೇಂ ಪಳಿವುಂಟೇ ॥ ೨೦

ದುರಿತಾತ್ಮರ್ಗೆಲ್ಲಂ ತ
ನ್ನಿರವಂ ಕಾಣಿಸದೆ ಮಾಯೆಯಿಂಬೀ ಮರ್ದಿಂ ।

---

1 ಮದಾಗಿ. 2 ಬ್ರಾಹ್ಮಣಯಜ್ಞ. 3 ಕೃಜ್ಞತೆಯಿಂ.

4*

ದಿರದೆ ಮರುಳ್ಮಾಡಿದ
ಪುರಹರನಂ 1 ಮರುಳ್ಗಳರಸನೆಂದುಸಿರುವರೇ ॥ ೨೧

ನಳಿನಭವಾದಿಗಳಿರದಾ
ಪ್ರಳಯದೊಳಳಿದಂದು ನಿತ್ಯತೆಯಿನಿಂತೊರ್ವನೆ ।
ಯುಳಿದಿರ್ದ ಶಂಭುವಿರವಂ
ತಿಳಿಯದೆಯೇಕಾಕಿಯೆನುತುಸಿರ್ವರೆ ಮರುಳೆ ॥ ೨೨

ಸಂಕರಜನ್ಮಂಗಲ್ಲದೆ
ಶಂಕರನೊಳ್ದ್ವೇಷವೆಂಬುದುದಿಸದೆನುತೆ ನಿ ।
2 ಶ್ಶಂಕತೆಯಿಂ ಶ್ರುತಿಯಖಿಳಜ
ಗಂ ಕಾಣ್ಬಂತೆಯ್ದೆ ಮೊರೆವುತಿರ್ಪುದಜಸ್ರಂ ॥ ೨೩

ಆರಯೆ ನಿನ್ನ ತಂದೆ ಮಹಿಷಾಕೃತಿಯಿಂದೆಸೆದಿರ್ದು ನಿನ್ನಯಾ
ಕಾರವೆಯಾನೆಯಂತೆ ಪರಿರಂಜಿಸುತೊಪ್ಪಿದೆ ನಿನ್ನರೂಪುಮಂ ।
ದಾರಿಯನಿಂದೆಯುಂ 3 ಸಕಲವಿಷ್ಟಪಮುಂ ತಿಳಿವಂತೆ ಸಂತತಂ
ಸ್ಮಾರಿಸು 4 ತಿರ್ಪುವೀ ಜನನಸಂಕರ 5 ಮೆಂಬುದ ನಿನ್ನಸಾದ್ರ್ದದಂ ॥ ೨೪

ವ॥ ಇಂತೆಂದು ಗಣೇಶ್ವರನುಸಿರ್ವಿನಂ ಗಜಾಸುರಂ ಕೋಪವಿಹ್ವಲನಾಗಿ ಕಣ್ಗಳ್ಕೆಂಪೇರಿ ಪಲ್ಮೊರೆದು ಘುಡಿಘುಡಿಸುತ್ತೆ,

ಕೂರಸಿಯಿಂ ಗಣವರನ ಶ
ರೀರಮನುಱೆ ಪೊಡೆಯೆ ಗಗನಮಂ ಪೊಯ್ದಂದದೆ ।
ರಾರಾಜಿಸೆ ಪುಸಿದುದೆನು
ತ್ತಾರಯ್ಯದೆ ಮತ್ತೆ ಪೊಯ್ದನಾ ಮತ್ತಾತ್ಮಂ ॥ ೨೫

ಕಡಿದೊಡೆ ಕತ್ತರಿಸಿದೊಡಿರಿ
ದೊಡೆ ದೀಪಂ ತವಿಪುದೇ ಬಳಿಕ್ಕಸುರಂ ತಾ ।
ನೊಡರಿಚಿದಾಸುರಕರ್ಮಂ
ಕಿಡಿಸಲದೇನಾರ್ತುದಿಲ್ಲ ಗಣಪುಂಗವನಂ ॥ ೨೬

1 ಮರುಳ್ಗರಸನೆಂದು ಸೊರಹುರೆ. 2 ಶ್ಶಂಕೆಯಿಂ ಶ್ರುತಿಗಳಗಳಿಖಿಜ. 3 ಸಕಲವಿಷ್ಟಪಮೆಲ್ಲರಿವಂತೆ 4 ತಿರ್ದುವೀ. 5 ಮೆಂಬುದು.

ವ॥ ಬಳಿಕ್ಕಾದುರಾತ್ಮನೊಳ್ಗಣೇಶ್ವರನಿಂತೆಂದಂ,

ನಿನ್ನಂ ಪರಮೇಶಂ ಮೇ
ಣ್ತನ್ನಯ ಕಯ್ಯಾರೆ ಕೊಲ್ವೆನೆಂದಿರ್ದುದಱಿಂ ।
ದಂ ನಾಂ ಕಯ್ಗಾಯ್ದಂ ನಿನ
ಗಿನ್ನಂ ಬರ್ದುಕುಂಟೆ ಭೂತಳದೊಳೆಂದುಸಿರ್ದಂ ॥ ೨೭

ಅಂಥಕನ ಸಾಲ್ಗೆ ಮತ್ತೆ ಜ
ಲಂಧರನೆಂಬುವನ ಪಜ್ಜೆಗೇರಿದೆ ಮೂರ್ಖ ಮ ।
ದಾಂಧಾ ಎನುತಾಗಳ್ಸಿತ
ಕಂಧರನಿರ್ದೆಡೆಗೆ ತೆರಳ್ದನಾಗಣನಾಥಂ ॥ ೨೮

ವ॥ ಇತ್ತಲಾ ಗಜಾಸುರಂ ಕದನಲೋಲುಪ್ತನಾಗಿ ನಿಜಬಲಂಗೂಡಿ ಶೂಲಿಗಿದಿರ್ಚಿಸಿಂದು ಸನ್ನಾಹಭೇರಿಯಂ ಪೊಯ್ಸುವಿನಮಾಗಳ್,

ವರಕರ್ಮವ್ರಾತಮಮಂ ವಿಷ್ಣುವಿತತಿ ನಿಗಮವ್ಯೂಹಮಂ ಬುದ್ಧಶಾಸ್ತ್ರೋ
ತ್ಕರಮಾದಂ ಪುಣ್ಯಪುಣ್ಯಂಗಳನತಿಶಯದಿಂ ದುಷ್ಕೃತವ್ರಾತ 1 ಮುಂ ಮೇ ।
2 ಣಿರದಾ ಸಿಂಹಂಗಳಂ ಜಂಬುಕತತಿ ಕಡುಪಿಂ ಮುತ್ತುವಂತಾಗಣಾಧೀ
ಶ್ವರಸೈನ್ಯಾನೀಕಮಂ ಮುತ್ತಿದುದಸುರಬಲಂ ಸೋರ್ಕಿನೌನ್ನತ್ಯದಿಂದಂ ॥ ೨೯

3 ಪುಲಿಗಳೊಳಿ ಮೃಗವಿತತಿಯುಮು
ಳ್ದಲೆವಕ್ಕಿಗಳೊಳ್ದಿವಾಂಧಸಂದೋಹಂಗ ।
ಳ್ಕಲಹಂಗೆಯ್ವಂದದೆ ಗಣ
ಬಲಮಂ ರಕ್ಕಸನಥಟ್ಟು ತಾಂಗಿತ್ತಾಗಳ್ ॥ ೩೦

ಪಿಡಿಪಿಡಿ ತಿವಿತಿವಿ ತರಿತರಿ
ಬಡಿಬಡಿ ಹಿಮ್ಮೆಟ್ಟದಾಂತಿರಿಯಿರಿಯುಡಿಯುಡಿ ।
ಕಡಿಕಡಿಯೆನುತುಂ ಬೊಬ್ಬಿ
ಟ್ಟಡುರ್ತಿರ್ವ್ಪಲಮುಱೆ ಪಣಂಚಿ ಸೆಣಸಿತ್ತಾಗಳ್ ॥ ೩೧

ಧುರದೊಳ್ಪಡ್ಗಾಖಡ್ಗಿಯಿ
ನುರುಮುಷ್ಟಾಮುಷ್ಟಿಯಿಂದೆ ಕುಂತಾಕುಂತಿಯಿ ।

1 ಮಂತಾ. 2 ಪರಿಯೊಳ್ಸಿಂಹಂಗಳಂ. 3 ಪುಲಿಗಳೊಳ್ಮೃಗವಿತತಿಯುಮ,

ನಿರದುಱೆ ಕೇಶಾಕೇಶಿಯಿ
ನೆರಡುಂ ಬಲಮುರ್ಕಿನಿಂದೆ ಪೊಣರ್ದತ್ತಾಗಳ್ ॥ ೩೨

ಇರಿವಿಟ್ಟು ಪೊಯ್ವು ಲೌಡಿಯು
ಕರೆವಂಬಿನ ವೃಷ್ಟಿ ಮೋದುವಡ್ಡಾಯುಧದುಱೆ ।
ತರಿವ ಕೃಪಾಣದ ಕುಂತದ
ಬರುಪಿಂಗಾ ದೈತ್ಯಬಲಮದಳ್ಕಿದುದಾಗಳ್ ॥ ೩೩

ಸಿಂಗದ ಜಂಗುಳಿಯೊಳ್ಮಾ
ತಂಗಂಗಳ್ಸೆಣಸಲಾರ್ಪುವೇ ಗಣಬಲದಿಂ ।
ಭಂಗಂಬಟ್ಟೋಡಿತ್ತಸಮ
ರಾಂಗಣದಿಂದಸುರಸೇನೆ ಜವದಿಂದಾಗಳ್ ॥ ೩೪

ತನ್ನ ಬಲಂ ಭಯದಿಂದಂ
ಬೆನ್ನಿತ್ತುದನೀಕ್ಷಿಸುತ್ತಭಯಮಂ ಕುಡುತುಂ ।
ಪನ್ನತಿಕೆಯನುಱೆ ಬೀರು
ತ್ತುನ್ನಡೆದಂ ಸಂಗರಕ್ಕೆ ಕುಂಜರದೈತ್ಯಂ ॥ ೩೫

ನೆಗಪುತ್ತಾನನಮಂ ಕರಾಗ್ರದೆ ಮಹಾನಿಃಶ್ವಾಸಮುಚ್ಛ್ವಾಸದಿಂ
ಖಗಮುಖ್ಯಗ್ರಹರಾಶಿಯುಂ ಖಚರರಂ ನಕ್ಷತ್ರಸಂದೋಹಮಂ ।
ತೆಗೆವುತ್ತುಂ ಬಿಡುತುಂ ಭಯಂಗೊಳಿಸುತುಂ ತಾಂ ಬೃಂಹಿತಧ್ವಾನದಿಂ
ಜಗಮಂ ಕಾಳೆಗಕೊಲ್ದು ಬಂದನದಟಿಂದಂ ಮತ್ತನಾಗಾಸುರಂ ॥ ೩೬

ಕೆಲರಂ ಶುಂಡಾಗ್ರದಿಂದಂ ಪಿಡಿದುರದಿಡುತುಂ ಮೇಘಮಾರ್ಗಕ್ಕೆ ಸೊಕ್ಕಿಂ
ಕೆಲರಂ ವಾಲಾಂತದಿಂದಂ ಪೊಡೆದು ಕೆಡಪುತುಂ ಭೂಮಿಭಾಗಕ್ಕೆಯಾರ್ಪಿಂ ।
ಕೆಲರಂ ದಂತಂಗಳಿಂದೀಡಿರಿದುಱೆ ದೆಸೆಗೀಡಾಡುತುತ್ಸಾಹದಿಂದಂ
ಮಲೆವುತ್ತೆಟ್ಟಂದನಾಗಳ್ಪರಬಲನಳಿನೀಕುಂಜರಂ ದಾನವೇಂದ್ರಂ ॥ ೩೭

ನೆರೆ ಕೈವೀಸುತೆ ದೆಸೆದೆಸೆ
ಯರೆಯರನಾ ತಾಣಬಟ್ಟರಂ ಮಾಡುತೆ ಬಾಂ ।
ದೊರೆಯಂ ಕಲಂಕುತುಂ ಬೊ
ಬ್ಬಿರಿವುತ್ತಿರ್ದಂ ರಣಾಗ್ರದೊಳ್ಗಜದನುಜಂ ॥ ೩೮

ವ॥ ಇಂತಪ್ಪಾದೈತ್ಯನಂ ಕಂಡು ಪ್ರಮಥಯೂಥಾಧಿನಾಥರ್,

ಬೆಟ್ಟುಗಳಂ ಮುಳಿಸಿಂ ಕೀ
ಳ್ತಿದ್ದೊಡವೆಲ್ಲಂ ಬಟಿಕ್ಕವನ ತನುಹತಿಯಿಂ ।
ಮಿಟ್ಟಾದುವು ಖಚರರ್ಮಿಗೆ
ನಿಟ್ಟಿಸಿ ಥಾಪೆನುತಮೆಯ್ದೆ ಕೀರ್ತಿಸುತಿರ್ದರ್ ॥ ೩೯

ವ॥ ಆಗಳಾ ಪ್ರಮಥರ್ಗವಂ ಮುನಿದು,

ಖತಿಯಿಂದಿವರಂ ಕೊಲ್ವೆನೆ
ನುತೆಯಾರ್ಘಟಿಸುತ್ತೆ ತೋರಗಿರಿಯಂ ನಿಜಹ ।
ಸ್ತತಳದೊಳಾಂತಿಟ್ಟಂ ದು
ರ್ಮತಿಯಿಂದಂ ದುಷ್ಟನೆನಿಸುವೀ ದೈತೇಯಂ ॥ ೪೦

ಓರ್ವನಿರದಿಟ್ಟದೊಂದೇ
ಪರ್ವತಮಂತವನ ಮಾಯೆಯಿಂದಾಗಳ್ಮತ ।
ಖರ್ವಮದಾಗೆಟ್ಟರುತಿರೆ
ಯೊರ್ವನೆ ಸಂಹರಿಸಿದಂ ಮಹಾಕಾಳೆಗಮಂ ॥ ೪೧

ವ॥ ಆಮಹಾಕಾಳೆಗಮಂ ಮುನಿದೆಬ್ಬಿರ್ಪಲ್ಲಿ,

ನಂದೀಶಂ ವೀರೇಶಂ
ಸ್ಕಂದಂ ವಿಘ್ನೇಶನಂತು ಘಂಟಾಕರ್ಣಂ ।
ಬಂದಂಬಿನ ಮಪೆಗಟೆವು
ತ್ತಂದವನಂ ತರುಬಿನಿಂದರದನೇನೆಂಬೆಂ ॥ ೪೨

ಇರಿ ಸುರಗಿಯಿನವನೊಡಲಂ
ತರಿ ಶುಂಡಾದಂಡಮಂ ನಿಶಿತಪರಶುವಿನಿಂ ।
ಕೊರೆ ಕೊರಲಂ ಕಡಿ ತಲೆಯಂ
ಮುರಿದೀಡಾಡಿವನ ಕೊಂಬುಗಳನೆನುತಾರ್ದಂ ॥ ೪೩

ಭಲ್ಲೆಯದಿನಿರಿವುತುಂ ಮಿಗೆ
ಶಲ್ಲೆಹದಿಂದಿಡುತ ಪೆಱರ ಶರವೃಷ್ಟಿಗಳಂ ।
ನಿಲ್ಲದೆ ನೆರೆ ಕರೆವುತೆ ಕಡು
ವಿಲ್ಲದಟುದೈತ್ಯನೊಡನೆ ಪೋರುತ್ತಿರ್ದರ್ ॥ ೪೪

ಸರ್ವಗಣಂ ಮುಸುಕಲ್ಕಾ
ನೊರ್ವನೆ ನಿಜಮಾಯೆಯಿಂದಮಾಗಳ್ನೂರ್ಧ್ವ .
ನಿರ್ವರನಾಗಿಸಿದಂ ಸಮ
ರೋರ್ವಿಯೊಳಸುರಾದಿನಾಯಕಂ ಪದಪಿಂದಂ ॥ ೪೫

ವ॥ ಅಗಳವಂ,

ಕಡುಗಿದನೇ ಧೃತಿಗೆಟ್ಟನೆ
ಕಡುಪಳಿದುದೆ ಕಾಂತಿ ಮುಸುಳಿಸಿತೆ ಮುನ್ನಿನ್ನೂ ।
ರ್ಮಡಿ ಸಾಸಿರ್ಮಡಿ ಬಿಡದೆಯೆ
ಘುಡುಘುಡಿಸುತ್ತಿರ್ದನಲ್ಲಿ ರಕ್ಕಸರೆಱೆಯಂ ॥ ೪೬

ಎಲ್ಲಿ ನೋಡಿದೊಡಲ್ಲಿ ತಾನಿರುತಲ್ಲಿಯಾರ್ಭಟಿಸುತ್ತೆ ಮು
ತ್ತೆಲ್ಲಿ ನಿಂದರನಲ್ಲಿ ಕೊಂಬಿನೊಳೆತ್ತಿ ಭೀತಿಯನುಣ್ಮಿಸು ।
ತ್ತೆಲ್ಲಿಯಾಂತರನಲ್ಲಿ ಹಸ್ತದೊಳೌಂಕಿ ಬಾನ್ಗೆ ಬಿಸಾಡುತುಂ
ನಿಲ್ಲದೀ ಪರಿಯಲ್ಲಿದಿರ್ಚಿದರೆಲ್ಲರೊಳ್ಮಿಗೆ ತಾಂಗಿದಂ ॥ ೪೭

ಓರೋರ್ವನೊಡನೆ ಮಾಯೆಯಿ
ನೋರೋರ್ವನೆಯಾಗಿ ರಣಧರೆಯೊಳರ್ಕಿಂದಂ ।
ವಾರಣದೈತೇಯಂ ಮಿಗೆ
ಪೋರುತ್ತಿತ್ತಂ ಗಣೇಶ್ವರರ್ಗತಿಭಯಮಂ ॥ ೪೮

ಶುಂಡಾಲಂ ಕರ್ವುಗಳಂ
ತುಂಡಿಸುವಂತಾ ಗಣಂಗಳಖಿಳಾಯುಧಮಂ ।
ಖಂಡಿಸಿದಂ ಕರದಿಂ ವೇ
ತಂಡಾಸುರನಧಿಕಬಲಪರಾಕ್ರಮದಿಂದಂ ॥ ೪೯

ಅಂಧಕನುರ್ಕಂ ಮೇಣು ಜ
ಲಂಧರನದಟಂ ರಣಾಗ್ರದೊಳ್ಮೇಣಾದಶ ।
ಕಂಧರನ ಪರಾಕ್ರಮಮಂ
ಸಿಂಧುರದೈತೇಯನವರ್ಗೆ ತೋರುತಮಿರ್ದಂ ॥ ೫೦

ವ॥ ಇಂತವಂ ಮಾಟ್ಟುಪಟಳಮಂ ಖರಹರಿಸಲಾಱದೆ,

ತಕ್ಕರ್ಥಿಯದಿಂದಂ ಪಾ
ಪಕ್ಕೆ 1 ಪೆಡವ್ಮೆಟ್ಟುವಂತೆ ಗಣಸಂದೋಹಂ ।
ರಕ್ಕಸರಾಣ್ಮನ ಬೀರ
ಕ್ಕಕ್ಕಳಿಸುತ್ತಾಗಳೀಶನಂ ಮರೆವೊಕ್ಕರ್ ॥ ೫೧

ವ॥ ಆಗಳ್ಪರಮೇಶ್ವರಂ ದರಹಸಿತಾನನನಾಗಿ,

ಪೊಗರ್ವಿಡಿದೊಪ್ಪುತಿರ್ಪ ಶತಕೋಟಿಯನಿಟ್ಟೊಡದಾಗಳೇ ವಲಂ
ಮಿಗೆ ಶತಕೋಟಿಯಾಗಿಯುವನಂಗವನುಚ್ಚಳಿಸಲ್ಕೆ ಗಾಯದಿಂ ।
ದೊಗೆಃವರುಣಾಂಬುವಿಂದವನ ದೇಹಮದೊಪ್ಪಿತು ಗೈರಿಕಾದಿಧಾ
ತುಗಳೆಸೆದಿರ್ಪ ನೀಲಗಿರಿಯೆಂಬಿನೆಗಂ ಸೊಗಸೀವುತಾಕ್ಷಣಂ ॥ ೫೨

ವ॥ ಆಗಳವಂ ಕನಲ್ದು ಈಶ್ವರಂಗೆ ಮುನಿದು,

ಕುಲಪರ್ವತಂಗಳಂ ಸುಂ
ಡಿಲನುರೆ ಕೀಳ್ತಿಡುವಿನಂ ಬಟಿಕ್ಕವುದಾವಾ ।
ನಲನಂ ಮಿಗೆ ಮುಸುಕಿರ್ದಾ
ಶಲಭಂಗಳ ತೆರದೆ ಲಯಮನೆಯ್ದಿದುವಾಗಳ್ । ೫೩

ವ॥ ಆಗಳಗಚಾಪಂ ನಗುತ್ತೆ,

ಗದೆಗೊಂಡಿಡೆ ಕರಿದನುಜನ
ಬಿದುವಡೆನರುಣಾಂಬು ಮೌಕ್ತಿಕಪ್ರಕರಂಸೂ ।
ಸಿದುವವನ ವಿಕ್ರಮಂ ಜಸ
ದೊದವುಂ ಮಿಗೆ ಜಗುಳ್ವತೆರದೊಳಾ ಧುರದೆಡೆಯೊಳ್ ॥ ೫೪

ವ॥ ಆಗಳವಂ ಕೆರಳ್ದು,

ಮನಸಿಜಮಾನಪುರಹರನ
ನೆನಸುಂ ಮಂತ್ರಾಸ್ತ್ರದಿಂದೆ ನೆರೆ ಮುಸುಕುವಿನಂ ।
ಘನ ವಡಬಾನಳನಂ ಸೀ
ರ್ಪನಿಗಳ್ಮಿಗೆ ಮುತ್ತುವಂದಮಾದತ್ತಾಗಳ್ ॥ ೫೫

---

1 ಪೆಡಂಮೆಟ್ಟು.

ಉಳುಪಿದೊಡವನಂ ಲೋಕ
ಕ್ಕುಳಿವಿನ್ನಿಲ್ಲೆಂದು ತಿಳಿದು ಮುಮ್ಮನೆಗೈದುವ ।
ನ್ನಳವಡಿಸಿ ಝುಳಪಿಸುತ್ತುಂ
ಮುಳಿದಿಟ್ಟಂ ದಾನವೇಂದ್ರನಂ ಮದನಹರಂ ॥ ೫೬

ತರಣಿಸಹಸ್ರಕೋಟಿಗಳೆವೊಬ್ಬುಳಿಗೊಂಡುವೊ ವೈದ್ಯುತಾಗ್ನಿಗ
ಳ್ಸ್ಥಿರತರಮಾದ ರೂಹುದಳೆದೇಕಮದಾದುವೊ ನೋಡುತಿರ್ಪಿನಂ ।
ಹರನುರಿಗಣ್ಣ ಕೆಂಬೆಳಗು ನೀಳ್ದುಱಿ ಪುಟ್ಟಿಯದಾಗಿ ಬಂದುದೋ
ಅರಿದೆನಲಾ ತ್ರಿಶೂಲಮಿರದೆಟ್ಟರುತಿರ್ದುದತೀವ ತೇಜದಿಂ ॥ ೫೭

ವ॥ ಅಂತು ಬಂದಾತ್ರಿಶೂಲಮುವಗ್ರಹಮನುರ್ಚಿ ಪಂಚಕದೊಳ್ಪೊಯ್ವಿನಂ,

ಅಸುವಿಂಗುಬ್ಬಸಮಾಗ
ಲ್ಪಸುಮುಗಿದಕ್ಷಿಗಳಿನೆಯ್ದೆ ಕುಕ್ಕುರಿಸಿ ಕುಳಿ ।
ತ್ತೆಸೆದಿರ್ದಂ ಗಜದೈತ್ಯಂ
ಮಿಸುಪಶನಿಯ ಘಾತದಿಂದೆ ಕೆಡೆದದ್ರಿಯವೋಲ್ ॥ ೫೮

ಆ ಸಮಯದೊಳನಿಮಿಷತತಿ
ಸೂಸಿದುದರಳ್ವಳೆಯನಮರದುಂದುಭಿ ಮೊರೆದುವು ।
ಘೂಸತಿ ನಲಿದಳ್ಪುಷ್ಪರ
ನಾಸಮಡಾರ್ಗೀಯದತುಳಹರ್ಷೋದಯಮಂ ॥ ೫೯

ವ॥ ಆಗಳಾ ದೈತ್ಯನಿನಿತು ಚೇತನಂದಾಳ್ದು ಕಣ್ದೆರೆದಿದಿರೊಳಿರ್ಪಭವನಂ ಕಂಡಜ್ಞಾನಂ ಪಿಂಗಿ,

ಕರಮಂ ಸಾರ್ಚಿ ಶಿರಾಗ್ರದಲ್ಲಿ ಕರಿದೈತ್ಯೇಯಂ ಮಹಾದೇವನಂ
ಗಿರಿಜಾನಾಥನನಂಧಕಾರಿ ದನುಜಕ್ಷೋಣೀಂದ್ರದಂಭೋಳಿಯಂ ।
ಹರನಂ ಭರ್ಗನನಚ್ಯುತಾಕ್ಷಮಹಿತಶ್ರೀಪಾದನಂ ಚಂದ್ರಶೇ
ಖರನಂ ಸೋರ್ಕಳಿದೀಕ್ಷಿಸುತ್ತೆ ಪೊಗಳ್ದಂ ಕಾಶೀಪುರಾಧೀಶನಂ ॥ ೬೦

ರಗಳೆ॥ ಶ್ರೀಗಿರಿಜಾಸ್ಯಾಂಬುಜದಿನಕರ ಜಯ ।
ಸಾಗರಶಯನವಿನುತ ಶಂಕರ ಜಯ ।

ದೇವ ಚತುರ್ದಶಭುವನನಾಥ ಜಯ ।
ದೇವ ಧರಿತ್ರೀತಳವರೂಥ ಜಯ ।
ದೇವ ಫಣೀಶ್ವರಯಜ್ಞಸೂತ್ರ ಜಯ ।
ದೇವ ಪವಿತ್ರಪರಮಚರಿತ್ರ ಜಯ ।
ದೇವ ಭಜಕಸಂದೋಹಬಂಧು ಜಯ ।
ದೇವ ವಿನುತಜನಸುಕೃತಸಿಂಧು ಜಯ ।
ದೇವ ವಿಶುದ್ಧಸ್ಫಟಿಕವರ್ಣ ಜಯ ।
ದೇವ ಭುಜಂಗಾಕಲ್ಪಕರ್ಣ ಜಯ ।
ದೇವ ಮನೋಭವದರ್ಪನಾಶ ಜಯ ।
ದೇವ ನಿರಂತರಗಗನಕೇಶ ಜಯ ।
ದೇವ ದಂಡಧರಗರ್ವಹರಣ ಜಯ ।
ದೇವ ಸುರಾಧಿಪವಿನುತಚರಣ ಜಯ ।
ದೇವ ತ್ರಿಭುವನಭರಣಕೇಳಿ ಜಯ ।
ದೇವ ಸುಧಾಕರಶಕಲಮೌಳಿ ಜಯ ।
ದೇವ ವಿರಿಂಚಿಶಿರಚ್ಛೇದನ ಜಯ ।
ದೇವ ವಿಮಲಕಕುಭಾಚ್ಛಾದನ ಜಯ ।
ದೇವ ಧನಂಜಯವಿಲಸತ್ಕರ ಜಯ ।
ದೇವ ವಿದಾರಿತದನುಜನಿಕರ ಜಯ ।
ದೇವ ಚಿರಂತನವಾಗತೀತ ಜಯ ।
ದೇವ ತರಣಿಕೋಟಿಪ್ರಕಾಶ ಜಯ ।
ದೇವ ಸದಾಶಿವ ಸಂಪ್ರಹೃತಮುಖ ಜಯ ।
ದೇವ ಮಹೇಶ ಧನೇಶ್ವರಸಖ ಜಯ ।
ದೇವ ಜಲಂಧರದನುಜಮಥನ ಜಯ ।
ದೇವ ಸರ್ವಹಿತಪುಣ್ಯಕಥನ ಜಯ ।
ದೇವಾರ್ಯಮಶಶಿವಹ್ನಿನಯನ ಜಯ ।
ದೇವ ಶರೀಕೃತಶೇಷಶಯನ ಜಯ ।
ದೇವ ಹಿರಣ್ಯೋದರನುತಪದ ಜಯ ।
ದೇವ ಭವಾನೀಚಿತ್ತಾಸ್ಪದ ಜಯ ।
ಶಾಶ್ವತಾಂಗ ಜಯ ಶಾಂತಮೂರ್ತಿ ಜಯ ।
ವಿಶ್ವೇಶ್ವರ ಜಯ ವಿಮಲಕೀರ್ತಿ ಜಯ ॥

---

ವ॥ ಇಂತು ನುತಿಗೆಯ್ದು ಕೃತಕೃತ್ಯನಾಗಿರ್ದ ಗಜಾಸುರಂಗೀಶ್ವರನಿಂತೆಂದಂ,

ಸುರುಚಿರಮಾದ ನಿನ್ನ ನುತಿಗಾಂ ಬಗೆದಂದುಱೆ ಮೆಚ್ಚಿದೆಂ ವಲಂ
ಪಿರಿಯ ತನೂಜನಪ್ಪ ಗಣನಾಯಕನಾನನಮಂ ಸಮಂತು ಕಂ।
ಡಿರವೆನಗಾದುದಿಂದು ಮಿಗೆ ನಿನ್ನಯ ಪೆರ್ಮೆಗಗಾಣುತೀಕ್ಷಣಂ
ವರವನನಂತಮಂ ಕುಡುವೆನೀಪ್ಸಿತಮಂ ನುಡಿಯೆಂದನೀಶ್ವರಂ ॥ ೬೧

ಸುರವರಸಂಪದಂ ನಿನಗೆ ಬಾಳ್ತೆಯೊ ಬೊಮ್ಮನ ಬಾಳ್ಕೆ ಬಾಳ್ತೆಯೋ
ಹರಿಯುರುಭಾಗ್ಯಮಂತದುವೆ ಬಾಳ್ತೆಯೊ ರುದ್ರನಲಂಪು ಬಾಳ್ತೆಯೋ ।
ಪರಮಗಣಾಧಿಪತ್ಯಮದು ಬಾಳ್ತೆಯೊ ನಿನ್ನ ಮನಸ್ಸಿನಿಷ್ಟಮಂ
ತುರಿಹದೆ ಬೇಡು ನಾಂ ಕುಡುವೆನೆಂದುಸಿರ್ದಂ ಕರುಣಾಕರಂ ಹರಂ ॥ ೬೨

ವ॥ ಅಂತೀಶ್ವರಂ ನಿರವಿಸಲವನಿಂತೆಂದಂ,

ಮರಣಂ ಸಾರ್ದಲ್ಲಿ ನಿಮ್ಮಾ ಚರಣಮನುಱೆ ಚರ್ಮಾಕ್ಷಿಯಿಂ ಕಾಣ್ಬ ಬಾಗ್ಯಂ
ದೊರೆಕೊಂಡಂಗಿಂದ್ರಪಟ್ಟಂ ಸರಸಿಜಭವಪಟ್ಟಂ ಮಹಾವಿಷ್ಣುಪಟ್ಟಂ ।
ಪರಮಾಣುಪ್ರಾಯಮಾಗಿರ್ಪುವು ಗಣಪದಮುಂ ರುದ್ರಸಂಪತ್ತುಮಾಗ
ಳ್ಬರುತಿರ್ಕುಂ ತಾವೆ ನಾನೊಂದು ವರಮನೆಱೆಯೆಂ ಬಾಲಚಂದ್ರಾವತಂಸಾ॥ ೬೩

ಪಿರಿದುಂ ತ್ವತ್ಕೃಪೆ ನನ್ನೊಳಿರ್ದ ಬಟಿಕಂ ನಾಂ ಬೇಡುವೆಂ ಬೇಡುವೆಂ
ವರಮೊಂದಂ ಬಟಿಕೆನ್ನ ಚರ್ಮವನು ಸೀಳ್ದೊಂದಂಬರಂಗೆಯ್ದು ಬ ।
ಚ್ಚರದಿಂದಾಂತು ಗಜಾಜಿನಾಂಬರನೆನಿಪ್ಪಾ ನಾಮವಂ ತಾಳ್ದೊಡಾ
ವರವಂ ಕೋಟಿಯನಿತ್ತವಂ ನನಗೆ ನೀಂ ಕಾಶೀಪುರಾಧೀಶ್ವರಾ ॥ ೬೪

ವ॥ ಇಂತು ಬಿನ್ನವಿಸಲೊಡಂ,

ಬಲೆಗಾಟಿಂ ಮಿಾನ್ಸಿಲುಕಿದ
ಬಳೆಗೊಡಪಲವೆಲ್ಲಮುದಿರ್ಪವೋಲಭವಂ ಸುಂ ।
ಡಿಲನೆತ್ತಿಯಲುಗಲುದಿರ್ದುವು
ಪಲತೆರಮಾದಸ್ಥಿಯುವನ ಪೇರೊಡಲಿಂದಂ ॥ ೬೫

ವ॥ ಬಟಿಯಂ,

ಎನಿಸುಂ ಕರ್ಬುರವರ್ಣದಿಂ ಮಿರುಗುತಿರ್ಪಾತೋಲನೊರ್ಡ್ತಿ ಸ
ಬ್ರನೆ ಸೀಳ್ದಂತದನಾಕ್ಷಣಂ ಪೊದೆದು ನಂದೀಶಾದಿಗಳ್ನೋಳ್ಪಿನಂ ।
ಮಿನುಗುತ್ತಿರ್ಪ ನವೀನನೀಲವಸನಂದಾಳ್ದಿಪ್ಪವಾ ಕಾಮಪಾ
ಲನವೊಲ್ಕಾಮವಿರೋಧಿ ಕಣ್ಗೆಸೆದನೇನೆಂದೆಂದನಾಶ್ಚರ್ಯಮಂ ॥ ೬೬

[1] ಮುನಿಗಳ್ವಾರ್ತೆಯನಿದ ಕೇ
ಳ್ದನುರಾಗದೊಳೀಶನಿರ್ದೆಡೆಗೆ ಬಂದಾತಂ ।
ಗೆ ನಮಿಸಿ ನುತಿಸುತ್ತಿರೆ ಕಂ
ಡನಘಂ ಕಾರುಣ್ಯದಿಂದವಜ಼ೊಳಿಂತೆಂದಂ ॥ ೬೭

ಮುನ್ನಿನವೋಲ್ನಿಮ್ಮಾಶ್ರಮ
ವಂ ನೀವೇಸಾರ್ದು [2] ಸುಖಮಿರಿಮೆನುತಮರಂ ।
ಮನ್ನಿಸಿ ಬೀಳ್ಕೊಟ್ಟಂ ತ್ರಿಜ
[3] ಗನ್ನಾಥನುಮಾಸನಾಥನವನಿವರೂಥಂ ॥ ೬೮

ವ॥ ಅಂತಾ ಮುನಿಗಳಂ ಬೀಳ್ಕೊಟ್ಟು ವೃಷಭಾರೂಢನಾಗಿ ಸರ್ವಗಣಸ
ಮೇತಂ ವಿಶ್ವನಾಥಂ ಕಾಶೀಪುರವಮಂ ಪೊಕ್ಕು ಬರ್ಪಲ್ಲಿ,

ಅವರಿವರಂ ನೋಡಿದ ನೇ
ತ್ರವಿವಂ ತೊಳೆದೀಶನಡಿಯನೀಕ್ಷಿಪೆವೆನುತುಂ ।
ಯುವತಿಯೆ ನೀರ್ದಳೆದಳೊ ಎಂ
ಬವೊಲಾನಂದಾಶ್ರು ಸೂಸೆ ನೋಡಿದಳೊರ್ವಳ್ ೬೯

ವ॥ ಮತ್ತಮೊರ್ವಳ್ವಿಶ್ವನಾಥನಂ ನೋಳ್ಪಲ್ಲಿ,

ಮನವೆಂಬ ಗೃಹವನೀ ಪ
ತ್ತನವಂ ಪುಗುವಂತೆ ಪುಗುವನೀಶನೆನುತ್ತುಂ ।
ವಿನಯದೆ ಕಟ್ಟಿದ ಗುಡಿಗಳೊ
ಎನೆ ರೋಮಾಂಚನವಿತಾನದಿಂದೆಸೆದಿರ್ದಳ್ ॥ ೭೦

ವ॥ ಮತ್ತಂ,

---

1 ಮುನಿಗಳೀವಾರ್ತೆಯನಂಕೇ. 2 ಸುಖಮಿರಿಂಯುಂದವರಂ.
3 ಗನ್ನಾಥಂಗೌರೀನಾಥನವನಿವರೂಥಂ.

ಹರನಂ ನೋೞ್ಪಡೆಯಲ್ಲಿಯೊರ್ವಬಲೆ ಚಿತ್ತಾಸಕ್ತಿಯೌನ್ನತ್ಯದಿಂ
ಪರವಟ್ಟಿರ್ಪಿನಮಂಗಸೌರಭಕಳಿವ್ರಾತಂ ಮುಸುಂಕುತ್ತಿರ ।
ಲ್ಪರಶೃಂಗಾರರಸಾಭಿಷೇಕವನೊರಲ್ದಂಗೀಕೃತಂಗೆಯ್ದು ತ
ದ್ಗಿರಿಶಾಲೋಕನಕೆಂದು ಬಂದ ತೆರದಿಂದೊಪ್ಪಿರ್ದಳಾ ತಾಣದೊಳ್ ॥ ೭೧

ಉರುತಪದಿಂದಗೇಶ್ವರತನೂಜೆಯಪರ್ಣೆಯದಾದಳಂತದೇ
ನರಿದಿವಳೀಶನಂ ಪಿರಿದು ನೋೞ್ಪಡೆಯೊಳ್ಬೆರಗಾಗಿ ನಿಲ್ವಿನಂ ।
ಕರತಳ ನಾಗವಲ್ಲಿಯ ದಳಂ ಜಗುಳ್ದೀಗಳಪರ್ಣೆಯಾದಳೀ
ಸರಸಿಜನೇತ್ರೆಯಂತಿವಳೆಯಗ್ಗಳವೆಂದುೞಿ ಚಲ್ಲವಾಡಿದಳ್ ॥ ೭೨

ವ॥ ಮತ್ತಮೊರ್ವಳ್ಪ್ರೌಢಾಂಗನೆ ಪರಮೇಶ್ವರನಂ ಕಂಡು ಪೊರೆಯ ಸಖಿ
ಯೊಳುಸುರುತ್ತಿರ್ದಳದೆಂತೆನೆ,

ನಿರುತಂ ಮುಕ್ತಾಹಾರದಿ
ನಿರುತಿರ್ಪ ಮುನಿವ್ರಜಕ್ಕೆ ಕಾಣಿಸುವಭವಂ ।
ವರಮುಕ್ತಾಹಾರಂಗಳಿ
ನಿರದೆಸೆವೆಮ್ಮಕ್ಷಿಗಳ್ಗದೇಂ ಕಾಣಿಸನೇ ॥ ೭೩

ವೇದಂಗಳರಸಿ ಕಾಣದ
ಮಾದೇವನ ರೂಹುಗಂಡೆನಾವೇದಕೆ ಮಿಗಿ ।
ಲಾದೆಂ ನನ್ನಯ ಘನಸುಕೃ
ತೋದಯವೆಂತೋ ಎನುತ್ತೆ ನುಡಿವುತ್ತಿರ್ದಳ್ ॥ ೭೪

ಶಿವನಂ ತೋರು ಗಜಾಜಿನಾಂಬರವನಾಂತೊಪ್ಪಿರ್ಪನಂ ತೋರುಮಾ
ಧವನಂ ತೋರು ನತಾಮರದ್ರುಮನೆನಿಪ್ಪಾ ಪೆಂಪುದಾಳ್ದಾ ಕೃಪಾ ।
ರ್ಣವನಂ ತೋರು ಮಹೇಶನಂ ಗಿರಿಶನಂ ಕಾಶೀಪುರಾಧೀಶನಂ
ಧವನಂ ತೋರೆನುತಿರ್ದಳಾ ಪದದೊಳೋರ್ವಳ್ಬಾಲೆ ಮತ್ತೊರ್ವಳೊಳ್ ॥ ೭೫

ತೊಟ್ಟಿಲರುಣಿವಚ್ಚದಿನಳ
ವಟ್ಟಜಿನಾಂಬರದಿನೊಪ್ಪುವಂ ಶಿವನೀತಂ ।
ನಿಟ್ಟಿಸು ನೀನೆಂದೆನುತುಂ
ಸುಟ್ಟಿಸಿದಳ್ಬಾಲಿಕೆಗೆ ವಿದಗ್ಧೆಯದಾಗಳ್ ॥ ೭೬

ಕಂಡೆಂ ಕಾಮಾರಿಯಂ ಭರ್ಗನನನುಪಮನಂ ಭೀಮನಂ ಸೋಮನಂ ನಾಂ
ಕಂಡೆಂ ದಕ್ಷಾಧ್ವರಧ್ವಂಸಿಯನುಱುಮಹಿಮಾವೇಷ್ಟನಂ ಶ್ರೇಷ್ಠನಂ ನಾಂ ।

ಕಂಡೆಂ ಬ್ರಹ್ಮೇಂದ್ರಮುಖ್ಯಾಮರನತಪದನಂ ಭದ್ರನಂ ರುದ್ರನಂ ನಾಂ
ಕಂಡೆಂ ಕಾಶೀಪುರಾಧೀಶನನೆನುತುಸಿರ್ದಳ್ಬಾರೆಯಾನಂದದಿಂದಂ ॥ ೭೭

ಲಲನೆಯರಕ್ಷಿಚಕೋರಂ
ನಲದುವು ಹೃತ್ತಾಪಮಳಿದುದಾನಂದಾಂಬುಧಿ ।
ನೆರೆಯಂ ಮಿಕ್ಕುರ್ಕಿತ್ತಂ
ದೊಲವಿಂದಂ ಸೋಮದರ್ಶನದೊಳುಚಿತಮೆನಲ್ ॥ ೭೮

ಪೀನಸ್ತನಕುಂಭದೆ ಮೃದು
ಯಾನದೆ ಮೆಯ್ಗೆಂಪಿನಿಂದೆಯಾಸತಿಯರ್ಸೊ ।
ಕ್ಕಾನೆವೊರೆಯೊಪ್ಪಿರ್ದು೯ಂ ಪಂ
ಚಾನನದರ್ಶನದೆ ಹರ್ಷವಡೆದರ್ಚಿತ್ರಂ ॥ ೭೯

ಎವೆಯಾಟಮನುಳಿದೊರ್ವ
ಳ್ಶಿವನಂ ಸದ್ಭಕ್ತಿಯಿಂದೆ ನೋಡಿದಳಾಗ ।
ಳ್ದಿವಿಜಪಡಂ ತನಗುಟಿ ಸಂ
ಭವಿಸಿತ್ತೆಂದರಿಪುವಂತೆಯಾಪುರಕೆಲ್ಲಂ ॥ ೮೦

ವ॥ ಇಂತನಂತವಿಳಾಸದಿಂ ನೋೞ್ಪ ಕಾಮಿನೀಜನಕ್ಕತಿಸಂತೋಷಮಂ ಬೀಱುತ್ತಂ,

ಪುರಜನಕಂ ಪರಿಜನಕಂ
ಪರಮಸುಖೋದಯಮನೀವುತುಂ ಗುರು ವಿಶ್ವೇ ।
ಶ್ವರನರಮನೆಯಂ ಪೊಕ್ಕಾ
ದರದಿಂದಗಜಾತೆಯೊಡನೆ ಸುಖದಿಂದಿರ್ದಂ ॥ ೮೧

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಳಾಗ್ರದೊಳ್ ॥ ೮೨

ಮುಳಿಯಲಗೇಂದ್ರಜಾತೆ ತಲೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ ।

ತುಟಿಲ 1 ನೊಡರ್ಚಲಾಲ್ದು ಮೊಗದೊಳ್ಮೊಗವಿಸ್ಕುತೆ ಸಂತವಿಟ್ಟು ಬಾಂ
ಬೊಡೆಗೊಲವಿತ್ತ ಜಾಣ ಸಲಪೀ ಜಗಮುಂ ಗುರುವಿಶ್ವವಲ್ಲಭಾ ॥ ೮೩

ಉತ್ಸಾಹವೃತ್ತಂ॥ ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬೆರೆದ ರಜಮು 2 ನಿರದೆ ಸವಿದು ತಣಿದು ತನ್ನ ಲೀಲೆಯಿಂ ।
3 ವೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮಿಗಭೀಷ್ಟಮಂ ॥ ೮೪

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತ
ಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದ
ಮಧುಕರಾಯಮಾಣ ಶ್ರೀಕಂಠಪಂಶಾರ್ಣವಪರಿಪೂರ್ಣಚಂದ್ರನೆ
ನಿಪ ಸತ್ಯವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ
ಶ್ರೀ ವೀರಭದ್ರವಿಜಯ ಮಹಾಪ್ರಬಂಧದೊಳ್
ಋಷ್ಯಾಶ್ರಮವರ್ಣನಂ ಗಜಾಸುರವಿಜಯ
ತದ್ವರಪ್ರದಾನ ಪುರಪ್ರವೇಶವರ್ಣನಂ
ಪಂಚಮಾಶ್ವಾಸಂ ಸಂಪೂರ್ಣಂ.

---

1 ನೊಡರ್ಚದೊಲ್ದು. 2 ನುರದೆ. 3 ತೊರೆವ.

# ಷಷ್ಠಾಶ್ವಾಸಂ

ಅಗಜಾಧರಾಮೃತವನ್ನೈ
ಮೊಗದಿಂದಂ ಸವಿದು ತಣಿಯದಿರ್ದುಂ ಚಿತ್ರಂ ।
ಮಿಗೆ ನಿತ್ಯತೃಪ್ತನೆನಿಸಿ
ರ್ಪಗಣಿತಘನಮಹಿಮ ವಿಶ್ವಪತಿ ಸಲಹೆಮ್ಮಂ ॥ ೧

ಈ ರೀತಿಯೊಳನವರತಂ
ವಾರಾಣಸಿಯಧಿಪ ವಿಶ್ವಪತಿ ಸಂತಸದಿಂ ।
ದೀರ್ರೇಳೆಂದೆನಿಸುವ ಭುವ
ನಾರಾಧ್ಯಂ ತಾನೆಯಾಗಿ ರಾಜಿಸುತಿರ್ದಂ ॥ ೨

ವ॥ ಇಂತು ಕತಿಪಯದಿವಸಂ ವಿಶ್ವನಾಥನಿರ್ಪಿನಂ,

ಜಲಮನನೂನಮಾಗಿ ತೆಗೆದಂ ಜಲತಸ್ಕರನಾ ನಿದಾಘದೊಳ್
ಜಲಪತಿಯೆಂಬ ನಲ್ವೆಸರಿನಿರ್ಪನಗಿಂತಿದು ಭಂಗವೆಂದು ತ ।
ಜ್ಜಲಮನದೆಂತು 1 ಮಾಡುವನೊ ತಾನೆನುತುಂ ವರುಣಂ ಬಳಿಕ್ಕಮೆ
ಯ್ದಲರೆನೆ ತೀಡಿದತ್ತು ಮಿಗೆ ಬಂಧುರಪಶ್ಚಿಮದಿಗ್ಭವಾನಿಲಂ ॥ ೩

ಇನಿತು ದಿವಸಮಾದಂ ಲೋಕಮಂ ತನ್ನ ಕೈಯಾ
ರೆನಸುಮಿರದೆ ಸುಟ್ಟಾಪಾಪಿಯಾಸೂರ್ಯನೆಂದಾ ।
2 ತನನುಱು ಕಿನಿಸಿಂದಂ ಕೊರ್ವೆನೆಂದೆಯ್ದಿ ಮುತ್ತಿ
ರ್ದನುವೆನೆ ಘನಜಾಲಂ ವ್ಯೋಮದೊಳ್ತೋರ್ದುದಾಗಳ್ ॥ ೪

ಮುಗಿಲ್ಗಳ ಮೊತ್ತವಾಗಸವನಳ್ಕರಿಯಲ್ಕೆಗೆ ಪೊಕ್ಕುದಾಳ್ದುಮ
ತ್ತಗಲದೆ ಸೂಡನೆತ್ತುವೊಡೆ ಬಂದ ಗಿರಿವ್ರಜವೆಂದು ಭೀತಿಯಿಂ ।
ದಗರಿಪು ಕಣ್ಬಿಡುತ್ತಮುಱು ತನ್ನಯ ಬಿಲ್ಲ ಬಿಸುಟ್ಟನೆಂಬಿನಂ
ಗಗನದೊಳಾಗಳೆಯ್ದೆ ಸರೆ ರಂಜಿಸಿದತ್ತು ಸುರೇಂದ್ರಕಾರ್ಮುಕಂ ॥ ೫

1 ಮಾಡುವೆನೊ. 2 ತನುಜು ಕಿನಿಸಿನಿಂದಂ.

ಪಿರಿದಪ್ಪ ನಿದಾಘೇಂದ್ರನ
ಸಿರಿಯಳಿವಂ ಸೂಚಿಸಲ್ಕೆ ದಶದಿಕ್ಕುಗಳುೞೆ ।
ವೊರೆವುತ್ಪಾತದ ರವಮೆನೆ
ಭರದಿಂದಬ್ಬರಿಸುತಿರ್ದುವಾಗಳ್ಸಿಡಿಲ್ಗಳ್ ॥ ೭

ಸಾದರದೆ ನೀಲಕಂಠಾ
ಮೋದಿಯೆನಿಸಿ ಬರಿಸರಿತು ಬಳಿಕ್ಕೊಲವಿಂದಂ ।
ಕೇಡಗೆಗಿತ್ತುದು ಪರಮಸು
ಖೋದಯಮಂ ಕಾಲದೊಳ್ವಿಚಾರಮದುಂಟೇ ॥ ೭

ವಾರಿನಿಧಾನಕೆಯ್ದಿ ಕಡುಬೇಸಗೆಯುಲ್ಲರತಬ್ಧಸಂಕುಳಂ
ನೀರಪರಾಗಮಂ ಕುಡಿದು ಬಂದುೞೆಯುಳ್ಕಮೆಯಾಗೆ ನಾಡೆಯು ।
ದ್ಗಾರಿಸುವಲ್ಲಿ ತನ್ನೊಡಲೊಳೊಪ್ಪುವ ಮೌಕ್ತಿಕಗೂಡಿ ಬೀಳ್ವವೊ
1 ಲ್ವಾರಿವರಲ್ಪನಪ್ರತತಿಯಿಂ ಬಿಡದಂದುದಿರ್ದತ್ತು ಸಂತತಂ ॥ ೮

ಬೇಸಗೆಯಿಂ ಬೆಂದಿಳೆಗಮ್ಮ
ತಾಸಾರಮನೆಯ್ದೆ ಕರೆದನೋ ದಯೆಯಿಂದಂ ।
ವಾಸವನೆಂಬಂದದೆ ಸರಿ
ಸೂಸಿದುವಾಕಾಲದಲ್ಲಿ ಪಗಲಿರುಳೊದವಿಂ ॥ ೯

ಗಗನಸ್ತ್ರೀಯುಂ ಲಸನ್ಮೇಘವೆನಿಸುವ ವಿಟಂ ಕೂಡುವಾನಂದದೊಳ್ನಿ
ಟ್ಟಗೆವೊಣ್ಮುತ್ತಿರ್ದ ಕಂಠಸ್ವನಮೆನೆ ಮೊಳಗೊಪ್ಪಿತ್ತು ತಚ್ಛಾಂತಿಪುಮ್ರ್ಮಾಂ ।
ಬುಗಳೋರಂತಕ್ಕುವೋಲ್ಬಲ್ಸರಿ ಸುರಿದುದು ರಾಗಾಂತನೇತ್ರಾಂಬೂಲಾವಿಂ
ಚುಗಳೊಪ್ಪುತ್ತಿರ್ದುವಾಗಳ್ ಜನಕತಿಮುದಮಂ ಸೂಸುತಂ ಲೀಲೆಯಿಂದಂ ॥ ೧೦

ಚಾತಕಪಕ್ಷಿ 2 ಸಂಚಯಕದಾವಗಮೊಪ್ಪುವ ಬರ್ಹಿವೃಂದಕಂ
ಪ್ರೀತಿಯನಿತ್ತುದಂಚೆಗಳ ತಿಂತಿಣಿಗಂ ಬಗೆವೆತ್ತು ತೋರ್ಪ ಕಂ ।
ಜಾತಸಮೂಹಕಂ ವಿರಹಿಗಂದಳಲಿತ್ತುದು ನೋಡೆಯಭ್ರಕಾ
ಲಾತಿಶಯಂ ಬಳಿಕ್ಕೆ ಸಮವಾಗೆಸೆದಿರ್ಪವರುಂಟೆ ಸರ್ವರೊಳ್ ೧೧

ಧರೆಯೊಳ್ದುರ್ದಿನಮೆಂಬುದೆಯ್ದೆ ಸಫಲಾರಂಭಕ್ಕೆ ತಾಂ ಪೊಲ್ಲಮೆಂ
ದೊರೆವರ್ಬಿತ್ತೆಗರಾವಗಂ ಬಿಡದೆ ತೋರ್ಪಾವೃಷ್ಟಿಕಾಲಕ್ಕೆ ಸಂ ।

---

1 ಲ್ವಾರಿವರಲ್ಗಳಾಘನಮುಹದಿನಂದುದಿರ್ದುವು ನಿರಂತರಂ.  2 ಸಂಚಯುಮ.

1 ಚರಿಸತ್ತೊತ್ತುವ ಮೇಘಮೇ ಸುಫಲಸಂದೋಹಕ್ಕೆ ತಾಂ ಬೀಜಮಾ
ಯ್ತುರಕೇ ಕಾಲದ ವೈಮೆಯಯಂಬುದದು ತಾನೇಗೆಯ್ಯದೋ ಧಾತ್ರಿಯೊಳ್ ॥ ೧೨

ಇಂತಪ್ಪ ವರ್ಷಸಮಯಂ
ಸಂತತಮುಗಜಾತೆಯೊಳ್ಪಿರೆದ ವಿಶ್ವೇಶ್ವರ ।
ಗಂತದು ನಿಮಿಷಾರ್ಧಂದೋರ್
ತಾಂ ತೋರಿತ್ತಾಗಳಲ್ಲಿದೇನಚ್ಚರಿಯೋ ॥ ೧೩

ವ॥ ಅನಂತರಂ ಶರತ್ಸಮಯಂ ಮೆಯ್ದೋರ್ದುದದೆಂತೆಂದೊಡೆ,

ಇರದೆ ಶರತ್ಕಾಲವಿಟನ
2 ಕರದಾ ಸೋಂಕಿಂದೆ ಗಗನನಾರಿಯ ನೀಲಾಂ ।
ಬರಮದು ಜಗುಳ್ದುದೋ ಎನೆ
ಪರೆದತ್ತಾಗಸಮನಳುರ್ವ ನೀಲಘನೌಘಂ ॥ ೧೪

ಮುಗಿಲೊಡ್ಡಿಂದ್ರನಧನುಮಿಂ
ಚುಗಳೇಳೆ ಬಳಿಕ್ಕೆ ವಾರಿವರಲಿಂದಂ ಪೆ ।
ರ್ಚುಗೆಗೊಂಡ ಕಾಲಮುದು ಪ
ತ್ತುಗೆಯಂ ತಳೆದಿರ್ಪುದೆ 3 ಯುಳಿದತ್ತಾಕ್ಷಣದೊಳ್ ॥ ೧೫

ಕಾರಪಯೋದವೆಂಬ ಮಸಿಗರ್ಪಡಮಂ ಸುರಗಂಗೆಯಲ್ಲಿ ಕೈ
ಯಾರೆ ಕರಂ ಶರದ್ರಜಕನಂದುಜುಜಿ ಕರ್ಚಿ ಬೆಳರ್ತ ವಸ್ತ್ರಮಂ ।
ತಾರಗೆವಟ್ಟೆಯೊಳ್ಪರಪಲಂತದು ತೋರ್ಪ ಬೆಡಂಗೊ ತಾನೆನಲ್
ಶಾರದನೀರದಂ ಬಳಿಕೆ ಬೆಳ್ಪಡರ್ದಿರ್ದುದತೀವ ಕಾಂತಿಯಿಂ ॥ ೧೬

ಬೆಳರ್ವಣ್ಣಂದಳೆದಿರ್ಪ 4 ಶಾರದನಥಂ 5 ನೈರ್ಮಲ್ಯವಾಂತಿರ್ದುಮಂ
ದಳುರಲ್ಕೋಡಮದಾಗಳೇ ಕದಡಿ ಕರ್ಪಾಗಿರ್ದುದಾಕಾಲದೊಳ್ ।
ಖಳಸಂಪರ್ಕಮದೆಂಬುದೀ ಸುಜನಸಂದೋಹಕ್ಕೆ ಮೆಯ್ದೋರಿದಾ
ತಿಳಿವಂ ಮಗ್ಗಿಸದುಂತೆ ಪೋಪುದೆ ಧರಿತ್ರೀಭಾಗದೊಳ್ಸಂತತಂ ॥ ೧೭

ವ॥ ಇಂತಪ್ಪ ಶರತ್ಕಾಲಮತಿರಮ್ಯಮಾಗಿ ಜಗತೀವಲಯಕ್ಕೆ ಮುದಮನೀವು
ತ್ತಿರೆ ವಿಶ್ವೇಶ್ವರಂ ಗಿರಿಜಾತೆಯೊಳ್ಸುಖಮಿರ್ಪಿನವೊಂದು ದಿವಸದೊಳ್,

---

1 ಚರಿಸುತ್ತೊತ್ತುವ......ಸುಫಲಸಂದೋಹಕ್ಕೆ. 2 ಕರಸೋಂಕಿಂ ಗಗನ ನಾರಿಯುಟ್ಟಿರ್ದಸಿತಾಂ. 3 ಯುಳಿದುದಾಕ್ಷಣದೊಳ್. 4 ಶಾರದಘನಂ. 5 ನೈರ್ಮಲ್ಯವಾಗಿರ್ದು.

ಎನಗಿದಿರಾದವನಿಪನೊ
ರ್ವನೆ ದೆಸೆಯಾಣ್ಮರೊಳೆನುತ್ತೆ ವರುಣಂಗಾಗಳ್ ।
1 ಮುನಿದುಱೆ ದಾಳಿಟ್ಟ ತೆರದೆ
ದಿನನೇಳ್ತಂದಸ್ತಗಿರಿಯ ತುದಿಯಂ ಸಾರ್ದಂ ॥ ೧೮

ಕರವೊಂದಕ್ಕಿರದೋಡಿ ಪೋಪುರುತಮಂ ಪೆಂಬತ್ತಿ ಬರ್ಪಾಗಳಂ
ದರ್ರುಣಂ ಭೀತಿಸಿಯಸ್ತಶೈಲಶಿಖರಕ್ಕಂದೇರಿದಂ ತನ್ನಯಾ ।
ಕಿರಣಂಗಳ್ಮಿಗೆ ಮಿಕ್ಕ ಶೈಲತತಿಯಂ ವೃಕ್ಷಪ್ರತಾನಂಗಳಂ
2 ಪರಿದೇರಿರ್ದುವು ಕಾಲದೊಂದುಗನಮಿನ್ನೇಗೆಯ್ಯುದೋ ಧಾತ್ರಿಯೊಳ್ ॥ ೧೯

ಒದವಿದ ದಿವಾಂಗನಾಸಂ
ಗದದೋಷಕ್ಕಳ್ಕಿ 3 ತನ್ನಿವಾರಣಕೆಂದಾ ।
ಉದಧಿಸ್ನಾನವನುಱೆ ರಚಿ
4 ಸಿದವೊಲಕೂಪಾರದೊಳ್ಮುಳುಂಗಿದನರ್ಕಂ ॥ ೨೦

ಪಿರಿದುಂ ಪ್ರದೋಷಕಾಲಂ
ಬರೆವೆಯ್ದುಗ್ಗರೆದಂ ಪ್ರಭಾಕರಂ ವಾರಿಧಿಯೊಳ್ ।
ಧರೆಯೊಳ್ಪ್ರದೋಷಕಾಲದೊ
ಳಿರಲಾರ್ಪರೆ ಪೊನ್ನವಂತರೀಧಾರಿಣಿಯೊಳ್ ॥ ೨೧

ಅರಲಂಬೊಂದರೊಳೀಜಗತ್ರಯಮನೆಲ್ಲಂ ಗೆಲ್ದು ಸೊರ್ಕಿಂದೆ ಕಂ
ಮರಲಂಬಂ ಕಣೆಗೊಂಡಿದಿರ್ಚೆ 5 ಬರಲಿರ್ದಂತಾನುದಾಸೀನದಿಂ ।
ದುರಿಗಣ್ಣೊರ್ಕಿಡಿಯಿಂದೆ ಸುಟ್ಟಭವನೇ ದೈವಂ ಜಗಕ್ಕೆಂದು ಡಂ
ಗುರವಂ ಪೊಯ್ದವೊಲೀಶವಾಸತತಿಯೊಳ್ಪೊಣ್ಮಿತ್ತು ಭೇರೀರವಂ ॥ ೨೨

ಇನನಸ್ತಂಗತನಾಗಲ್
ತನಿನೇಹದೊಳಿರ್ದ ಚಕ್ರವಾಕದ್ವಂದ್ವಂ ।
ತನುವೇ ತಾವರೆಯಾದುವು
ಮನವೆಲ್ಲಂ ಕುಮುದವಾದುದೇಂಕೌತುಕವೋ ॥ ೨೩

ಮಿತ್ರನ ವಿರಹದೊಳಾಶತ
ಪತ್ರಸಮೂಹಂ ಮುಗುಳ್ದು ಕೊರಗಿದುವಾಗಳ್ ।

---

1 ಮುನಿದು ಧಾಳಿಟ್ಟ ತೆರದಿಂ. 2 ಪರಿದೇರಿರ್ದುವು. 3 ನಿರ್ಪರಣಕೆಳ್ತಂದಾ.
4 ಸಿದವೊಲ್ಕೂಪಾರ. 5 ಬರಲಿರ್ದಂತುದಾಸೀನದಿಂ.

ಮಿತ್ರವಿಯೋಗಮದೆಂಬುದು
ಧಾತ್ರಿಯೊಳಾರ್ಗೀಯದಧಿಕದುಃಖೋದಯಮಂ ॥ ೨೪

ನಳಿನಾಪ್ತನೆನ್ನ ಸೋಂಕು
ತ್ತಳಿದಂ ತಾನೆಂದು ಪಶ್ಚಿಮಾಂಗನೆ ಮಿಗೆ ತಾ ।
ಳ್ದಳಲುರಿಯೋ ಎಂಬಂದದೊ
ಳೆಳರ್ದತ್ತಾತಾಣದಲ್ಲಿ ಸಂಧ್ಯಾರಾಗಂ ॥ ೨೫

ಪರಶಿವನ ಕೇಶವಂ ಬೇ
ಚರಸಂತತಿ ತೋರಮಲ್ಲಿಗೆಯ ಸೇವಂತಿಯ ।
ಬಿರಿಮುಗುಳ್ಗಳಿಂದೆ ಮಿಗೆ ಸಿಂ
ಗರಿಸಿದವೋಲ್ ತಾರೆ ಮೆರೆದುವಂಬರತಳದೊಳ್ ॥ ೨೬

ಹಿಂದಮೃತಮಥನದೊಳ್ ಗೋ
ವಿಂದಾದಿಗಳಂ ಸಮಂತು ಕಂದಿಸಿದ ಬಿಸಂ ।
ಬಂದೀಜಗವಂ ನುಂಗಿ
ರ್ಪಂದವೊ ತಾನೆನೆ ತಮಂ ಕರಂ ಕಣ್ಗೆಸೆಗುಂ ॥ ೨೭

ಅಕಳ್ತಲೆಯದು ಜಾರಾ
ನೀಕಕ್ಕೊಲವಿತ್ತುದೆಯ್ದೆ ಬೇವಿನ ಸಿರಿಯದು ।
ಕಾಕಚಯಕೊಲವನೀವಂ
ತಾ ಕಾಲದೊಳೇನನಂಬೆನದರುನ್ನತಿಯುಂ ॥ ೨೮

ಮುಟ್ಟಿದುದೆ ಮರ್ಮವದು ಪೆ
ರ್ಚಿಟ್ಟಿಯಶಯ್ಯಾನಿಕೇತನಂ ಮನದೊಲವಿಂ ।
ಪುಟ್ಟಿರ್ದುದೆ ಪರ್ಯಂಕಂ
ಬಿಟ್ಟುದೆ ಬೀಡಾರಮಾಯ್ತು ಜಾರರ್ಗೆಲ್ಲಂ ॥ ೨೯

ಉಟ್ಟ ದುಕೂಲವೆಂಬುದದು ಪಾರಿಯಪಟ್ಟೆವೊಲಾಗೆ ನಾಡೆ ನು
ಣ್ಪಿಟ್ಟುರುಚಂದನಂ ಮೆರೆವ ಕತ್ತುರಿಯಂತೆವೊಲೊಪ್ಪಿತೋರೆಯಾ ।
ತ್ತೊಟ್ಟೆಸೆದಿರ್ಪ ಮೌಕ್ತಿಕವೆ ನೀಲದವೋಲಿರಲಂಧಕಾರದೊಳ್
ದುಟ್ಟೆಯರಾದ ಪಾಣ್ಬೆಯರ ಗೊಂದಣಿ ಸಂದಣಿಸಿರ್ದುದಾವಗಂ ॥ ೩೦

ಘನಸಿಸಿಯೊಳ್ಪಿರ್ಗಳ್ತರೆ
ಘುಸಿಪ ಚಕೋರಾಂಕಕೆಂದು ಕಾಯ್ಪಿಂದೆಳ್ತಂ ।

ದಿನನ ತಳಾರರೊ ಮೇಣಿಂ
ಬಿನೆಗಂ ಮನೆಮನೆಯೊಳೊಪ್ಪಿದುವು ಸೊಡರ್ಗುಡಿಗಳ್ ॥ ೩೧

ಜ್ಞಾನಪ್ರದೀಪದಿಂದ
ಜ್ಞಾನತಮಂ ಕಿಡುವ ತೆರದೆ ಮರ್ತ್ಯಗಳ್ ಬಂ ।
ದ್ಧ್ಯಾನನಸಂದರ್ಶನದಿಂ
ದೇನೆಂಬೆಂ ತೊಲಗಿಪೋದುದತಿಸತ್ವರದಿಂ ॥ ೩೨

ಒಂದಿದಿನಿಯರ ಚಕೋರಿಗ
ಳಿಂದೀವರಸಂಚಯಂಗಳನುರಾಗಲತಾ ।
ಕಂದವೊ ಎನೆ ಕಣ್ಗೆಸೆದ
ತ್ತಿಂದುವ ಬಿಂಬಂ ಪೊದಳ್ದ ರಕ್ತಿಮರುಚಿಯಿಂ ॥ ೩೩

ಇದು ಪರಮೇಶ್ವರಂಗೆ ಪದೆದರ್ಧಶರೀರಮನಿತ್ತ ಗೌರಿ ತಾ
ಳ್ದಿದಪೊಸಮುತ್ತಿನೋಲೆಯೊ ಬಳಿಕ್ಕಿದು ಚಿತ್ತಭವಂಗೆ ಚೈತ್ರನೆ ।
ತ್ತಿದ ಪೊಳಪಾಂತ ಬೆಳ್ಗೊಡೆಯೊ ಮೇಣಿದು ದರ್ಪಕಕೀರ್ತಿಬೀಜವೋ
ಇದೆನೆ ಪೊದಳ್ದು ರಂಜಿಸಿತು ಬೆಳ್ಪಡರ್ದಿರ್ದ ಶಶಾಂಕಮಂಡಲಂ ॥ ೩೪

ಪಳುಕಿನ ಕರಂಡದೊಳ್ ಕಂ
ಗೊಳಿಸುವ ಹರಿನೀಲದಂತೆ ರಂಜಿಸುತಿರ್ಕುಂ ।
ಕಳೆಯಾಣ್ಮನ ಕಾಯದೊಳ
ಗ್ಗಳಮಾಗಿ ವಿರಾಜಿಸಿರ್ಪ ಲಕ್ಷಣಮಾಗಳ್ ॥ ೩೫

ಇಂದುಕರಸ್ಪರ್ಶನದಿಂ
ದಂ ಬಂದಂತೆಯ್ದೆ ಜೀವನಂ ಸಸಿಗಲ್ಲ ।
1 ಳ್ಗಿಂದಮೃತಾತ್ಮರ ಕೈಸೋಂ
ಕಿಂದಂ ಜೀವನಮದಾರ್ಗೆ ಸಮನಿಸದಿಳೆಯೊಳ್ ॥ ೩೬

ತನ್ನಾತ್ಮೋದ್ಭವನಾದ ಚಂದ್ರನ ಮಹಾಸೌಭಾಗ್ಯಮಂ ಗಾಡಿಯಂ
ಚೆನ್ನಂ ಕಾಂತಿಯನಾಕಲಾಧರಿತಮಂ ಸದ್ವೃತ್ತಮಂ ನಾಡೆ ಪಾ ।
ಲ್ಮುನ್ನೀರ್ಕಂಡೊಡಲುರ್ಬಿ ದಿಕ್ತಟಮನಾಗಳ್ತುಂಬಿತೆಂಬಂತೆವೋಲ್
ಜೊನ್ನಂ ನೀಳ್ದು ಪೊದಳ್ದು ಪರ್ವಿ ಪಱಿದತ್ತೆಲ್ಲಾ ಧರಾಚಕ್ರದೊಳ್ ॥ ೩೭

---

1 ಳಿಂದಮೃತಾತ್ಮರ.

ಅಗಲ್ದೇಗಂ ಭ್ರಮೆಗೊಂಡ ಚಕ್ರಮಿಥುನಂ ಕಂಡಚ್ಚವೆಳ್ದಿಂಗಳಂ
ಪಗಲ್ಗೆತ್ತಂದನುರಾಗಮುಣ್ಮಿ ಕೊಳನಂ ಸಾರ್ವಲ್ಲಿ ನೀರೇಜಗಳ್ ।
ಮುಗಿದಂತಿರ್ಪುದನೀಕ್ಷಿಸುತ್ತೆ ಸುಗಿದಾಗಳ್ಮತ್ತೆ ಪೋಗಲ್ಕರಂ
ನಗುವಂತಿರ್ದುವರಲ್ದ ಕೈರವಸಮೂಹಂ ನೋಡೆಯಾಕಾಲದೊಳ್ ॥ ೩೮

ವ॥ ಇಂತಪ್ಪ ಬೆಳ್ದಿಂಗಳೊಳ್ನೀಲಕಂಠಾನಂದನೆಂಬ ಸನ್ಯಾಸಿಯೊರ್ವನಾಕಾಲದೊಳ್ಕಾಶೀಪುರಮಂ ಪೊಕ್ಕು ಬರ್ಪಾಗಳ್ಮನ್ನ ಗೃಹಾಂಗಣದೊಳೊರ್ವಳ್ ಪಾಮರಸ್ತ್ರೀಯಿರ್ಪಳವಳ ರೂಪಾತಿಶಯಮಂ ಪೇಳ್ವೆನೆಂತೆಂದೊಡೆ,

ಸಾಲದು ಮೊಗವಕ್ಷಿಗಳ ವಿ
ಶಾಲಕ್ಕಿರ್ದೆ ಸಾಲದಾಸ್ಯಕದರ್ದ 1 ಕುಚಂಗ ।
ಳ್ಗಾಲಂಬಿತಕಬರಿಗೆ ಬ್ರ್ದೆ
ಸಾಲದು ಮತ್ತವಳ ಚೆಲ್ವನೇವಣ್ಣಿಸುವೆಂ ॥ ೩೯

ತನುಸಂಗಸೌಖ್ಯಮೆಂದುಂ
ತನುರಹಿತನೊಳಾಗದೆಂದತನುವಂ ತ್ಯಜಿಸುತ ।
ವನಿಗಿಳಿದ ರತಿಯೊ ತಾನೆಂ
ದೆನೆ ಕಣ್ಗಿಸೆದಿರ್ದಳಾ ನಿತಂಬಿನಿಯೊಲವಿಂ ॥ ೪೦

ಮೃದುಗತಿಯಿಂ ಚಂಚಲನೇ
ತ್ರದೆ ಮಧ್ಯದಿನಾಗಳೆಯ್ದೆ ಗಜಮೃಗಹರಿಯಂ ।
ಮುದದಿಂದಂ ಪೋಲ್ತಿರ್ಪಾ
ಸುದತಿ ವಿಜಾತಿಯೆನಿಸಿರ್ಪಳೇಂ ಕೌತುಕವೋ ॥ ೪೧

ಚೆಂದೆಂಗಂ ಪೆರ್ಮೊಲೆಯಿಂ
ಕೆಂದಳದಿಂದಸುಗೆಯಿಂ ಶರೀರಾಮೋದದೆ ।
ಚಂದನವಮಂ ಪೊತ್ತೆಸೆವಾ
ಸುಂದರಿ ತಾನುಚಿತಮೆನೆ ಕುಜಾತಿಯೆನಿಸಿದಳ್ ॥ ೪೨

ಮಿನುಪಾಸ್ಯಂಗಾಣುತುಂ ಮೊತ್ತಮೊದಲಶರವೊಂದಂ ದ್ವಿತೀಯಾಸ್ತ್ರಮಂ ಮೂರನೆಯಂಬಂ ಪಾದಮಂ ಬಂದುಗೆದುಟಿಯಿರವಂ ಕಂಡು ನಾಣ್ಬುತ್ತವಂ ನಾಲ್ಕನೆಯಂಬಂ ಮತ್ತಮಾನೀರೆಯು ರದನಮನೊಲ್ದೀಕ್ಷಿಸುತ್ತೆಯ್ದೆ ಮೇಣಯ್ದನೆಯಂಬಂ ನಾಡೆ ನೀಳ್ದಕ್ಷಿಗಳ ತೊಳಪಮಂ ಕಂಡು ಕಾವಂ ಬಿಸುಟ್ಟಂ ॥ ೪೩

1 ಕುಚಂಗಳ್ ಸಾಲಂಬಿತಕಬರಿಗೆ

ವ॥ ಇಂತಿರ್ದವಳನವಂ ಕಂಡು,

ವೇದಜ್ಞಾನಂ ಮಿಗೆ ಬಯ
ಲಾದುದು ಸತ್ಕರ್ಮಜಪಸಮಾಧಿಗಳುಱೆ ಪೊ ।
ಳ್ದಾದುವು ಶೌಚವ್ರತಮದು
ಪೋದುದು ಸನ್ಯಾಸಿಗಾಕೆಯಂ ಕಾಣಲೊಡಂ ॥ ೪೪

ಹಿಂದೆ ಪರಾಶರಂ ನೆಗಳ್ದ ಯೋಜನಗಂಧಿಗೆ ಕೂರ್ತವೋಲ್ಮನಂ
ದಂದುರು ಕೌಶಿಕಂ ಮರುಗಿಯೂರ್ವಶಿಯೊಳ್ಸಲೆ ಸಿಲ್ಕಿದಂತೆ ಮೇ ।
ಣಿಂದಿವನಿಂತು ಪಾಮರಿಗೆ ಸೋಲ್ತು ಮನೋಜಕೃಶಾನುವಿಂ ಕರಂ
1 ಬೆಂದು ಕಳಲ್ಪಳಲ್ದು ಮಿಗೆ ತಲ್ಲಣಿಸುತ್ತೆ ತೊಳಲ್ದನಾಕ್ಷಣಂ ॥ ೪೫

ಕಣ್ಗೆಟ್ಟಂ ಮತಿಗೆಟ್ಟಂ
ನಾಣ್ಗೆಟ್ಟಂ ಭೀತಿಗೆಟ್ಟನಸಮಾಸ್ತ್ರನ ಕೈ ।
ಗೇಣ್ಗೆಯೆ ರೌಕಾದನವನೆಳೆ
2 ವೆಣ್ಗಂಡೆರ್ದೆವಿಡಿದು ನಿಲ್ವರಾರ್ಧಾರಿಣಿಯೊಳ್ ॥ ೪೬

ಸೋಗೆಮುಡಿಯವಳ ಚೆಲ್ವಂ
ಸೂಗುದಿಯಂ ಹಾವಭಾವಮಂ ಕಂಡಾತಂ ।
ಬೇಗುದಿಗೊಂಡವ್ವಳಿಸು
ತ್ತಾಗಳ್ಬೇವಸಮನಾಂತು ತಳವೆಳಗಾದಂ ॥ ೪೭

ಸುದತೀವಕ್ತ್ರಸುಧಾಂಶುದರ್ಶನದೊಳಾತಂಗಂದು ಕಾಮಾಂಧಕಾ
ರದ ಪೆರ್ಚಾಯ್ತು ಮನಶ್ಚಕೋರಿಯರತಂಗಾಂಭೋಧಿಯಾಗಳ್ತಗ ।
ರ್ದುದುಬಲ್ಸೇದೆಪೊದಳ್ದು ಪೊಣ್ಮಿತುರದಾಕಣ್ಣಿಯ್ದಿಲೋರಂತೆಬಾ
ಡಿದುವಂದಾಗಳತೀವ ರಾಗಮುದಿಸಿತ್ತೇನೆಂಬೆನಾಶ್ಚರ್ಯಮಂ ॥ ೪೮

ಲಲನಾವಿಭ್ರಮಹಾವಭಾವವಿಲಸದ್ರೂಪಕ್ಕೆ ಸೋಲ್ತಕ್ಷಿಗಳ್
ಚಲಿಸುತ್ತಿಯ್ದೆ ಬಿಗುರ್ತು ಬಂದವಳ ದೇಹೋರ್ವೀಜಮಂ ಪತ್ತಿ ಪೆ ।
ರ್ಮೊಲೆವೆಟ್ಟಂ ಪರಿದೇರಿ ಮತ್ತವಳಲಾವಣ್ಯಾಂಬುವಂ ಪೊಕ್ಕು ನಿ
ಶ್ಚಳದಿಂ 3 ಬಾಳ್ದುವದಲ್ಲದಿರ್ದೊಡೆ ಬಳಿಕ್ಕಂ ಜೀವನಂದಾಳ್ದುವೇ ॥ ೪೯

1 ಬಂದುಕಳಲ್ಗೆಳಲ್ದು. 2 ವೆಣ್ಗಂಡೆರ್ದೆ. 3 ಬಳ್ದುವದಲ್ಲ.

ಅವಳ ಗತಿಗೆಡಿಸಿದ ಜಘನ
ಮಿವನೆರ್ದೆ 1 ಗೆಡಿಸಿತ್ತವಳನೆರ್ದೆಗೆಡಿಸಿಯಿರದೊ ।
ಪ್ಪುವ ತೋರವೊಲೆಗಳುಱೆ ಮ
ತ್ತಿವನಂ ಗತಿಗೆಡಿಸುತಿರ್ದುವೇನಚ್ಚರಿಯೇ ॥ ೫೦

ಕುಡುಪುರ್ವಿಂದ್ರನ ಬಿಲ್ ಸೋ
ರ್ಮುಡಿ ಕಾರ್ಮುಗಿಲಕ್ಷಿಯುಗ್ಮ ವೇ ಮಿಂಚಾಗರ್ ।
2 ಮಡದಿಯುಱೆ ನೀಲಕಂಠಂ
ಗೊಡರಿಚಿದಳ್ಮ ದಮಸಿಂತಿದೇನಚ್ಚರಿಯೋ ॥ ೫೧

ನೆರೆ ಪೆಂಪಂ ತಾಳ್ದು ರಮ್ಯಾಸ್ಯಕಡದರ್ದು ನಿಬಿಡಂ 3 ಬೆತ್ತುರೋಜಂಗಳೊಳ್ಬಂ
ದೆಱಗಿರ್ದಕ್ಷಿದ್ವಯಂ ಮೇಣ್ ನುಸುಳ್ದೊಡೆ ಪಥಮಂ ಕಾಣದೋರಂತೆ ಕಾಲ್ಗೆ ।
ಟ್ಟುಱೆ ಸಿಲ್ಕಲ್ಕಾಂತಿಗೆಟ್ಟಂ ಕಳವಳಿಸುತವಂ ಮಾರುವೋದಂತೆ ಬಿಲ್ಲುಂ
ಬೆರಗಪ್ಪನ್ನಂ ಕರಂ ಬೆಚ್ಚುತೆಯುಳವಳಿವುತ್ತುಬ್ಬೆಗಂಬಟ್ಟನಾಗಳ್ ॥ ೫೨

ಎಕ್ಕೆಕ್ಕೆಯೆನಿಸುವತನುಶ
ರಕ್ಕಾತಂ ಬೆಗಡುಗೊಂಡು ಬೇವಸವಾಂತುಱೆ ।
4 ಬೆಕ್ಕಸವಾಂತಾಕೆಗೆ ಬಗೆ
ಸಿಕ್ಕಿ ತಡಂಬಟ್ಟು ಹಮ್ಮುದಂಬೋಗಿರ್ದಂ ॥ ೫೩

5 ತೇರ್ಪೋತ್ತುಱೆ ತೇಂಕಾತಂ
ಕೂರ್ಪಿಂದಂ ನಿಜಮನೋಲತೆಗೆ ಬಳಿಕೆಯ್ದುಯ ।
ದರ್ಪಾದಂಬುಜಮುಖಿಯು ಪೊ
ದರ್ಪಂ ಕಂಡಳ್ಕಿ ಬೆರಗುವಟ್ಟಿಂತೆಂದಂ ॥ ೫೪

ಆರಿವಳೂರ್ವಸಿಯೊ ಮೇಣ್
ಭಾರತಿಯೋ ರಂಭೆಯೋ ತಿಲೋತ್ತಮೆಯೋ ಜಂ ।
ಭಾರಿಯ ನಾಣ್ಗಿಡಿಸಿದ ವರ
ನಾರಿಯೊ ತಾನೀಕೆಯಾರೆನುತ್ತೀಕ್ಷಿಸಿದಂ ॥ ೫೫

ಚಲಿಸದ ಸಿರಿಯೋ ವಿರಹಾ
ನಲನಳುರದ ರತಿಯೊ ಬಗೆವೊಡ್ಮೆಯಂಬನ ಕೈ ।

---

1 ಗೆಡಿಸಿತವಳನೆರ್ದೆಗೆಡಿಸಿರದೊ. 2 ಮಡದಿಯಾನೀಲಕಂಠಂ.
3 ಬೆತ್ತುರೆಜೋಗಳ್ ಬಂ. 4 ಬೆಕ್ಕಸಂಬಟ್ಟವಳ್ಗೆ. 5 ತೇರ್ಪೋತ್ತೆಂಕಾತಂ (ಕ).

ಗೆಲಸದ ಪಾಂಚಾಲಿಕೆಯೋ
ಲಲನಾಮಣಿಯಿವಳದಾರೆನುತ್ತೀಕ್ಷಿಸಿದಂ ॥ ೫೬

ಸಿಂಗರದಿಂಗಡಲೋ ಪೇ
ಣಂಗಜನಾರಾಧಿಸುವ ವಿಜಯಲಕ್ಷ್ಮಿಯೊ ನೆರೆ ।
ದಿಂಗಳಧಿದೇವತೆಯೊ ಈ
ಯಂಗನೆಯಾರೆಂದವಂ ನಿರೀಕ್ಷಿಸುತಿರ್ದಂ ॥ ೫೭

ಕಂದರ್ಪನ ಕೈಪಿಡಿಯೋ
ಕುಂದೊಂದದ ಚಂದ್ರರೇಖೆಯೋ ಮೂಲೋಕದ ।
ಸೌಂದರ್ಯವೆ ತನುವಿಡಿದೆ
ಳ್ತಂದುದೊ ಇವಳಾರೆನುತ್ತೆ ನೋಡುತ್ತಿರ್ದಂ ॥ ೫೮

ವ॥ ಇಂತು ಪಲವಂ ಪಲುಂಬುತ್ತವಳನವಂ ನೋಡುತ್ತಿರ್ಪಿನಂ ದೈವವಶದಿಂದಮವಳ್,

1 ತನಗೊಲ್ದೀಕ್ಷಿಸುತಿರ್ಪನ
ಮನಮಂ ಕಂಡಾಲತಾಂಗಿ ಮನ್ಮಥಬಾಣ ।
ಕ್ಕೆನಸುಂ ತಾಗುತೆ 2 ತನ್ನ ಯ
ತನುವಂ ಮರೆದವನನೊಲ್ದು ನೋಡುತ್ತಿರ್ದಳ್ ॥ ೫೯

ನೊಂದಳಲರಂಬನೇರಿಂ
ಬೆಂದಳ್ಕಾಮಾಗ್ನಿಯಿಂದಮಾಗಳ್ಮಿಗೆ ಪೆಃ ।
ಯ್ಗುಂದಿದಳುಚಿ ನಾಣ್ಗೆಟ್ಟಳ್
ಕಂದಿದಳಳವಳಿದಳಧಿಕತಾಪಂಬೆತ್ತಳ್ ॥ ೬೦

ತಳವೆಳಗಾದಳ್ಮಿಗೆ ತ
ಲ್ಲಳಗೊಂಡಳ್ಸಯ್ಪುಗೋಜೆಗೆಟ್ಟಳಳಲ್ದಳ್ ।

1 ಈ ಪದ್ಯದ 1 ಮತ್ತು 2ನೆಯ ಪಾದಗಳಲ್ಲಿ 'ಗ' ಕಾರಪ್ರಾಸವೂ. 2ನೆಯ ಪಾದದಲ್ಲಿ ೧೮ ಮಾತ್ರೆಗಳು ಮಾತ್ರವೇ ಇದ್ದು, ಯತಿಭಂಗವಿದ್ದುದರಿಂದ, ಈದರ ಪೂರ್ವಾರ್ಧವನ್ನು ಮೇಲಿರುವಂತೆ ಬದಲಾಯಿಸಿ ಬರೆದಿರುತ್ತೇವೆ
ತಗೆಸೋಲ್ತೀಕ್ಷಿಸು ತಿರ್ಪನ
ಬಗೆಗಂಡಾಲತಾಂಗಿಮನ್ಮಥಬಾಣ ।
2 ನಿಜ.

ಕಳವಳಿಸುತ್ತಾಗಳ್ಬೆ
ಳ್ವಳವಾಂತಿವನಾರೆನುತ್ತೆ ನೋಡುತ್ತಿರ್ದಳ್ ‖ ೬೧

ಕಾಯಂಬಡೆದೊಪ್ಪುವಸಮ
ಸಾಯಕನೋ ಕುಂದುಗಳೆದು ರಂಜಿಪ ರಾತ್ರಿಯ ।
ರಾಯನೊ ಕಣ್ಗೊಪ್ಪುವ ವ
ಜ್ರಾಯುಧಸುತನೋ ಎನುತ್ತೆ 1 ನೋಡಿದಳವನಂ ‖ ೬೨

ಅನಿರುದ್ಧನೊ ವೇಣ್ಮಧುರಾ
ಜನೊ ನಳಕೂಬರನೊ ಮಲಯಪರ್ವತದಿಂ ಮೆ ।
ಲ್ಲನೆ ಬಂದು ಸುಳಿವ ಪವಮಾ
ನನೊ ಬಗೆಗರಿದೀತನಾರೆನುತ್ತೀಕ್ಷಿಸಿದಳ್ ‖ ೬೩

ವ‖ ಇಂತೀಕ್ಷಿಸುತ್ತಿರ್ದ ಭಾವಕಿಯ ಬಗೆಯರಿದು,

ಇನಿವಣ್ಣಿರ್ದೆಡೆಗರಗಿಳಿ
ತನಿಗಂಪಿನಪೂಬನಕ್ಕೆ ಬವರಂ ಬರ್ಪವೊ ।
ಲನುರಾಗಂದಳೆದಾಕೆಯ
ಮನೆಗೆಳ್ತಂದಂ ಮಹಾತ್ವರಿತದಿಂ ಯತಿಪಂ ‖ ೬೪

ವ‖ ಅಂತೇಳ್ತಂದವಳೊಳುಸಿರ್ದನದೆಂತೆಂದೊಡೆ,

ನಿನ್ನಯ 2 ಕಟಾಕ್ಷಶರಹತಿ
3 ಯಿನ್ನೆಱೆ ನೊಂದೀಗಳಸುಗಳಂ ಸಲೆ ಬಿಡುತಿ ।
ರ್ಪನ್ನಂ ರಕ್ಷಿಸಲಂಪಿಂ
ನಿನ್ನಧರಾಮೃತವನಿತ್ತು ಚಕಿತಮೃಗಾಕ್ಷೀ ‖ ೬೫

ಕರತಳಪಾದವೆಂಬಸುಗೆ ಮಾಂದಳಿರಿಂ ತೊಡೆವಾಳೆಗಂಬದಿಂ
ದುರುತರಮಾಗಿ ತೋರ್ಪ ಪೊರವಾರೆನಿಪೀಕ್ಕೃತಕಾದ್ರಿಯಿಂದೆ ತ ।
ತ್ಸುರತದೊಳುಣ್ಮುತಿರ್ಪ ಬೆವರ್ವನಿಯಿಂ 1 ದುಸಿರ್ಗಾಳಿಯಿಂದೆ ಮ
ದ್ವಿರಹದ ತಾಪವಂ ತವಿಸಿ ರಕ್ಷಿಸು ಚಂಪಕದಾಮಕೋಮಲೇ ‖ ೬೬

1 ನೋಡಿರ್ದಳ್. 2 ಕಟಾಕ್ಷವರಹತಿ. 3 ಯಿನ್ನೆರೆಯೞಿವುತೀಗಳಸುಗಳೆವುತ್ತಿ.
1 ದುಸುರಾಳಿಯಿಂದೆ,

ವ॥ ಇಂತೆಂಬಿನಂ,

ಬಿಡದೆಳ್ವ ಮೆಯ್ಯ ವಿರಪೊಸ
ಗುಡಿಯಂ ಕಟ್ಟಿದಳೊರಲ್ದು ಹರ್ಷಾಶ್ರುವಿನಿಂ ।
ದೊಡರಿಸುತಿರ್ಪರ್ಘ್ಯವ ಕೈ
ವಿಡಿದವನಂ ಪತ್ಕವನೆಗವಳ್ಕೊಂಡೊಯ್ದಳ್ ॥ ೬೭

ಮುಳಿಸಳಿದ ಕಾಮಕಲಹಕೆ
ಕಳನಂ ಪತ್ತುವವೊಲವಳ ಕೈವಿಡಿದಾತಂ ।
ಸೆಳೆಮಂಚವನೇರುತ್ತಂ
ಸೆಳದಂ ಮುಸುಕಿಟ್ಟಪಟ್ಟಳಿಗೆಯಂ ಮುದದಿಂ ॥ ೬೮

ತ್ರ್ಯಂಬಕಕೃಪೆಯಿಂ ಮುಂದೆ ದಿ
ಗಂಬರನಪ್ಪೆನ್ನ ಕೂಟಮಿರ್ದುಂ ನಿನಗೀ ।
ಯಂಬರವೇಕೆಂಬವೊಲವ
ಳಂಬರವಂ ತೆಗೆದನತುಳಕಾತುರದಿಂದಂ ॥ ೬೯

ಕೆಳದಿಯ ವಕ್ತ್ರಪಂಕಜಮನೆಯ್ದಿ ವಲಂ ಕಮಲಾಸನತ್ವಮಂ
ತಳೆದುವು ಸಾರ್ದುರೋಜಗಿರಿಯಂ ಗಿರಿಶತ್ವಮನಾಂತುವೆಯ್ದಿ ನಿ ।
ರ್ಮಳತನುಕಾಂತಿಯೆಂಬ ಜಳದಲ್ಲಿ ಮುಳುಂಗಿ ಬಟಿಕ್ಕಮಾರಯಲ್
ಜಳಶಯನತ್ವಮಂ ಪಡೆದುವಾತನನೀಳ್ದ ವಿಶಾಲಲೋಚನಂ ॥ ೭೦

1 ಗಾಡಿಯನಾಕೆಯ ಸೊಬಗಂ
ನೋಡುತ್ತುಂಮುದ್ದಿಸುತ್ತೆ ಚುಬುಕಾಗ್ರವನ ।
2 ಲ್ಲಾಡಿಸುತಮರ್ದಪ್ಪುತೆ ಮುಂ
ಡಾಡುತ ನಾಣ್ದೆರೆಯನೆಯ್ದೆ ನೂಂಕಿದನಾಗಳ್ । ೭೧

ಮನವಂ ಪಿಂತಿಕ್ಕುವ ತನು
ತನುವಂ ಪಿಂತಿಕ್ಕಿ ಮುಂಬರಿದು ತೋರ್ಪ ಮನಂ ।
ತನುವಂ ಮನವಂ ಮುಂಚುವ
ತನಿನೋಟಂ ಸೊಗಸೆ ನೆರೆದರಾ 3 ಕಾದಲರ್ಗಳ್ ॥ ೭೨

---

1 ಗಾಡಿಕಾರ್ತಿಯ ಬೆಡಂಗಂ. 2 ಲ್ಲಾಡು ತಮರ್ದಪ್ಪುತೆಮುಂ,
3 ಕಾದಲ್ಗಳ್.

ತನುತನುಸೋಂಕಿನಸೊಗಸಿಂ
ಜನಿಸಿದುದವರೀರ್ರ್ವರಂಗದೊಳ್ಮಿಗೆ ರೋಮಾಂ ।
ಚನತತಿಯುವರಾನಂದದ
ತನಿವೆಳಸೆಂಬಂತೆ ಮನಕೆ ಸೊಗಸೀವುತ್ತಂ ॥ ೭೩

ಮೊಗವೊಗವಿಟ್ಟು ಚುಂಬಿಸಿದರಂದಿರದಾಗಳನೇಕಬಂಧದಿಂ
ಬಗೆಬಗೆವೆಚ್ಚುಕೂಡಿದರನಂತದ ಸೂತ್ರಗಳೆಯ್ದೆ ಸೂಸೆ ಮೇಣ್ ।
ಬಿಗಿಬಿಡದಪ್ಪಿದರ್ ತುಡುಕಿ ಕೂಡುತೆ 1 ತಾವ್ ಸುರತಾಮೃತಾಬ್ಧಿಯೊ
ಳ್ಸೊಗಸೆನೆ ಸೂರೆಗೊಂಡು ತಣಿವಿಲ್ಲದವರ್ನೆರೆದರ್ನಿರಂತರಂ ॥ ೭೪

ರಸದಂಬುಲದಿನಿಗುಟಿಕಿಂ
ದೆಸೆದರ್ತಮ್ಮೊರ್ದೆಯೊಳೊಪ್ಪುವನುರಾಗವನೇ ।
ರಸನೆಯೊಳುಱೆ ತೆಲ್ಲಟ್ಟಿಯ
ನೊಸೆದೊರ್ವ್ವಗೊರ್ವ್ವರೀವವೋಲಾಪದದೊಳ್ ॥ ೭೫

ಮಾಂದಳಿರಂ ಕರ್ದುಕುತ್ತಾ
ನಂದಂಬಡೆದಿರ್ಪ ಕೋಗಿಲೆಗಳೊಳ್ದನಿವೋಲ್ ।
ಚೆಂದುಟಿಯುಮರ್ದಂ ಸೇವಿಸು
ತಂದೆಸೆದತ್ತವರ ಸುರತದೊಳ್ಗಳನಿನದಂ ॥ ೭೬

ಸುರತಸುಖಾಬ್ಧಿಯೊಳ್ಮುಳುಗಿಪೋದನೊತಱನವನೆಯ್ದೆ ಮತ್ತಮಾ
ತರುಣಿ ಕಡಂಗಿ ಕೋವರಿಯೊಳಾತನ ಚಿತ್ತಪರೀಕ್ಷೆಗಾಗಿ ಬಂ ।
ಧುರಹೃದಯಸ್ಥಳಂಬಿಗಿದು ಪೊಕ್ಕಳೊ ನಾನರಿಯೆಂ ಬಟಿಕ್ಕಮಾ
ರ್ವ್ವರ ತನುವೊಂದುಗೂಡಿ ಸಲೆ ರಂಜಿಸುತಿರ್ದುದು ಸೊಕ್ಕುದೆಕ್ಕೆಯೊಳ್ । ೭೭

ಒಂದೇಮನವಾದ ಬಟಿ
ಕ್ಕೊಂದೇಮೋದಂ ಬಯಿಂದೆ ತೋರ್ಪವೆನುತ್ತಂ ।
2 ಒಂದೇತನುವಂ ತಾಳ್ದಿ
ರ್ಪಂದವೊ ಎನೆ ಸೊಗಸುದೆಕ್ಕೆ ರಂಜಿಸಿತವಱೊಳ್ ॥ ೭೮

ಚೆರ್ಕಿಂಗಾಕಾಡಲರಱೆ
ಯಳ್ಕದೆ ರದನಕ್ಷತಕ್ಕೆ ಪೆರೆಪಿಂಗದವರ್ ।
ಬಳ್ಕದತನು 3 ಸಂಗ್ರಾಮವ
ನೀಟ್ಕರಿಸಿದ ಜೆನ್ನಪಾಂಗರಂತೆಸೆದಿರ್ದರ್ ॥ ೭೯

---

1 ತಾಂ. 2 ಒಂದೇತನನಂ. 3 ಸಂಗ್ರಾಮದ.

ಅಳಸುೞಿ ರಿಗ್ಗವಣಿಯ ಪರೆ
ಗಳನಿನದಂ ಬೀಣೆಯಿಂಚರಂ ತಾನಾಗಲ್ ।
ಕೆಳದಿಯುಪರಿರತದಿಂ ಕ
ಣ್ಗೊಳಿಸಿದಳಾಸಮಯದೊಳ್ಕುಣಿವ ನಚ್ಚಣಿವೋಲ್ ॥ ೮೦

ಚಲಿಸೆ ಕುಚದ್ವಯಂ ಕುಣಿಯೆ ಕುಂತಳದೋಳಿ ಸಮಂತು ಬೆನ್ನ ನ
ಪ್ಪಳಿಸೆ ಪೊದಲ್ದು ನೀಳ್ದ ಮುಡಿ ಕಣ್ಬೆಳಗೆಣ್ದಿಸೆಯಂ ಪಳಚ್ಚನು ।
ಜ್ವಳಿಸೆ ಬೆಮರ್ಕರಂ ಪರಿದು ಸೂಸಲವಳ್ಪುರುಷಾಯುತತ್ವಮಂ
ತಳೆದೆಸೆದಿರ್ದಳಾ ಸುಸಿರೊಳಾತನ ಕಣ್ಬಗೆಗಿಂಪನೀವುತಂ ॥ ೮೧

ಮಾಂದಳಿರ್ಗಳ್ಸಮಂತು ಸಲೆ ಬೆಳ್ಪಡರ್ವನ್ನ ಮತೀವರಾಗದಿಂ
ದೊಂದಿವಿರಾಜಿಪನ್ನಮಬುಜಾಗ್ರಮದೆಯ್ದೆ ಸುಧಾಂಶುಮಂಡಲಂ ।
ಕಂದಳಿದೊಪ್ಪುವನ್ನಮುಃೞೆ ಪಾರಿವನಾದಮಡಂಗುವನ್ನಮಂ
ದೊಂದಿ ಬೞಿಕ್ಕಮೆಯ್ಮರೆದು ರಂಜಿಸಿದರ್ನವರತ್ನಮಂಚದೊಳ್ ॥ ೮೨

ಉಚ್ಚಂ 1 ಬೆತ್ತುಸುರರೆ ಮುಗು
ಳ್ದಚ್ಚಿ ಸಡಿಲ್ದಪ್ಪು ನಾಣ್ಪೊರೆದ ಮೆಯ್ಯೆಸೆಯಲ್ ।
ಮಚ್ಚಿದ ಮನದಿನಿಯರ್ಕಳ್
ಮುಚ್ಚುತ್ತಿರೆ ಚಿತ್ರಪುತ್ರಿಕೆಗಳಂತೆಸೆದರ್ ॥ ೮೩

ವ॥ ಬೞಿಕ್ಕವರೀರ್ವರುಂ ಮೂರ್ಛೆ ನಸುದಿಳಿದು ಹಂಸತೂಳತಳ್ಪದೊಳಿರ್ಪಿನಂ ಆಸಮಯದೊಳವಳ ವಲ್ಲಭಂ ಬಂದು ತನ್ನ ಕಾಂತೆಯಂ ಕರೆದು ಕವಾಟಂದೆರೆಯೆನಲವಳವನ ದನಿಯಂ ಕೇಳ್ದು ಘನನಿನದಂಕೇಳ್ದಂಚೆಯಂತೆ ಬೆಗಡುಗೊಂಡು ಕೇಸರಿರವಮಂಕೇಳ್ದ ಕರಿಣಿಯಂತೆ ನಡನಡನೆ ನಡುಗಿ ಪುಲಿಯ ದನಿಯಂಕೇಳ್ದಪುಲ್ಲೆಯಂತೆ ಮುಂದುಗೆಟ್ಟು ಆಕರ್ಮಂದಿಯುಂ ಕೊಂಡೊಯ್ದೊಂದು ಸುರಾಭಾಂಡದೊಳ್ಮುಳುಂಗಿಸಲಾನಿರ್ಬಂಧದಿಂದವಂ ಪಂಚತ್ವಂಬಡೆದು ಪಂಚಮುಖಸ್ವರೂಪನಾಗಿರ್ದಂ,

ಕಾಶಿಯೊಳಳಿದರ್ಗೆ 2 ಹರಾ
ವಾಸಸ್ಥಿತ ಸಾಗ್ರಮೆಂಬ ವೇದೋಕ್ತಿಗದೇಂ ।
ನಾಸಂ ಬರ್ಕುಮೆ ಮೃತಸ
ನ್ಯಾಸಿ ಶಿವಾಕಾರಮಾಗಿ ಕಣ್ಗೆಸೆದಿರ್ದಂ ॥ ೮೪

1 ಬೆತ್ತುಸುರೆರೆ. 2 ಹರಿದ್ವಾಸಸ್ಥಿಂ.

ವ॥ ಆಗಳ್,

ಸುರದುಂದುಭಿಗಳ್ ಮೊರೆದುವು
ಸುರಿದುವು ಪೂಮಳೆಗಳಾಗಳಂಬರತಳದಿಂ ।
ಸುರರ್ಗಳುಘೇಯೆಂಬ ರವಂ
ಪರೆದತ್ತೀಣ್ದಿಸೆಯನಾಗಳದನೇವೊಗಳ್ವೆಂ ॥ ೮೫

ಲೋಕಂ ನೋಡುತ್ತಿರೆ ರ
ತ್ನಾಕಲಿತವಿಮಾನವಾಗಳೆಳ್ತಂದುದು ಘಂ ।
ಟಾಕರ್ಣನ ಮುಳಿಸಿಂದಂ
ದಾಕಾಶದೆ 1 ಮುಳುಗಿ ತೋರುವಿನಬಿಂಬಂದೋಲ್ ॥ ೮೬

ಬಂದಾಪುಷ್ಪಕದೊಳ್ಗಣ
ವೃದಂ ಪಾಮರಿಯನಿರಿಸಿಕೊಂಡೊಯ್ದುರ್ ಮುದ ।
ದಿಂದಂ ಕೈಲಾಸಕ್ಕಾ
ನಂದಂ ಮಿಗೆ ಲೋಕವೆಲ್ಲಮರಿದೆಂಬಿನೆಗಂ ॥ ೮೭

ವ॥ ಆಗಳಾಗಸವಟ್ಟೆಯೊಳೇಳ್ತರ್ಪ ನಾರದಮುನೀಶ್ವರನೀಕ್ಷಿಸುತ್ತವಳೆ ರುದ್ರಕನ್ಯಕಾಪದವಿ ಸಾರ್ತಂದೆಂದಮನಿವಳುಪವಲ್ಲಥಂ ಲಿಂಗಸ್ವರೂಪಂಬಡೆದ ಪ್ರಸಂಗಮನಾಗಣಂಗಳಿಂ ಕೇಳ್ದು ವಿಸ್ಮಿತಾಂತಃಕರಣನಾಗಿ ವಿಶ್ವನಾಥನೋಲ ಗಕ್ಕೇಳ್ತಂದು ಸಾಷ್ಟಾಂಗಪ್ರಣತನಾಗಿ,

ವೀಣಾವಾದ್ಯಮನಗಜಾ
ಪ್ರಾಣೇಶ್ವರನಿದಿರೊಳೊಲ್ದು ಬಾಜಿಸಿದಂ ಗೀ ।
ರ್ವಾಣಮುನೀಶ್ವರನಾಗಳ್
ಸ್ಥಾಣು ಕೊನರ್ತಲರ್ವಿನಿಂ. 2 ಸುರಾಗೋನ್ನತಿಯಿಂ ॥ ೮೮

ಮಾಳವಿಯಾ ಪರಿಭೈರವಿ
ಸಾಳಂಗಂ ನಾಟಿ ದೇಶಿ ಗುಜ್ಜರಿಯಾ ಹಿಂ ।
ದೋಳಂ ವಸಂತಭೈರವಿ
ಗೌಳಮನಾವೀಣೆಯಲ್ಲಿ ಮುನಿ ಬಾಜಿಸಿದಂ ॥ ೮೯

---

1 ಮುಳ್ಗಿ. 2 ಸರಾಗೋನ್ನತಿಯಿಂ.

ಗತಿ ಗಹಗಹಿಸಲ್ ಕಳಸೋ
ನ್ನತಿ ಗಮಕಂ ವಹಣಿ ಕೊಂಕುಬಾಯ್ 1 ನುಣ್ಪನುಪಾಯ
ಜತಿ ನೇವಣಿ ಮಿಗೆ ಸೊಂಪಾ
ಹತ ಕಂಪಿತಮುಣ್ಮೆ ಪಾಡಿದಂ ಮುನಿಋಷಭಂ ॥ ೯೦

ವರಮಂದ್ರಮಧ್ಯತಾರ
ಸ್ವರದಿಂದಂ ಶುದ್ಧಸಾಳಗಂ ಸಂಕೀರ್ಣಂ ।
ಬೆರೆದೊಪ್ಪಲ್ಪಾಡಿದನಾ
ಗುರುವಿಶ್ವೇಶ್ವರನ ಮಹಿಮೆಯಂ ಮುನಿತಿಲಕಂ ॥ ೯೧

ವ॥ ಇಂತತಿವಿಲಾಸದಿಂ ಪಾಡುತ್ತೇಣಧರಧರನಂ ಸಾಮಗಾನಪ್ರಿಯನಂ ತಲೆದೂಗಿಸಿ ನಾರದಮುನೀಶ್ವರಂ ಕಠಕಮಲವಂ ಮುಗಿದು ಬಿನ್ನಪಂಗೆಯ್ದನದೆಂತೆಂದೊಡೆ,

ಆದ್ಯಂತರಹಿತನೇ ಕೇಳ್
ಚೋದ್ಯಂ ನಾನೆಂದು ಕಂಡುದಿಲ್ಲದು ತಿಳಿವೊಡ ।
ಭೇದ್ಯಂ ಲೋಕಕ್ಕದು ಸಾ
ವದ್ಯಂ 2 ಬ್ರಹ್ಮಾದಿಗಳ್ಗುಮರಿವೊಡಸಾಧ್ಯಂ ॥ ೯೨

ವ॥ ಎಂದಾಪಾಮರಿಯಂ ತಾಂ ಕಂಡ ವೃತ್ತಾಂತಮನುಸಿರ್ದಾಮಸ್ಕರಿ ಲಿಂಗವಾಗಿರ್ದಪಂ ಗಡ ತನಗಾಮೂರ್ತಿಯಂ ತೋರಿ ರಕ್ಷಿಸಲ್ವೇಳ್ಕುಮೆಂದು ಬಿನ್ನಪಂಗೆಯ್ಯಲೊಡನೀಶ್ವರನಿಂತೆಂದಂ,

ಎನಗೆ ನಿವಾಸಮಾದ ವರಕಾಶಿಯ ಮೈಮೆಯನೀಜಗತ್ತ್ರಯಂ
ಮುನಿವಚನಂಗಳಿಂದೆ ನೆರೆ ಕೇಳ್ವುದಲ್ಲದೆ ಕಣ್ಗಳಿಂದೆ ಕಂ ।
ಡಿನಿತರಿಯರ್ಬಳಿಕ್ಕದನೆ ಲೋಚನಗೋಚರಮಾಗಿ ತೋರುವೆಂ
ನಿನಗದನೆಂದು ವಿಶ್ವಪತಿ ನಾರದನೊಳ್ನುಡಿದಂ ಮೃದೂಕ್ತಿಯಿಂ ॥ ೯೩

ವ॥ ಇಂತು ನಿರವಿಸಿ ದೇವಮುನಿಯನೊಡಗೊಂಡತಿಪ್ರೀತಿಯಿಂ ಪೊರಮಟ್ಟು ನಂದಿಕೇಶ್ವರನ ಕೈಲಾಗಿನೊಳ್ವಿಶ್ವನಾಥಂ ಪೊಟಲೊಳ್ವಿರ್ಪಾಗಳ್ಮುಂದೆ ಸೂಪಗೇರಿಯಿರ್ದುದದರ ವಿಲಾಸವೆಂತೆನೆ,

1 ನುಣ್ಪನುಪಾಯ್. 2 ಬ್ರಹ್ಮಾದಿಗಳ್ಗರಿವೊಡಸಾಧ್ಯ.

ಉಳುಗಂಬಿತ್ತುತೆ ನಾಡೆ ಚೊಕ್ಕಳಿಕೆಯಿಂ ಸ್ರಕ್ಚಂದನಾಮೋದಮಂ
ತಳೆದೋರಂತೆಸೆದಿರ್ಪ ಸೂಳೆಯರ ಪೆರ್ಮೊಳಂಗಳಿಂದಂ ಕರಂ ।
ಬಳಲ್ದಂದಲ್ಲಿ ಬೆಮರ್ತುರ್ ಬರ್ಪ ವಿಟನೋ ತಾನೆಂಬಿನಂ ಸಂತತಂ
ಸುಳಿದತ್ತೊಯ್ಯನೆ ಶೈತ್ಯಸೌರಭದಿನಾತಂಗಾಳಿ ತನ್ನಿಚ್ಛೆಯಿಂ ॥ ೯೪

ಇದು ರತಿದೇವಿ ಸಂತಸದಿನಾಡುವ ಲಾಸ್ಯದ ಗೇಹಮೋ ಬಟಿ
ಕ್ಕಿದು ಬಗೆಗಂಡ 1 ನೆಂಬರಸನಾಲಯಮಾದುರುರಾಜಧಾನಿಯೋ ।
ಇದು ಸೊಗಸೀವ ಗಾಡಿಯ ನಿವಾಸಮೊ ಮೋಹನಜನ್ಮಭೂಮಿಯೋ
ಇದೆನೆ ವಿರಾಜಿಸಿತ್ತು ಬೆಲೆವೆಣ್ಗಳ ಕೇರಿಯತೀವ ರಮ್ಯದಿಂ ॥ ೯೫

ಆಸೆಯ ಪಕ್ಕೆ ಪಳಾಳದ
ವಾಸಂ ಜತ್ತಕದ ಜನ್ಮಭೂಮಿ ತೊದಳ್ ದೊ ।
ಳ್ಯಾಸಂ 2 ಸುರೆಯುದ್ಭವಿಸಿದ
ದೇಶವಿದೆನೆ ಸೂಳೆಗೇರಿ ಕಣ್ಗೆಸೆದಿರ್ಕುಂ ॥ ೯೬

ಉಣ್ಣದವರನದಟಿಂದಂ
ದಣ್ಣನೆ ದಣಿವಂತೆಯುಣಿಸಿಯುಣ್ಬರನೊಲವಿಂ ।
ದುಣ್ಣದವೋಲ್ಮಾಳ್ಪ ಬೆಲೆ
ವೆಣ್ಣಸಮೂಹಂಗಳಿಂದಮಾಸ್ಥಳಮೆಸೆಗುಂ ॥ ೯೭

ಬಗೆಯಲ್ ರಂಭಾವಧುಗೋ
ರಗೆಯಾಗೊಪ್ಪಿರ್ಪ 3 ರೆಂದು ಪೇಳ್ವೆನೆಯವರಂ ।
ಮಿಗೆ 4 ರಂಭಾವಿಭವಮನೂ
ರುಗಳಿಂ ಗೆಲ್ದೆಸೆವುತಿರ್ಪರಾ ಬೆಲೆವೆಣ್ಗಳ್ ॥ ೯೮

ಚಿತ್ತಜನಂಬುಗಳಂತೆರ್ದೆ
ವೊತ್ತಿದ ಮೋಹನದ ರೂಪಿನಿಂ ಗುಣದಿಂದೆ ಮ ।
ಹೋತ್ತಮೆಯರಾದಿವರ್ಗೆ ತಿ
ಲೋತ್ತಮೆಯುಂ ಪೋಲಸುವರೆ ಬಿತ್ತೆಗರಾದರ್ ॥ ೯೯

ಕುಡಿಗುರುಳೋಳಿ ನೀಲಮುರುಕುಂದಮೆ 5 ಯಾ ದರಸ್ಮಿತಂ ಪಲಂ
ಕಡು ಸೊಗಸೀವ ವಕ್ತ್ರಮುಖಿ ಮಾಪದುಮಂ ಕೊರಲೆಯ್ದೆ ಶಂಖಮಾ ।

---

1 ನೆಂಬರಸಿಗಾಲಯ. 2 ಸತಿಯುದ್ಭವಿಸಿದ. 3 ವೆಂದು.
4 ರಂಭಾವಿಭವಮನೋ. 5 ಮುಂದರಸ್ಮಿತಂ.

ನಿಡಿದೆನಿಸಿರ್ಪ ಲೋಚನವೆ ಪದ್ಮಮದಾಗೆ ಮನೋಜಯಕ್ಷಪಂ
ಪಡೆದ ನಿಧಾನವೆಂಬಿನೆಗವೊಪ್ಪಿದರಲ್ಲಿಯ ವಾರನಾರಿಯರ್ ॥ ೧೦೦

ಅಲ್ಲಿಯುಳಿದೇರ ಪುರ್ವಿನ
ವಿಲ್ಲಿಂದಂ ಕಣ್ಗಳೆನಿಪ ಕೂರ್ಗಣೆವಿಂಡಿಂ ।
ಪುಲ್ಲಾಸ್ತ್ರಶಬರಸಾರ್ದೆಸು
ತೆಲ್ಲಾಗಳ್ಕೆಡಪುವಂ ವಿಟವ್ರಜಮೃಗಮಂ ॥ ೧೦೧

ವ॥ ಇಂತಿರ್ಪ ಸೂಳೆಗೇರಿಯೊಳೇಳ್ತರ್ಪಲ್ಲಿ,

ಇದು ರತಿರಾಜನ ಶಸ್ತ್ರಾ
ಸ್ತ್ರದ ಸದನವೊ ಬಳಿಕೆ ನೋಡೆ ಮುಯ್ಯಾರಡಿಮೊ ।
ತ್ತಡ ಭೋಜನಶಾಲೆಯೊ ತಾ
ನಿದೆನಲ್ಕೆರೆ ರಂಜಿಸಿತ್ತು ಪೂವಿನ ಪಸರಂ ॥ ೧೦೨

ವ॥ ಅಲ್ಲಿ ಕೆಲಂಬರ್ ಮಾಲೆಗಾರ್ತಿಯರ್,

ಕಾವನ ಬಿಲ್ಲನಾರಿಗಿವು 1 ಮೂರಿಗಳಾಗಿಯುಗಲ್ದರಂ ಬಟಿ
ಕ್ಕೋವುಗುವೊಲ್ದು ಕೂಡಿದಿಸಿಯರ್ಕಳ ಸೌಖ್ಯಸಮೃದ್ಧಿಗೆಯ್ದೆ ಸಂ ।
ಜೀವನವೊಪ್ಪುವೀ ಪರಿಮಳಂದಳೆದೊಪ್ಪುವ ಪೊನ್ನಪೂವಿದೆಂ
ದಾವಗಮಲ್ಲಿ ಸಂಪಗೆಯ ಪೂಸರಮಂ ಪಿಡಿದಿರ್ದರಳ್ತಿಯಿಂ ॥ ೧೦೩

ಆದರಮಿಾವ ಕೆಂದಳದೊಳೊಂದಿದ ಕುಂದಮನೋಜದಪ್ಪಿ ಕೆಂ
ಜಾದಿಯ ಪೂಗಳೆಂದು ಮಿಗೆ ಸೆಳ್ಳುಗುರ್ಕೈಳ್ಪ ಮುಸುಂಕಿ ರಂಜಿಪಾ ।
ಜಾದಿಯುನೇ ಸಮಂತೆಸೆವ ಕುಂದವೆನುತ್ತುಱೆ ಕೊಳ್ಪರಲ್ಲಿ ಕಂ
ಪಾದಮದಾಗಿ ರಂಜಿಸುವ ಪೂಗಳನಲ್ಲಿಯು ಕಾಮಿನೀಜನಂ ॥ ೧೦೪

ವ॥ ಇಂತಪ್ಪ ಪೂವಿನ ಸಂತೆಯಂ ನೋಡುತ್ತೆ ನಡೆತರ್ಪಾಗಳ್,

ಪೊಡಪಿಯೊಳೊಪ್ಪುವಾ ಬೊಜಗಸಂತತಿಯಂ ಸೆರೆಗೆಯ್ದು ನಾಡೆ ಕಾ
ಲ್ಗೆಡಿಸಿ ರಸಾತಳಸ್ಥಳದೊಳಿರ್ಪ ಭುಜಂಗಸಮೂಹವಂ ನಥ ।

1 ಮಾರಿಗಳಾಗಿ.

ಕ್ಕಡದರ್ದುಱು ಖೇಚರಪ್ರಕರತಿಯುಂ ನೆರೆ ಸೋಲಿಪೊಡಲ್ಲಿಗೆಯ್ದಿ ದಾ
ಳಿಡುವ ಬೆಡಂಗೆನಲ್ಕೆ ರೆದರುಯ್ಯಲೆಯಾಡುವ ವಾರನಾರಿಯರ್ ॥ ೧೦೫

ತಾರಗೆವಟ್ಟೆಯಲ್ಲಿ ತಮಗೊಲ್ದುಲವಿಂದೆ ಸುಸಿಲ್ಗೆ ಬರ್ಪ ಜಂ
ಭಾರಿಕುಬೇರರಾತ್ಮಭವರಂ ಮುದದಿಂದಿದಿರ್ಗೊಂಡು ಬರ್ಪುದ ।
ಕ್ಕಾರಯೆ ಕೂರ್ಮೆಯಿಂದೆ ತಳರ್ಪಂದವೊ ತಾನೆನೆ ಸೂಳೆಗೇರಿಯೊ
ಳ್ವಾರನಿತಂಬಿನೀನಿಕರಮುಯ್ಯಲೆಯುಂ ಸಲೆಯಾಡುತೊಪ್ಪಿದರ್ ॥ ೧೦೬

ವ॥ ಮತ್ತಮೊಂದೆಡೆಯೊಳ್,

ಎನಸುಂ ದೋಷಾಕರಂ ತಾಂ ಜಗವಱಿಯೆ ಕಳಂಕಾಂಕಿತಂ ನೋಡ ನಮ್ಮಾ
ನನಮುಂ ಪೋಲ್ಪನ್ನನೇ ಎಂದುಱು ನೆಱವೆಱೆಯುಂ 1 ಕೊಂಡುಬಂದಾತನಂಬ ।
ಲ್ಮನಿಸಿಂದಿಕ್ಕೈಯೊಳಾಪ್ಪಿಂ ಸಳಿವುತೆ ನೆಲಕೀಡಾಡುವಂತಾಗಳಾ ಮು
ತ್ತಿನ ಪೊಯ್ಚಂಡಾಡುತೊರ್ವಳ್ಕೆರೆದಿರೆ ಮುದದಿಂ ನೋಡುತೆಳ್ತಂಡನೀಶಂ ॥ ೧೦೭

ನೆತ್ತಮನೊಲ್ದು ತಮ್ಮೊಳಿರದಾಡುತೆ ರಂಜಿಪ 2 ಕೊಯ್ಲುವಿಂಡರಂ
ನೆತ್ತದಿನಂದು ಸೋಲಪರಿದೇನರಿದೇ ಮಿಗೆ ದೂರಮಾಗಿ ಪೋ ।
ಗುತ್ತೊಡನಾಡದಿರ್ಪ ಜತಿಗೊಂದಣಮುಂ ಬಗೆಗೂಡಿ ನೋಡುತುಂ
ನೆತ್ತದಿನೆಯ್ದೆ ಸೋಲಸುವರಾವಗಮಲ್ಲಿಸು ವಾರನಾರಿಯರ್ ॥ ೧೦೮

ವ॥ ಮತ್ತಮೊಂದೆಡೆಯೊಳ್,

ಇನಿಯುಂ ತಾಳ್ದಿದನೆಂದುವಂಕದರದೊಳ್ಪಿಂದಾರಯಲ್ಕಲ್ಲಿ ಬ
ರ್ಪಿನೆಗಂ ಕಾಮುರ್ಬುಗಿಲ್ಗಂಡ ಸೋಗೆಯುವೊಲುರ್ವುತ್ತರ್ಕನಂ ಕಂಡ ಪ ।
ದ್ಮಿನಿವೋಲಾಸ್ಯಮುರಲ್ದು ಬಂದೆಸೆವ ಮಾವಂ ಕಂಡ ಕೀರಂಬೊಲಂ
ದನುರಾಗಂದಳೆದೊಪ್ಪಿ ಚುಂಬಿಸಿ ಬಟಿಕ್ಕಂತಾತನಂ ಕೂಡಿದಳ್ ॥ ೧೦೯

ತಾಳ್ದಪರಾಧಮುಂ ತಡೆದು ಬಂದವನಾಕೃತಿಗಂಡು ನಾರಿ ಪಾ
ರೆಳ್ದೊರೆಯುರ್ಕೆ ಸಾಕಿದ ಶುಕಂ ಬಟಿಕಂತದನಂದು ಕಲ್ತು ತಾಂ ।
ನೀಳ್ದುಸುರ್ಪನ್ನೆಗಂ ಮುಳಿದನೆಯ್ದೆ ವಿಜಾತಿಯ ನಿಷ್ಠುರೋಕ್ತಿಯುಂ
ಕೇಳ್ದು ಸಮುಂತು ಸೈರಿಸುವರಾರ್ಧುವನತ್ರಯದೊಳ್ವಿಚಾರಿಸಲ್ ॥ ೧೧೦

1 ಕೊಂಡುಬಂದಾವನಂ. 2 ಕೊಯ್ಲುವಿಂಡರಂ.

ವ॥ ಮತ್ತಮೊಂದೆಡೆಯೊಳ್,

ತಱಿಸಂದಿರ್ಪ ಸುರಾರ್ಚನಾತಿಶಯದಿಂದೆಲ್ಲರ್ಗಮಿಂದ್ರತ್ವಮಂ
ದುಱಿ ಸಾರ್ದತ್ತು ಸುರಾರ್ಚನಾತಿಶಯದಿಂದೀಕಾಂತೆಗಿಂದೀಗಳೇ !
ನೆಱಿ ರಂಜಿಪ್ಪ ದಿಗಂಬರತ್ವಮದು ಸಾರ್ದತ್ತಾಯೆನುತ್ತೆಯ್ದೆ ನಾ
1 ಣ್ದೊಱಿದಿರ್ಪಾಸವಮತ್ತೆಯಂ ಚದುರನೊರ್ವಂ ಕಂಡು ಱೋಡಾಡಿದಂ॥೧೧೧

ಸಡಗರದಿಂದೆ ಚಂದ್ರಮುಖಿ ತಣ್ಣದಿರ್ಗಲ್ಲ ತೊಳಪ್ಪ ಪಾತ್ರೆಯಂ
ಪಿಡಿದುಱಿ ಮದ್ಯಮಂ ಕುಡಿವುತಿರ್ಪಿನಮಂತದು ಸೋರ್ದುದ ನಾಡೆ ತೊ ।
ಟ್ಟಿಡರೊಡೆದತ್ತು ಬಟ್ಟಲೆನುತುಂ ಗಳಪುತ್ತೆ ತೊಳಲ್ದಳಲ್ದು ಗೋ
ಳಿಡುತೆಸೆದಿರ್ದಳಲ್ಲಿ ಮಧುಮತ್ತರೊಳುಂಟೆ ವಿಚಾರಮಾರಯಲ್ ॥ ೧೧೨

ವ॥ ಮತ್ತಮೊಂದೆಡೆಯೊಳ್,

ಕೂಡಿಯುಗಲ್ದವಂ ಬಟಿಕೆ ವಿಷ್ಣುವಿನಂತೆಸೆದಿರ್ಪನೊಲ್ದು ಮಾ
ತಾಡಿದವಂ ಕಡಂಗಿ ಕಮಲಾಸನನಪ್ಪನಮರ್ಚಿ ನೇಹಮಂ ।
ಮಾಡಿದವಂ ಮಹೇಶ್ವರನನಿಪ್ಪನೆನುತ್ತಿರದೊರ್ವಳೆಯ್ದೆ ಕೊಂ
ಡಾಡಿದಳಾಗಳಲ್ಲಿ ಪೊಸಗಾಡಿಯನಾಂತೆಸೆದಿರ್ಪ ಪುತ್ರಿಯಂ ॥ ೧೧೩

ವ॥ ಅಲ್ಲಿಯೊರ್ವ ವಿರಹಿಣಿ,

ವಿಪುಳಾಮರ್ತ್ಯಫಣೀಂದ್ರಲೋಕಮರಿಯಲ್ ಗುರ್ವಂಗನಾಸಂಗದಿಂ
ದಪಹಾಸ್ಯಂಬಡೆದಿರ್ದ ದೋಷಿ ಶಶಿ ತಾಂ ಸದ್ವೃತ್ತನಾಗಿರ್ದೊಡೇಂ ।
ಕಪಟಾತ್ಮರ್ಗದು ನೈಜಮಾಗಿ ನೆರೆಗೊಂಡೊಪ್ಪಿರ್ದುದೇಯೆಂದವಂ
ಚಪಲಾಪಾಂಗಿಯದೊರ್ವಳಿಂದುಕರದಿಂ ನೊಂದಾತನಂ ದೂರಿದಳ್ ॥ ೧೧೪

ಮೊಲನಂ ಕಂಡೊಡೆ ಪಥದೊಳ್
ವಿಲಯಂ ಪಥಿಕರ್ಗೆ ಬರ್ಪುದೀ ಸತ್ಪಥದೊ ।
ಳ್ಮೊಲದಳೆದಿಪನಂ ಕಂಡ
ರ್ಗೆ ಲಯಂ ಬರದಿರ್ಕುಮೋ ಎನುತ್ತವಳುಸಿರ್ದಳ್ ॥ ೧೧೫

ಪನ್ನೀರ್ಚೆನ್ನೀರಾಯ್ತಾ
ಚೊನ್ನಂ ತಾನಿಂತಿವಳ್ಗೆ ಪಳುಗಿಚ್ಚಾದ ।

1 ಚೊರೆ.

ತ್ತಿನ್ನೇವೆನೆನುತ್ತೊರ್ವ
ಳ್ತನ್ನಣುಗಿಯನಿರದೆ ನೋಡಿ ಮರುಗುತ್ತಿರ್ದಳ್ ॥ ೧೧೬

ಊದುವ ತೆಂಗಾಳಿ ಬಟಿ
ಕ್ಕಾದತ್ತಂಗಜನ ದಾಳಿ ಪೊರೆಕುಳಿರ್ವಕ್ಕಿಯ ।
ನಾದಂ ಕಾರ್ಮುಗಿಲ್ಗಟ್ಟಿನ
ನಾದಂ ತಾನಾದುದೀಕೆಗೆಂದವಳುಸಿರ್ದಳ್ ॥ ೧೧೭

ವ॥ ಮತ್ತವೊರ್ವಳ್,

ಅವಗುಣಿಯಾದೊಡಂ ಸುಗುಣನೆಂದುಱೆ ಕಾಣ ಕುಲೀನನಾದೊಡಂ
ತವೆ ಕುಲಜಾತನೆಂದು ತಿಳಿ ಭಾವಿಸಿ ನೋಡೆ ಕುರೂಪಿಯಾದೊಡಂ ।
ನವರತಿರಾಜನೆಂದು ಬಗೆಯಾವ ಗುಣಂ ಸಲೆ ಸಾರ್ದ ಚಾಗಿ ದೇ
ವವಣಿಯನಾಂತ ವಾಜಿಗೆಣಿಯೆಂದು ತನೂಜಗೆ ದೀಕ್ಷೆಯಿಕ್ಕಿದಳ್ ॥ ೧೧೮

ಕುಲದಲ್ಲುತ್ತಮನಾದೊಡಂ ಸೊಗಸುವೀಸೌಂದರ್ಯದೊಳ್ನೋಡೆ ಕ
ಮ್ಮರಲಂಬಂಗೆಣೆಯಾದೊಡಂ ಗುಣಗಣಪ್ರಖ್ಯಾತನಾಗಿರ್ದೊಡಂ ।
ಬೆರವೆಣ್ಣೀಯದೆ ಮೇಕುದೋರುವವನಂ ಮಾತಾಳಿಗೊಲ್ದಾವಗಂ
ಒಲಿಯರ್ತೀರ್ಚಿ ಬರ್ದುಂಕೆನುತ್ತುಸಿರ್ದಳಾ ಮುತ್ತಬ್ಬೆಯಾಪುತ್ರಿಯೊಳ್ ॥ ೧೧೯

ಸ್ಮೃತಿಸಂಭೂತರಹಸ್ಯದ
ಮತವಿಡಿದಾಚರಿಸುವೆಮ್ಮನೀಗಳ್ ಧರ್ಮ ।
ಚ್ಯುತರೆಂದುಸಿರ್ವರ್ ಮೂರ್ಖ
ಪ್ರಥಿತರೆನುತ್ತುಸಿರ್ದಳೊರ್ವಳೇನಚ್ಚರಿಯೋ ॥ ೧೨೦

ವ॥ ಮತ್ತಮಲ್ಲಿ,

ಈಂಟಿಸುವರ್ಗಾಗುಳಮಂ
ಬೇಂಟೆಯನಿರದೆಯ್ದೆ ಸಮೆವರಾ ಮುಮ್ಮುರಿಯೊಳ್ ।
ಬೇಂಟಂದೋರ್ಪರಲಂಪಿಂ
ಕುಂಟಣಿಗಳ್ಕಲ್ಲಪಾಪವೋಲ್ಕೈತವದಿಂ ॥ ೧೨೧

ವ॥ ಮುಂದೆ ಬರವರೆ ಎಳೆವೆಂಗಳ್ದೊರ್ವ ದೂದವಿ ಸೂಳೆಸಿದ್ಧಾಂತಮಮಂ
ಪೇಳುತ್ತಿರ್ದಳದೆಂತೆನೆ,

ಗರಗರಿಕೆ ಸಿಂಗರಂ ಕಿರು
ವರೆಯುಂ ಪೊಸರೀತಿ ಸುಂದರದ ಸವಿನೋಟಂ ।
ದೊರೆಕೊಂಡಿರ್ಪಳ ಮನೆಯೊ
ಳ್ಸರತರು ನಳನಳಿಸಿ ಬೆಳೆದು ರಂಜಿಸುತಿರ್ಕುಂ ॥ ೧೨೨

ನಯವೆತ್ತಿನಿನುಡಿಯಿಂ ಜಾ
ಣ್ಮೆಯಿನಾವಗಮಿನಿಯನೆರ್ದೆಯನಿರ್ಕುಳಿಗೊಳ್ವೀ ।
ಮಯಣನ ಗೆಣೆಯೆನಿಪಳ ಮನೆ
ವಯನನಿಕುಂ ಮುಪ್ಪುದಪ್ಪುಗರ ಹಸುವಾಗಳ್ ॥ ೧೨೩

ಗುಣದಿಂ ಕಡಂಗಿನಿಂ ಬಿ
ನ್ನಣದಿಂದೆ ಬೆಡಂಗಿನಿಂದೆ ರಂಜಿಸುವಾ ಸುರ ।
ಮಣಿಗೋರಂತಿರ್ಕುಂ ಸುರ
ಮಣಿತಾನವಳೆಯ್ದೆ ಕೊರಲ್ಗೆ ಕಟ್ಟಿದ ಮಣಿವೋಲ್ ॥ ೧೨೪

ಮೊಲೆ ನೆಲೆದಪ್ಪದ ಮುನ್ನಂ
ನೆಲಸಿದ ಜವ್ವನವೆನಿಪ್ಪ ಸಂಪತ್ತೇಗಂ ।
ತೊಲಗದ ಮುನ್ನಂ ವಿಟಜನ
ಕೊಲವಂ ಮಾಳ್ಪವಳೆ ಚದುರೆಯೆನುತವಳುಸಿರ್ದಳ್ ॥ ೧೨೫

ಮುಳಿಸು ಬೆಳ್ಳಕ್ಕೆ ವ್ಯೈಸಿಕ
ಮಳಿಪುಜಿ ಮಾಮಾಯೆ ಹುರುಡು ಹೋರಟೆ ಕಹಿಪುಸಿ ;
ಯಳಲೆಂಬಿವು ಗಣಿಕಾಳಿಗೆ
ಬಳಗವೆನುತ್ತಬಲೆ ತರಳೆಗೋದಿಸುತಿರ್ದಳ್ ॥ ೧೨೬

ನೆರೆ ಚದುರಂಗಂ ಜೂದಂ
ತರಿಸಂದೀ ನೆತ್ತಗೋಷ್ಠಿಪರಿಹಾಸಂಗಳ್ ।
ಮೆರೆಯುದ ಮನೆ ಪರಿಭಾವಿಸೆ
ಸೆರೆವನೆಯುದು ಸೂಳೆವನೆಯುದತ್ತೆಂದುಸಿರ್ದಳ್ ॥ ೧೨೭

ಕೋವಿದೆ ಸುಪ್ರಸನ್ನಮುಖಿ ಮೆಲ್ನುಡಿಗಾರ್ತಿ ಸುಸಿಲ್ಪಡಂಗಿ ರಾ
ಜೀವಸುಗಂಧಿ ಚೆಲ್ವೆಯನುಕೂಲೆ ಲಸದ್ಗುಣಿ ಮಾನಿ ದಾನಿ ನಿ ।

ರ್ವಾವಿಲಚಿತ್ತೆ ಭೋಗಿ ರತಿತಂತ್ರವಿಶಾರದೆಯಪ್ಪ ನಾರಿಯೋ
ಕಾವನ ಕಾಳೆಗಕ್ಕೆ ಪಡೆವಳ್ತಿಯೆನಿಪ್ಪಳವಳ್ವಿಚಾರಿಸರ್ ॥ ೧೨೮

ಅಳಿವನನಜ್ಞನಂ ಕುಟಿಲತಂತ್ರವಿಶಾರದನಂ ಪೊಸಂಬನಂ
ಪಳೆಯುನನಲ್ಪನಂ ದುರುಳನಂ ವಿಕಳಾಂಗನನೆಯ್ದೆ ಲೋಭಿಯಂ ।
ಖಳನನತೀವ ಮೂರ್ಖನನಳಲ್ವನನೇಳಿಪನಂ ಕನಲ್ವನಂ
ಗಳಪನನಾಸೆಗೆಯ್ವ ಗಣಿಕಾಳಿಗದೇಂ ಪಳಿ ಪೊರ್ದದಿರ್ಪುದೇ ॥ ೧೨೯

ಬಗೆಯರಿದೀವ ಬಂಧಮರಿದೊಂದುವ ಕೂಟದೊಳಿಂಪುದೋರ್ಪ ಬಿ
ತ್ತಿಗನನಿಸಿರ್ಪ ಗಾಡಿಗೆ ತವರ್ವನೆಯಾದಿನಿವಾತನುಳ್ಳ ಟೆ ।
ನ್ನಿಗನೊಲವೆಂಬುದಂತದು ಪುರಾಕೃತಪುಣ್ಯವೆನಿಪ್ಪುದಾತನೊಳ್
ಬಗೆವುಗೆ ಬೆಚ್ಚವೋಲಿರದೆ ಮಾಣ್ಬರೆ ಸೂಳೆಯರೆಂಬ ಥಾಳೆಯರ್ ॥ ೧೩೦

ಎಲೆ ಪಣ್ತಿರ್ದಾಮ್ರಕೆ ಕೋ
ಗಿಲೆಗಳ್ಕಂಪುಡಿದಲರ್ಗೆ ಮುಯ್ಯಾರಡಿಗಳ್ ।
ನಲದೆರಗುವುವೇ ಕೇಳ್ಸಿರಿ
ತೊಲಗಿದ ಬೊಜಗಂಗೆ ಮನವನೀವಳೆ ಬೆರೆವೆಣ್ ॥ ೧೩೧

ವ॥ ಮತ್ತಮೊಂದೆಡೆಯೊಳ್,

ಶ್ರುತಿರಹಿತತ್ವದಿಂದೆ ಸಲೆ ತೋರ್ಪ ಚತುರ್ದಶನಂಗಳಿಂದೆ ಸ
ದ್ಗತಿಯುಮಡಂಗಿ ವಕ್ರಗತಿಗಾಲಯಮಾಗೆಸೆದಿರ್ಪ ದೂಸರಿಂ ।
ದತಿಭಯಮಂ ಸಮಂತು ಮಿಗೆ ಮಾಳ್ಪುದರಿಂದೆ ಭುಜಂಗನಾವ ಮೊ
ಪ್ಪಿತು ನಿನಗೆಂದದೊರ್ವಬಲೆ ವೃದ್ಧವಿಟಂ ಬರೆ ಚುನ್ನವಾಡಿದಳ್ ॥ ೧೩೨

ವಿನಯಾಲಾಪಮನೆಯ್ದೆ ಕಲ್ವ ಗಿಳಿವಿಂಡಂ ರಂಜಿಸಿರ್ಪಮ್ಮಯಾ
ತನಿಗಂಪಿಂಗೆರಗುತ್ತೆ ವರ್ಪಳಿಗಳಂ ಕಟ್ಟಿರ್ಪ ಸೊರ್ಕಾನೆಯಂ ।
ಮನವೊಲ್ದಾವಗಮೋವಿದೇಣಿಚಯಮಂ ಕಂಡಜ್ಞನೀಗಳ್ತಪೋ
ವನದಿಂದಿಲ್ಲಿಗೆ ಬಂದನಕ್ಕ ಕಿನಿಸೇಕಾಂ ದಾರಿಯಂ ತೋರುವೆಂ ॥ ೧೩೩

ಇರದೆಳ್ತಂದಂ ಲಂಡೋ
ದರನೇಕರದಂ ಬಳಿಕ್ಕೆ ರತಿಗತಿವಿಪ್ನಂ ।

ದೊರಕೊಂಡುದು ಚಿತ್ರಮೆನು
ತ್ತೊ್ತರೆದೊರ್ವಳ್ ವೃದ್ಧನಂ ವಿಡಂಬಿಸುತಿರ್ದಳ್ ‌। ೧೩೪

ಥಂಗಂ ಮುಕ್ಕರಿಸಿರ್ಪ ಮುತ್ತಳನದೊರ್ವಂ ಕಂಡು ತಾಯ್ನಿನ್ನಯಾ
ಥಂಗಂ ಪೋಪುದು ಬಂದಿಮಳ್ಗೆ ಮುದದಿಂದಂ ನಿನ್ನ ಕಂಡಾರಯಲ್ ।
ಸಂಗಂಗೆಯ್ದೊಡಸಿರ್ದೊಡಂ ಬಟಿಕವಂ ಮೇಣ್ಬಿರ್ದೊಡಂ ಥಾತ್ರಿಯೊ
ಳ್ಭಂಗಂ ಪೋಗದವಂಗೆನುತ್ತೆ ಸರೆ ಸಬ್ಬಂಗೆಯ್ದನಾತಾಣದೊಳ್ ॥ ೧೩೫

ಅರೆತುಟಿ ಪೋದ ಸರ್ವರಸದಿಂ ಶುಚಿಯಂತಿರೆ ತೋರುತುಂ ವಲಂ
ಬರೆತ ಪಯೋಧರತ್ವದೆ ಶರತ್ಸಮಯಕ್ಕಣಿಯಾಗಿ ರೂಢಿಯಿಂ ।
ಮೆರೆವಿವಳಂ ಸಮಂತು ಋತುವರ್ಜಿತೆಯೆಂದೆಳೆವೆಂಡಿರಾವಗಂ
ಜರಚುವರೇಕೆಯೋ ಎನುತೆ ವೃದ್ಧೆಯನೊರ್ವನಣಂಕವಾಡಿದಂ ॥ ೧೩೬

ವ॥ ಇಂತಪ್ಪ ಬಿನದಂಗಳಂ ನೋಡುತ್ತೆ ವಿಶ್ವನಾಥಂ ದರಹಸಿತವದನಾರವಿಂದನಾಗಿ ಪಾವುರಿಯ ಮನೆಗೇಳ್ತಂದಲ್ಲಿ ಸನ್ಯಾಸಿ ಲಿಂಗಸ್ವರೂಪಂಬಡೆದಿರ್ದುದಂ ನಾರದಂಗೆ ತೋರಿಸಾಲಿಂಗಕ್ಕೆ ಸುರಾಥಾಂಡೇಶ್ವರಲಿಂಗವೆಂಬಭಿಧಾನಮನೊಡರ್ಚಿ ನಾರದನಭೀಷ್ಟಮಂ ತೀರ್ಚಿ ಸಮಸ್ತಸಜ್ಜನಕ್ಕನುರಾಗಮನವುರ್ಚಿ ಕಾರುಣ್ಯಸಿಂಧುವೆನಿಪ್ಪ ವಿಶ್ವನಾಥನಿರಲಾಸಮಯದೊಳ್ ಯಾಮತ್ರಯಾನಕನಾದಂ ಕಿವಿವುಗಲರಮನೆಗೆ ಬಂದು ತನ್ನೊಡನೇಳ್ತಂದ ನಂದಿನಾರದರಂ ಬೀಳ್ಕೊಟ್ಟು ಶಯ್ಯಾನಿವಾಸಂಬೊಕ್ಕು ಮಣಿಖಚಿತಪರ್ಯಂಕದೊಳ್ ಹಂಸತೂಳತಳ್ಪದಲ್ಲಿ,

ಗಿರಿಜಾಸ್ಯಾಂಭೋಜದೊಳ್ತನ್ನಯ ನಗೆಮೊಗಮಂ ಸಾರ್ಚಿ ಬಿಂಬೋಷ್ಠದಿಂಪಂ
ಬರೆಪೀರ್ದಾನಂದದಿಂ ತೋಳ್ಪದಕೆಯನುಟಿ ಪೋರ್ಲ್ದಪ್ಪವೆತ್ತೊಲ್ಮೆಯಿಂದಂ ।
ಸುರತಾಂತಶ್ರಾಂತಿಯುಣ್ಮಲ್ ನೆಱೆ ಗುರುಕುಚತಳ್ಪಕ್ಕೆ ಮೆಯ್ಯಿತ್ತಮರ್ಚಿ
ರ್ಪರೆಗಣ್ಗಳ್ಗಾಡಿಸೂಸುತ್ತಿರೆ ಪರವಶನಂತೊಪ್ಪಿ ತೋರ್ದಂ ಮಹೇಶಂ ॥ ೧೩೭

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಳಾಗ್ರದೊಳ್ ॥ ೧೩೮

ಮುಳಿಯಲಗೇಂದ್ರಜಾತೆ ತಲೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಂ ।

ತುಟಿಲನೊಡರ್ಚಲೊಲ್ದು ಮೊಗದೋಳ್ಮೊಗವಿಕ್ಕುತೆ ಸಂತವಿಟ್ಟು ಬಾಂ
ಬೊಡೆಗೊಲವಿತ್ತು ಜಾಣ ಸಲಪೀಜಗಮಂ ಗುರುವಿಶ್ವವಲ್ಲಭಾ ॥ ೧೩೯

ಉತ್ಸಾಹವೃತ್ತಂ॥ ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬಿರೆದ ರಜಮನಿರದೆ ಸವಿದು ತಣಿದು ತನ್ನ ಲೀಲೆಯಿಂ ।
ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಪಿಾಗಭೀಷ್ಟಮಂ ॥ ೧೪೦

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತ
ಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದ
ಮಧುಕರಾಯಮಾಣ ಶ್ರೀಕಂಠಪಂಶಾರ್ಣವಪರಿಪೂರ್ಣಚಂದ್ರನೆ
ನಿಪ ಸತ್ಕವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ
ಶ್ರೀ ವೀರಭದ್ರವಿಜಯ ಮಹಾಪ್ರಬಂಧದೊಳ್
ವರ್ಷಾಶರತ್ಸಮಯ ಚಂದ್ರೋದಯ ಪಾಮ
ರೀಪರಿವ್ರಾಜಕಾನ್ಯೋನ್ಯಾಲೋಕನ
ತತ್ಸಂಭೋಗರಾತ್ರಿವಿಹಾರಸು
ರಾಭಾಂಡೇಶ್ವರಪ್ರಾದು
ರ್ಭಾವವರ್ಣನಂ
ಷಷ್ಠಾಶ್ವಾಸಂ ಸಂಪೂರ್ಣಂ.

---

# ಸಪ್ತಮಾಶ್ವಾಸಂ

ತನುವೊಂದರೊಳರೆಯಂ ಗಿರಿ
ತನೂಜೆಗಿತ್ತಷ್ಟಮೂರ್ತಿಯೆನಿಸುತ್ತೀಗಂ ।
ಘನಹೋದ್ಯೆಕ್ಕಿಂಬಾಗಿ
ರ್ಪನಘಂ ಶ್ರೀವಿಶ್ವನಾಥ ರಕ್ಷಿಪುದೆಮ್ಮಂ ॥ ೧

ಪರದಾರಾನ್ವಿತಕರ್ಮವೆಂಬುದೆನಗಂ ಸನ್ಯಾಸಿಗಂ ಭಾವಿಸಲ್
ಸರಿಯಾಗಿರ್ದುದವಂಗೆ ಸಾರ್ದುದದರಿಂದೀಶತ್ವಮಾರಯ್ಯೆ ದು ।
ಸ್ತರದುಃಖಂ ನನಗಾದುದೆಂದು ಕಳೆಗುಂದಿರ್ಪಂದದಿಂದಂ ಸುಧಾ
ಕರನೀರಂತೆ ನಿಶಾಂತದೊಳ್ಮಿಗೆ ಮಸುಳ್ದೆಯ್ದಿರ್ದನಸ್ತಾದ್ರಿಯಂ ॥ ೨

ಅಳಿವಾತಾರೆಗಳಂ ಮಿಗೆ
ಕಳಲ್ದಸಿತಾಂಬುಜವನೊಳ್ಪುಗೆಡುವ ಚಕೋರಿಗ ।
ಳಳಲನುಱ ಕಾಣಲಾರದೆ
ಕಳೆಯಾಣ್ಮಂ ಕಂದಿ ಕಡಲೆಳೊಳಾಳ್ದನದಾಗಳ್ । ೩

ಒದವಿದ ಕಾಂತಿಯಿಂದೆ ನಿಜವಲ್ಲಭನಪ್ಪ ಹಿಮಾಂಶುವಿರ್ಪಿನಂ
ಮುದಮನವರ್ಚಿ ತೋರ್ದುವು ಬಳಿಕ್ಕಮವಂ ಸಲೆ ಕಾಂತಿಗೆಟ್ಟಡಂ ।
ಗಿದ ಸಮಯಕ್ಕೆ ತಾರೆಗಳಡಂಗಿದುವಾಗಳೆ ಕಾಂತಿಗೆಟ್ಟು 1 ದಲ್
ಹದಿಬದೆಯರ್ಗೆ ತತ್ಪತಿಗಳಿರ್ದವೊಲಿರ್ಪುದು ಧರ್ಮಮಲ್ಲವೆ ॥ ೪

ಬೆಳಗು ಸಮೀಪಂ ನಮಗಿ
ನ್ನುಳಿವಿಲ್ಲೆಂದಳ್ಕಿ ಕಂದಿ ಕಳಲ್ದವೊಲಾಗಳ್ ॥
ಕಳೆಗುಂದಿದ್ದುವು ಸದನಂ
ಗಳೊಳೊಪ್ಪುತಿರ್ಪ ದೀಪಿಕಾನಿಕರಂಗಳ್ ॥ ೫

ವ॥ ಮತ್ತಮಾಗಳ್,

ಘನನಾದಂ ಪಿರಿದಪ್ಪ ಕೇಕಿನಿವಹಕ್ಕಂ ಹಂಸವೃಂದಕ್ಕಮಂ
ತೆನಸುಂ ಸಂತಸಮಂ ಪೊದಳ್ದು ಭಯಮಂ ಮಾಳ್ಪಂತೆವೋಲ್ನಾಡೆ ಕೋ ।

---

1 ದಲದೆಬದೆಯರ್ಗೆ.

ಕನಿಕಾಯಕ್ಕಮದೆಯ್ದೆ ಜಾರಮಿಥುನಕ್ಕಂ ಹರ್ಷದೌನ್ನತ್ಯಮಂ
ಘನದುಃಖಂಗಳನಂದೊಡರ್ಚಿದುದು ಪೆಂಪಿಂ ತಾಮ್ರಚೂಡಸ್ವನಂ ॥ ೬

ಕೂಗಿದ ಕುಕ್ಕುಟಂಗಳ ರವಂಗಳನಾಲಿಸಿ ಮೂಡವೆಣ್ಬಳಿ
ಕ್ಕೀಗಳಿನಂ ಮದೀಶನಿರದೆನ್ನೆಡೆಗೊಲ್ದುಱೆ ಪೋರ್ವಪೊಳ್ತಿದೆಂ ।
ದಾಗಳನಂತಸಂಭ್ರಮದಿನಾಂತನುರಾಗಮಿದೆಂಬಿನಂ ಕರಂ
ರಾಗಮನಾಂತು ಕಣ್ಗೆಸೊಗಸಿತ್ತರುಣೋದಯಮುದಯಮಿಂದ್ರದಿಕ್ಕಿನೊಳ್ ॥ ೭

ಹರಣಮುಮಾಳ್ವಕ್ಕಿಗಳ್ಗಾ
ಭರಣಂ ವಾರಿಜಸಮೂಹಕುರುತರಥುವನಕೆ ।
ವರಣೀಯಮೆನಿಪಹಸ್ಕರ
ಕಿರಣಪ್ರಕರಂ ಪೊದಳ್ದು ತೋರ್ದುದದಾಗಳ್ ॥ ೮

ಕುಮುದಸಂದೋಹವೆಲ್ಲಂ
ಕುಮುದವೆಯಾದತ್ತು ಬಳಿಕವೊಪ್ಪುತ್ತಿರ್ಪೀ ।
ಕಮಲಪ್ರತತಿಗಳೆಲ್ಲಂ
ಕುಮುದಂಗಳೆಯಾದುವಾಗಳೇನಚ್ಚರಿಯೋ ॥ ೯

ಇಂದಿರುಳಿನ ವೃತ್ತಾಂತಮು
ನೆಂದುಂ ನಾನರಿದುದಿಲ್ಲವೆಂದಾ ಮಿತ್ರಂ ।
ಬಂದೀಕ್ಷಿಪೊಡುದಯಾದ್ರಿಯ
ನಂದೇರಿದ ತೆರದೊಳುದಯಮಾದನದಾಗಳ್ ॥ ೧೦

ಶಿವನಂದುಪ್ಪವಡಿಸುತಿ
ರ್ಪವಸರಮಂ ಸಾರ್ದು ಪೂರ್ವವಧು ತಳೆದಿರ್ಪಾ ।
ನವಮಾಣಿಕ್ಯದ ಕೈಪಿಡಿ
ಯವೊಲೊಪ್ಪಿತ್ತುದಿಸಿ ತೋರ್ಪ ದಿನಕರಬಿಂಬಂ ॥ ೧೧

ವ॥ ಆಸಮಯದೊಳ್ಗಂಧರ್ವಕನ್ನಿಕೆಯರೀಶ್ವರನಿರ್ದ ಮಣಿಮಯಹರ್ಮ್ಯೋ
ಪಕಂಠಮಂ ಸಾರ್ದು ಸಿರಿಯ ದರದೊಳ್ನಿಂದು ಸುವರ್ಣವಲ್ಲರಿಯಂ ಬಾಜಿಸುತ್ತೆ,

ಲಳಿತಭೂಪಾಳಿಗುರ್ಜರಿ
ಮಲಹರಿದೇಶಾಕ್ಷಿನಾಡೆಗುಂಡಕ್ರಿಯೆಮಂ ।

ಗಳಕೌಶಿಕೆಯಾನಾರಣಿ
ಗಳಿನೀಶನ ಪದವನೆಯ್ದೆ ಪಾಡಿದರಾಗಳ್ ॥ ೧೩

ತಿವಿರಡಂಗಿದುದು ಚೇತ
ಸ್ತ್ರಿವಿರಾತ್ಮಧ್ಯಾನದಿಂದೆ ಭಜಕರ್ಗಾಗಳ್ ।
ತವಿಪಂತೆ ವಿಶ್ವಪತಿಯು
ಪ್ಪವಡಿಸೆ 1 ತಾವಯ್ದೆ ಪಾಡಿದರ್ಭಾವಕಿಯರ್ ॥ ೧೪

ವ॥ ಇಂತವರ ಗಾನಮನಾಲಿಸುತ್ತಾಗಳ್ವಿಶ್ವಪತಿಯುಪ್ಪವಡಿಸಿರ್ಪಿನಂ,

ಸಕಲನದೀನದಂಗಳುದಕಂಗಳನಿತ್ತುವು ದೇವಕನ್ಯೆಯರ್
ಮುಕುರಮನಾವಿಭೂಷಣಮನಾಂತಿರದಲ್ಲಿ ಪೊದಳ್ದು ಸೇವೆಯಂ ।
ಪ್ರಕಟಿಸಿದರ್ಮನೋಮುದದಿನಂದುರುದುಂದುಭಿಶಂಖನಿಸ್ವನಂ
ಸುಕರಮದಾಗಿ ಪೊಣ್ಮಿದುವು ಶಂಭುಸದಾಶಿವನೇಳಲಾಕ್ಷಣಂ ॥ ೧೫

ವ॥ ಇಂತನಂತವೈಭವದಿಂ ಕಾಶೀಪಟ್ಟಣದೊಳ್ವಿಶ್ವನಾಥನಿರುತ್ತಿರೆ,

ಆಗಳೇಳ್ತಂಡುದೋಲವಿಂ
ಮಾಗಿಯುಗಳ್ದೋಪರಂ ಬಳಿಕ್ಕದಟಿಂದೊಂ ।
ದಾಗಿರ್ಪಂತೆಸಗುತೆ ಭೂ
ಭಾಗಮನಾವರಿಸುತಧಿಕತರಹಿಮದಿಂದಂ ॥ ೧೬

ಆನೆಯಿದದ್ರಿಯಿದಮಲ
ಸ್ಥಾನೀಯುಮಿದಡವಿಯಿಂತಿದುರುತರಬಹಿರು ।
ದ್ಯಾನವಿದು ಬಯಲಿದೆಂಬೀ
ಜ್ಞಾನಂ ಸಲೆ ಪೋಯ್ತು ನೆರೆ ಮುಸುಂಕಿದ ಹಿಮದಿಂ ॥ ೧೭

ವ॥ ಮತ್ತಮಾಧರೆಯನೆಲ್ಲಮಂ ಮುಸುಂಕಿದ ಹಿಮದೊಳ್,

ಕಾಲತ್ರಯದ ವಿಭೇದಂ
ಕಾಲತ್ರಯದಲ್ಲಿ ನಿಮಿರ್ದ ಪರಮೇಶ್ವರನ ವ ।
ರಾಲಯಶಂಖರವದಿನಾ
ಕಾಲದೊಳುರೆ ಕಾಣಿಸಿರ್ಪುದೆಲ್ಲರ್ಗಾಗಳ್ ॥ ೧೮

1 ಹತ್ತಿರಯ್ದೆ.

ಹಿಮವೆಟ್ಟಿನುದರದಿಂದು
ದ್ಭವಿಸಿದ ಬಹುಪುತ್ರರೆಂಬವೋಲ್ಘನಹಿಮದಿಂ ।
ದವೆ ನೆರೆ ಮುಸುಂಕಿ ತೋರ್ಪ
ದ್ರಿವಿತತಿಯಾಕಾಲದಲ್ಲಿ ರಂಜಿಸುತಿರ್ಕುಂ ॥ ೧೮

ಘನಹಿಮಕಾಲದೊಳ್ ಶಿವನನೋಲಗಿಸಿರ್ಪ ಮರುಳ್ಗಳೆಯ್ದೆ ಧ
ರ್ಗನ ಕರದಲ್ಲಿ ಪಜ್ವಳಿಪ ವಹ್ನಿಯನಾಶ್ರಯಿಸಿರ್ದೊಡೆಯ್ದೆ ತ ।
ಣ್ಪನೆ ಸಲೆ ತೋರೆ ಮತ್ತಿದು ಕೃಶಾನುವೆಯಲ್ತುರೆ ಕೈಯೊಳಿಂತ ಕೋ
ಕನದಮಿದೆಂದು ಪೇಳ್ದು ನಗಿಸುತ್ತಸೆದಿರ್ಪುವು ಚಂದ್ರಮೌಳಿಯಾ ॥ ೧೯

ಜಳನಿಧಿಶಾಯಿಯಾಹಿಮಕೆ ಬಿತ್ತಿಸಿ ತಜ್ಜಲದಲ್ಲಿ ನಾಡೆಯು
ಜ್ಜ್ವಲಿಸುತ ಬಾಡಬಂಗೆ ಸಲೆ ಸಾರಲೊಡಂ ಬಳಿಕಂತದಾವಗಂ ।
ಕುಳಿರಳುರಿಂದೆ ತಣ್ಣನಿರೆ ವಿದ್ರುಮವೆಂದುರೆ ನಾಣ್ಚಿ ಪೋಪನಾ
ಚಳಿಯ ಪೊಡರ್ಪನೇನನುಸುರ್ವೆಂ ಮಿಗೆ ಬಂದ ತುಷಾರಕಾಲದೊಳ್ ॥ ೨೦

ಮಿತ್ರನ ಕರಂಗಳಂ ನಿಜ
ಮಿತ್ರಕರಂಗೆತ್ತು ಬಿರಿವುವಸಿತಾಬ್ಜಂಗಳ್ ।
ಮಿತ್ರಂ ಹಿಮಕಳ್ಕಿ ಮರು
ನ್ಮಿತ್ರನನಾಶ್ರಯಿಸಿ ತೋರ್ಪನಂದನವರತಂ ॥ ೨೧

ಕಂಬಳಧರನಾಗಿರ್ದುಂ
ತ್ರ್ಯಂಬಕನೆ ಹಿಮಾಂಗನಾಗಿ ತೋರ್ಪನಜಸ್ರಂ ।
ಕಂಬಳಧರನಾಗುತ್ತೆ ಜ
ನಂ ಬಳಿಕ ಹಿಮಾಂಗರಾದರಿಂತಿದು ಚಿತ್ರಂ ॥ ೨೨

ವ॥ ಮತ್ತಮಾಶಿಶಿರೋಪಹತಿಗಳ್ಕಿ,

ಹರಿ ಪೀತಾಂಬರನಾದಂ
ಸರಸೀಸಂಜಾತಸಂಭವಂ ತಾನಾಗಳ್ ।
ಸುರುಚಿರವೆನಿಪ ಸುವರ್ಣೋ
ದರನಾದಂ ಮಂಜಿನುರ್ಕನಾರ್ಬಣ್ಣಿಸುವರ್ ॥ ೨೩

ವ॥ ಇಂತಪ್ಪ ಶಿಶಿರದೊಳ್ ಗಿರಿಜಾಲಿಂಗನದಿಂದಲಂಕೃತಮಾದಾಸ್ಥಾಯಿಕೆ
ಗೇಳ್ತಂದೋಲಗಂಗೊಟ್ಟಿರ್ದನದೆಂತೆನೆ,

ಒದವಿದ ಕಾರಮುಗಿಲ್ಮಸು
ಕಿದ ಹಿಮಗಿರಿಯಂತೆ ನೋಡೆ ಕಣ್ಗೆಸೆದಿರ್ದಂ ।
ಮದಗಜಚರ್ಮಾಂಬರದಿಂ
ಮದನಮದಾರಾತಿಯಾಗಳತಿಮುದದಿಂದಂ ॥ ೨೪

ಕೋಡಿನ ಪೆರ್ಮೆಯಿಂ ಸಕಲದೇವಚಯಕ್ಕಳಲಿತ್ತ ರತ್ನಮಂ
ಸೂಡಿ ಕಪರ್ದದಲ್ಲಿರದೆ ಸೋಂಕಿದರಂ ಸಲೆ ಸಾವವೋಲ್ಮರು ।
ಳ್ಮಡುವ ರನ್ನವಾವುಗೆಗಳಗ್ರದೊಳಾವಗಮೆಯ್ದೆ ಪಾದವಂ
ನೀಡಿ ಮೃಗೇಂದ್ರವಿಷ್ಟರದೊಳಂದು ವಿರಾಜಿಸಿದಂ ಮಹೇಶ್ವರಂ ॥ ೨೫

ಪಾಡುವ ಕುಂಡಲಂ ಶ್ರುತಿಯುಗಂಗಳೊಳೊಪ್ಪಿರೆ ಬಿಟ್ಟದಿಟ್ಟಿಯಿಂ
ನೋಡುವ ಹಾರಮಂದುರದೊಳೊಪ್ಪಿರೆ 1 ಯೊಳ್ವರೆಯುಟ್ಟು ನಾಡೆಯೊ ।
ಲ್ದಾಡುವ ಕಂಕಣಂಗಳಿರದೊಪ್ಪಿ ಕರಂಗಳೊಳಾತ್ರಿಲೋಕಮಂ
ಬಾಡಿಸಿದಣ್ಪನಿಟ್ಟುಗಳದೊಳ್ಮೆರೆದಿರ್ದನುಮೇಶನಳ್ತಿಯಿಂ ॥ ೨೬

ಮಣಿಯೊಳ್ಳುತ್ತಪ್ರಕಾಶಂ ತುಹಿನಕರನೊಳೊಪ್ಪಿರ್ಪ ಜೊನ್ನಂ ಮಹಾದ್ಯೋ
ಮಣಿಯೊಳ್ತೇಜಂ ನವೀನಪ್ರಸವದೊಳುರುಸೌರಭ್ಯಮಿರ್ಪಂತೆ ದೇವಾ ।
ಗ್ರಣಿಯೊಳ್ಬೆಚ್ಚಿರ್ಪ ನಾನಾಭುವನಜನನಿ ಮಾದೇವಿ ರುದ್ರಾಣಿ ದಾಕ್ಷಾ
ಯಣಿಯತ್ಯಾನಂದದಿಂದಂ ಪರಶಿವನುರುವಾಮಾಂಕದೊಳ್ಕುಂಡಿಸಿರ್ದಳ್ ॥ ೨೭

ಪಣಿಗಣ್ಪಂಚಾನನಂ ತಾಳ್ದಿಳವೆರೆ ತಿಸುಳಂಪೊತ್ತು ಕೋಳ್ಪಾಂಡುರಾಂಗಂ
ಫಣಿರಾಟ್ಸೂತ್ರಂ ಕಪರ್ದಂ ತೊಳಪಸಿತಗಳಂ ಪೊರ್ದ ತೋಳ್ಪಾಯುಧುಕ್ಕಂ ।
ಕಣಮಾದಂ ರಂಜಿಸಲ್ಕಣ್ಗೊಳಿಸಿದರೊಲವಿಂದಂ ಲಸಚ್ಚಂದ್ರಚೂಡಾ
ಮಣಿಯಂಪ್ರಿದ್ವಂದ್ವಮಂ ಸಾರ್ದತಿವಿಭವದೊಳಾ ರುದ್ರಕೋಟಿಪ್ರತಾನಂ ೨೮

ಜವನಂ ಜಕ್ಕುಲಿಸುವ ಮಿ
ಳ್ತುವಿನೊಡಲಂ ಸೀಳ್ವ ಪೊಣರ್ದೊಡಾವಹದೊಳ್ಬೆ ।
ರವನಂ ಭಂಗಿಸುವದಟರ್
ಭವನಂ ಸೇರಿರ್ದರಲ್ಲನಂತಪ್ರಮಥರ್ ॥ ೨೯

ಸಿಡಿಲಂ ಸೂಡುವ ಮುಳಿದೊಡೆ
ಕಡಲೇಳಂ ಕುಡಿವ ಬಿಸಿಯ ಪಣಿಯಕ್ಕರವಂ ।

---

1 ಯೊಳ್ವರೆಯುಟ್ಟು.

ತೊಡೆವ ಪ್ರಮಹಾಪ್ರಮಥರ ಪೆ
ರ್ವಡೆಯಿರ್ದುದನಂತಕೋಟಿ ಶಿವನೋಲಗದೊಳ್ ॥ ೩೦

ಅರೆಬಸರ್ಾಲೋಕ್ಯದೆ ಮ
ತ್ತರೆಬಸರ್ಾಮೀಪ್ಯದಿಂದೆ ಸಾರೂಪ್ಯದಿನಂ ।
ತರೆಬಸರ್ಾಯುಜ್ಯದೊಳಂ
ದಿರುತಿರ್ದರನೇಕಗಣಮುಮೇಶನ ಸಭೆಯೊಳ್ ॥ ೩೧

ಕನಕಾಚಲಮೇ ಪಲವುಂ
ತನುವಂ ತಾಳ್ದೀಶನೋಲಗಕ್ಕೆಳ್ತಂದೊಂ ।
ದನುವೋ ಎಂದೆನೆ ಚತುರಾ
ನನರಿರ್ದರನಂತರಲ್ಲಿ ವಿಷ್ಣುವಿತಾನಂ ॥ ೩೨

ತ್ರ್ಯಂಬಕನೆಡದೊಳ್ನವಪೀ
ತಾಂಬರವಂ ಪೊದೆದು ಕಣ್ಗೆಸೆವ ಸಂಧ್ಯಾರಾ ।
ಗಂ ಬಳಸಿದ ಕಾರ್ಮುಗಿಲ್ಗಳೊ
ಎಂಬಂತೆಸೆದಿರ್ದುದಲ್ಲಿ ವಿಷ್ಣುವಿತಾನಂ ॥ ೩೩

ಕಣ್ಗೆಸೆಳ್ವಾಲವು ಮು
ಕ್ಕಣ್ಣನ ಸಭೆಯುಂ ಸಮಂತು ನೋಳ್ಪೊಡೆನುತೆ ಪಲ ।
ಗಣ್ಣಂ ತಾಳ್ತಂದದೆ ಮೆ
ಯ್ಗಣ್ಣಿಂದೊಪ್ಪಿರ್ದರಖಿಳದೇವೇಂದ್ರರ್ಕಳ್ ॥ ೩೪

ವ್ಯಾಸನಗಸ್ತ್ಯಂ ಭೃಗು ದೂ
ರ್ವಾಸಂ ಕಣ್ವಂ ದಧೀಚಿಮುನಿಪಾನಂದಂ ।
ಕೌಶಿಕಮುಖ್ಯಮುನೀಶ್ವರ
ರೀಶನ ಸಭೆಯಲ್ಲಿ ಕಣ್ಗೆವಂದರದಾಗಳ್ ॥ ೩೫

ಮನಸಿಜವೈರಿಯಂ ತಪದ ಬಲ್ಮೆಯಿನೊಲ್ದು ಮನಸ್ಸಿನಲ್ಲಿಯೊಂ
ದು ನಿಮಿಸಮಾತ್ರದೊಳ್ಮಿಗೆ ನಿರೀಕ್ಷಿಸಲಾರದೆ ತಾಪಸರ್ಕಳಂ ।
ದನುನಯದಿಂ ಸಭಾಸ್ಥಳದೊಳಿರ್ಪ ಮಹೇಶನನೀಕ್ಷಿಸುತ್ತೆ ತಾ
ವನಿಮಿಸರಾಗಿ ತೋರ್ದು ಸಲೆ ರಂಜಿಸುತಿರ್ದರಿದೇಂ ವಿಚಿತ್ರಮೋ ॥ ೩೬

ಪನ್ನೀರ್ವರ್ಬಿಸುಗ್ಗೈಯ
ಷನ್ಮೊಂಪೆನಿಸಿರ್ಪ ರುದ್ರರೆಣ್ದೆಸೆಯಾಣ್ಮರ್ ।
ಸನ್ನುತಷಟ್ಕೃತ್ತಿಕೆಯು
ಷನ್ನಗಭೂಷಣಸಭಾಂತರದೊಳೆಸೆದಿರ್ದರ್ ॥ ೩೭

ಪಂಚಸುರಧೇನುವಿಂದಂ
ಪಂಚಮಹಾವಾದ್ಯದಿಂದ ಪಂಚಾಮರತರು ।
ವಿಂ ಚತುರತೆವೆತ್ತಿರ್ದುದು
ಪಂಚಶರಾರಿಯ ಸಭಾಸದನಮೆಲ್ಲಾಗಳ್ ॥ ೩೮

ಸಪ್ತಮಾತೃಕೆಯರಿಂದಂ
ಸಪ್ತಸರಸ್ವತಿಗಳಿಂದೆ ಕಣ್ಗೆಸೆದಿರ್ಪರ್ ।
ಸಪ್ತೋನ್ನತಶೀರ್ಷರ್ನವ
ಸಪ್ತಾರ್ಚಿರ್ನಯನನೋಲಗಂ ರಂಜಿಸುಗುಂ ॥ ೩೯

ಅಷ್ಟಮಹಾನಾಗಂಗಳಿ
ನಷ್ಟವಸುಪ್ರಕರದಿಂದಮಷ್ಟೈಶ್ವರ್ಯಾದಿ ।
ನಷ್ಟಭೈರವರಿನೊಲವಿಂ
ದಷ್ಟಾಂಗಸಭಾನಿವಾಸಮೇನೊಪ್ಪಿದುದೋ ॥ ೪೦

ನವನಿಧಾನಂಗಳಿಂದಂ
ನವಗ್ರಹಪ್ರಕರದಿಂದೆ ಬಂದೊಪ್ಪಿಪರ್ ।
ನವವಿಧಿತನೂಜರಿಂದಂ
ಶಿವನಸಭಾಮಂಟಪಂ ಕರಂ ಸೊಗಯಿಸುಗುಂ ॥ ೪೧

ವಿವಿಧತೀರ್ಥಂಗಳಿಂದಂ
ವಿವಿಧನದನದೀವಿತಾನದಿಂದಂ ಸೊಗಯಿಪ ।
ವಿವಿಧದೇವಾಂಗನೆಯರಿಂ
ಭವನ ಸಭಾಸದ್ಮಮೊಪ್ಪುತಿರ್ದುದದಾಗಳ್ ॥ ೪೨

ಸಿಂಗರದಿಂಗಡರೊಲವಿಂ
ದಂಗಂಗೊಂಡುದೊ ಬಳಿಕ್ಕೆ ತಿಂಗಳ ಸಿರಿ ದೇ ।
ಹಂಗಮನಾಂತುದೊ ಎಂಬವೊ
ಲಂಗನೆಯರ್ಪಲಬರಿರ್ದರೀಶನ ಸಭೆಯೊಳ್ ॥ ೪೩

ಮಿನುಗುವ ಪೊರೆದಾಳ್ದಿಳಿಪಿಂ
ಚಿನ ಗುಂಡೋ ತೋರಸೋರ್ಮುಡಿಯನಾಂತೊಪ್ಪುವ ।
ಕನಕಲತಾಸಂದೋಹಮೊ
ಎನೆ ಕಣ್ಗೆಸೆದಿರ್ದುದಲ್ಲಿ ಸತಿಯರ ತಂಡಂ ॥ ೪೪

1 ಗರುಡರ ಗಂಧರ್ವರ ಕಿಂ
ಪುರುಷರ ಕಿನ್ನರರ ನಾಡೆ ವಿದ್ಯಾಧರರ ।
ಪ್ಸರರ ವಿತಾನಂ ಪರಮೇ
ಶ್ವರನೋಲಗದಲ್ಲಿ ಕಣ್ಗೆ ಸೊಗಸಿದುದಾಗಳ್ ॥ ೪೫

ಒಂದೆಡೆಯಲ್ಲಿಯೂರ್ವಶಿ ತಿಲೋತ್ತಮೆ ಕೇಳಿಪ ಪೆಕ್ಕಣಂಗಳಿಂ
ದೊಂದೆಡೆಯಲ್ಲಿ ತುಂಬುರರ ನಾರದನುನ್ನತಗೀತದಿಂದೆ ಮ ।
ತ್ತೊಂದೆಡೆಯಲ್ಲಿ ಶಂಕರನ ಲೀಲೆಯನೋದುವ ಪಾಠಕರ್ಕಳಿಂ
ದಿಂದುಕಲಾವತಂಸನ ಸಭಾಸದನಂ ಸೊಗಸಿರ್ದುದಾವಗಂ ॥ ೪೬

ಶಿವನಂ ನುತಿಯಿಸುತುಂ ಪರ
ಶಿವಪಥಮಂ ಸಾರ್ದು ಹರ್ಷದಿಂದೊಪ್ಪುವ ಸುರ ।
ಕವಿಗಮಕಿವಾದಿವಾಗ್ಮಿಗ
ಳ ವಿತಾನಂ ಕಣ್ಗೆಸೊಗಸನಿತ್ತುದದಾಗಳ್ ॥ ೪೭

ಪೊಗಳುತ್ತಿರ್ಪಿತಿಹಾಸಸಂತತಿಗಳಿಂದಾ ವೇದಮಂತ್ರಂಗಳಿಂ
ನೆಗಳ್ದಾನೇಕಪುರಾಣದಿಂ ಸ್ಮೃತಿಗಳಿಂದೊಪ್ಪಿರ್ಪ ತಂತ್ರಂಗಳಿಂ ।
ಬಗೆಗಿಂಪೀವ ಸಮಸ್ತಶಾಸ್ತ್ರತತಿಯಿಂ ಸ್ತೋತ್ರಪ್ರಘೋಷಂಗಳಿಂ
ಸೊಗಸಂಬೀರುತೆ ರಂಜಿಸಿತ್ತು ಮಹದಾಸ್ಥಾನಂ ಮಹಾದೇವನಾ ॥ ೪೮

ತಾವರೆಗೊಳಕೆಯ್ದ ಬಕಂ
ಕೈವಲ್ಯೋಪಾಯಕೃತ್ಯದೆಡೆಗೆುರುವಿಷ್ಣುಂ ।
ಆವರಿಸುವವೋಲ್ದಕ್ಷಂ
ಭಾವಜಹರನೋಲಗಕ್ಕೆ ಬಂದನದಾಗಳ್ ॥ ೪೯

ದಿವಿಜರೊರಲ್ದು ಕೊಟ್ಟ ಪೊಸಕಾಣ್ಕೆಯ ರಯ್ಯಮೆನಿಪ್ಪ ದಿವ್ಯವ
ಸ್ತುವನಿರದಾಂತು ಕೈಯರದೊಳೀಶ್ವರನಿರ್ದೆಡೆಗೊಲ್ದು ಬಂದು ತಾ ।

---

1 ಗರುಡಗಂಧರ್ವ ಕಿಂಪುರು
ಷರ ಕಿನ್ನರರ ನಾಡೆ ವಿದ್ಯಾಧರ ।

ನಿವರಿವರಿತ್ತರಂ ನವಿದು ಪೊನ್ನಿದು ಪಟ್ಟಣಿಂತಿದೆಂದವಂ
ವಿವರಿಸುತಿರ್ದನಲ್ಲಿ ಹರನೋಲಗದೊಳ್ಮಿಗೆ ನಂದಿಕೇಶ್ವರಂ ॥ ೫೦

ನೆಗಳ್ದಂಭೋರಾಶಿಯಂ ಮಂಥನಮನಿರದೆಮಾಳ್ಪಂದು ದೇವಾಸುರರ್ವಾ
ಸುಗಿ ತಾಂ ನೊಂದಲ್ಲಿಯುದ್ಗಾರಿಸಿದುರುವಿಷವೋರಂತೆ ಬೆಂಬತ್ತರಲ್ಲರ್ ।
1 ಸುಗಿದಂದಿರ್ದಂದವಂ ತಾನಭಿನಯಿಸಿ ಗಣವ್ರಾತಮಂ ಪೆರ್ಮೆಯಿಂದಂ
ನಗಿಸುತ್ತಿರ್ದಂ ಮಹಾದೇವನ ಘನಸಭೆಯೊಳ್ಸಂತತಂ ಭೃಂಗಿನಾಥಂ ॥ ೫೧

ಜವ ಜಾರಿಂದ್ರ ಕುನುಂಗು ಪೊಂಬಸಿರ ಮಾತಂಗುಟ್ಟದಿ 2 ವರ್ಣೇಣ್ರಮಾ
ಧವ ನೀನೋನ 3 ಸದಬ್ಜಬಂಧು ಪೆರಸಾರ್ ಸಪ್ತಾರ್ಚಿಯೇಳ್ತಂದು ಬಿ ।
ನ್ನವಿಸೋರಂತೆ ತೊಲಂಗು ಕೌಣಪ ಎನುತ್ತಾನಂದದಿಂದಂ ಸದಾ
ಶಿವನೊಡ್ಡೋಲಗದೊಳ್ಸಮಂತುಸಿರ್ದನಾ ಮಾಕಾಳನೋರೊರ್ವರಂ ॥ ೫೨

ಸಿರಿಯಿಂ ಪೆಂಪಿನಿನಾಚತುರ್ಗತಿಗಳಿಂ ಪೈಶಾಚಿಕಾನೀಕದಿಂ
ಪರಪಿಂ 4 ಪಾತ್ರದೆ ಗೋಮುಖಪ್ರಕರದಿಂದಂ ಸರ್ಪ.ರತ್ನಪ್ರಭೋ ।
ತ್ಕರದಿಂ ತೀರ್ಥನಿಯುಕ್ತದಿಂದುರುತರಶ್ರೀಪುಂಡರೀಕಂಗಳಿಂ
ಕರವೊಪ್ಪಿತ್ತು ಸಮುದ್ರದಂತೆ ಮಹದಾಸ್ಥಾನಂ ಪರಂಜ್ಯೋತಿಯಾ ॥ ೫೩

ಇಂತಪ್ಪೋಲಗದೊಂದು ಸಂಭ್ರಮವನಾ ಗಂಗಾಧರಂ ಶಂಕರಂ
ಶಾಂತಂ ಚಂದ್ರಕಲಾವತಂಸನಧವಂ ಕಾಪಾಲಿ ದಾಕ್ಷಾಯಣೀ ।
ಕಾಂತಂ ಕಂಡತಿತುಷ್ಟನಾಗಿ ಬಳಿಕಂ ನಂದೀಶನಂ ನೋಡಲಂ
5 ತಾತಂ ತಾಂ ಹರಚಿತ್ತವೃತ್ತಿಯರಿದೋರಂತೆಲ್ಲರಂ ನೋಡಿದಂ ॥ ೫೪

ವ॥ ಆಗಳ್ನಾನಾದೇವಸಮೂಹಂ ನಂದಿಕೇಶ್ವರನ ನಿರೀಕ್ಷಣಭಾವಮನರಿದು ವಿಶ್ವೇಶ್ವರಾಭಿಮುಖರಾಗಿ ಕರಕಮಲಂಗಳಂ ಮುಗಿದು ನಿಂದಿರೆ,

ನೋಡಿ ಕೆಲಂಬರಂ ಪಲಬರಂ ದರಹಾಸದಿನೊಲ್ದು ನಾಡೆ ಮಾ
ತಾಡಿ ಕೆಲಂಬರಂ ಕೆಲಬರಂ ಕೃಪೆಯುನ್ನತಿಯಿಂದೆ ಮತ್ತಿಯ ।
ಲ್ಲಾಡಿ ಕೆಲಂಬರಂ ಮಿಸುಪ ಕಪ್ಪುರದಂಬುಲವಿತ್ತು ಸಂತಸಂ
ಮಾಡೆ ಸಮಂತು ಸತ್ಕರಿಸಿ ಬೀಳ್ಕೊಡುತಿರ್ದನುಮೇಶನಳ್ತಿಯಿಂ ॥ ೫೫

ವ॥ ಆಪದದೊಳ್ಕಮಬ್ರಹ್ಮರೊಳ್ದಕ್ಷನೆನಿಸಿರ್ದ ದಕ್ಷಂ ಪರಮೇಶ್ವರಂ ತನ್ನಳಿಯನೆಂಬಹಂಕಾರಭಾವನೆಯಿಂದೆಲ್ಲರಂತೆ ದೂರದೊಳಿರ್ದು ಪೊರಮಟ್ಟು ಪೋಗದೆ

---

1 ಸುಗಿದಿರ್ದಂದಮಂ. 2 ಕರ್ಣೇಗಳೀರಮಾ. 3 ಸಜ್ಜಬಂದು.
4 ಪಾತ್ರಗೆ. 5 ತಾಂತಂ....ಹರಚಿತ್ತವೃತ್ತಿ.

ಮನ್ನಣೆವಡೆದ ಸಾಹಿತ್ಯಾಪ್ಯದ ಮಹಾಗಣಂಗಳನೊರಸಿಕೊಳ್ಳುತ್ತೇಳ್ತರೆ ನಂದೀಶ್ವರಂ ಜಡಿದು ಪಿಡಿದ ವೇತ್ರದಂಡದಿಂ ನಿಲಿಸುತ್ತಿರ್ಪಿನಂ ಸ್ಮೇರಾಸ್ಯನಾದೀಶ್ವರನಂ ಕಂಡು ಕುಪಿತಮಾನಸನಾಗಿ ಶಂಕರಂಗೆರಗದೆ ಶಿವದ್ವೇಷದಿಂದಾಸ್ಥಾನಮಂ ಪೊರಮಟ್ಟು ತರೆಮುಸುಂಕಿಟ್ಟು ಅವಿವೇಕಮಳವಟ್ಟು ಭಂಗಂಬಟ್ಟು ನಾಣ್ಗೆಟ್ಟು ನಿಜನಿಕೇತನಕ್ಕೇಳ್ತಂದು ತನ್ನಾಪ್ತಮಂತ್ರಿಯಂ ಬರಿಸಿ ತನಗಾದವಸ್ಥೆಯನೆಲ್ಲಮನರ್ದಿಪುತ್ತೀಶ್ವರಂಗೆ ಮುಳಿದಿರ್ದನೆಂತೆಂದೊಡೆ,

ಶರಧಿಗೆ ಬೆಂಜೆ ಕಲ್ಪತರುವಿಂಗಿಳೆಯೊಳ್ಪಿಚುಮಂದಮಾವಗಂ
ತರಣಿಗದಿಂಗಣಂ ಕನಕಶೈಲಕೆ ಮೇಣ್ಬರಮಾಣು 1 ಟಿಕ್ಕೆ ನಿ ।
ರ್ಜರಮಣಿಗೆಯ್ದೆ ಕೋಪಿಸುವವೋಲ್ಮುಳಿದಂ ಪರಮೇಶ್ವರಂಗೆ ಗಾಂ
ಪರ್ಗುರು ಮೇರೆ ಬರ್ಪ ತೆರನಂ ನೆರೆ ಬಲ್ಲನೆ ಮೂರ್ಖನಾರಯಲ್ ॥ ೫೬

ತನ್ನ ಸಭೆಯಲ್ಲಿ ನನ್ನಂ
ಬನ್ನಂಬಡಿಸಿದ ಕಪಾಲಿಯಂ ನಾನೀಗಳ್ ।
ಬನ್ನಂಬಡಿಸುವುಪಾಯಮ
ನಾನ್ನೆಗಳ್ವೆನೆನುತ್ತೆ ನುಡಿದು ಬಳಿಕಿಂತೆಂದಂ ॥ ೫೭

ಮಗಳಂ ನಾನಿತ್ತುದರಿಂ
ಜಗದಧಿಪತಿಯಾದನಾಮರುಳ್ಗಳ ಗುರು ಬೆ ।
ಳ್ನಗೆಯಿಂದೆನ್ನಯ ಲಜ್ಜೆಯ
ನುಗಿದಿರ್ದನದಕ್ಕೆ ತಕ್ಕುದಂ ನಾಂ ಮಾಳ್ಪೆಂ ॥ ೫೮

ಜನ್ನಮನೊಂದನಿಂದೊಡರಿಪೆಂ ಪದಪಿಂದೆ ಬಳಿಕ್ಕಮಾವಗಂ
ಜನ್ನಕಧೀಶನಾಗಿ ಮಿಗೆ ಮೊತ್ತಮೊದಲ್ಸತಿಯುಣ್ಬ ತನ್ನ ತು ।
ತ್ತಂ ನನಗಿಷ್ಟಮಾದವರ್ಗೆ ನಾನಿರದಿತ್ತು ಪೊದಳ್ದ ತೇಜಮಂ
ಮನ್ನಣೆಯಂ ಕಳಲ್ಚಿ ತಿರಿದುಣ್ಬವೊಲೀಗಳೆ ಮಾಳ್ಪೆನಾತನಂ ॥ ೫೯

ವಿನುತಾಹವನೀಯಾಗ್ನಿಯೊ
ಳನಿಸಂ ಪೊಸಪೊನ್ನಪಾತ್ರೆಯೊಳ್ವಿಧಿಯಿಂದಂ ।
ತನಗೆಂದೀವಾಹುತಿಯಂ
ದನುಜಹರಂಗೀವೆ ನಾನೆನುತ್ತವನುಸಿರ್ದಂ ॥ ೬೦

---

1 ಟಿಕ್ಕೆ.

ವ॥ ಇಂತು ನಿಜಮಂತ್ರಿಯೊಳುಸುರ್ದಿನಮಮಂ ಕರಂಗಳಂ ಮುಗಿವುತಾಳ್ದ ನೊಳಿಂತೆಂದಂ,

ಸಮಬಲರೊಳೆಸಗುವೀ ಕಾ
ರ್ಯಮನುಜಿಯ ಮಾಬಲರೊಳೆಯ್ದೆ ಮಾಳ್ಪನ್ನಂ ಕ।
ಜ್ಜಮದೊಳ್ಳಿತಕ್ಕುಮೇ 1 ಸಿಂ
ಗಮನಿರದೆ ಕೆಣಂಕಿ ಬಾಳ್ವ ನರಿಯಂತಕ್ಕುಂ । ೬೧

ದೇವಾ ಚಿತ್ತೈಸು ಮಹಾ
ದೇವನ ಸಭೆಯಲ್ಲಿ ನಂದಿವೇತ್ರಾಹತಿಯಿಂ ।
ದೇವಾಸುರರೊಳ್ಮುನ್ನಂ
ದಾವತಿಗೊಳದಿರ್ಪರಾರಲಂಪುಡುಗದರಾರ್ ॥ ೬೨

ಜಡಿಯೆ ಜನಾರ್ದನಪ್ರಕರಮೋಡುವುದಾಗ್ರಹದಿಂದೆ ದಂಡಮಂ
ಪಿಡಿದ ಪಿತಾಮಹಪ್ರಚಯಮೆಣ್ದೆಸೆಯಿಂ ಪುಗುವರ್ಬಳಿಕ್ಕಮಂ ।
ಪೊಡೆಯೆ ಪುರಂದರಪ್ರತತಿ ತಾಳ್ದಿದ ರತ್ನಕಿರೀಟವಾಗಳೊ
ಲ್ದುಗ್ಗಡಿಸುವುವಾಸಭಾಸ್ಥಳದೊಳಾವಗಮಾರಯೆ ನಂದಿಕೇಶ್ವರಂ ॥ ೬೩

ದೊರೆವೆತ್ತರಧನೆಯ ಮಹೇ
ಶ್ವರನೆನಿಸ ವ ನಂದಿವೇತ್ರಹತಿ ಮುನ್ನಂ ಸಾ ।
ಸಿರಯಾಗಮನೆಸಗಿದ ಮಾ
ಪುರುಷಂಗಲ್ಲದೆ ಬಳಿಕ್ಕೆ ಸಮನಿಸದಾರ್ಗಂ ॥ ೬೪

ವ॥ ಇಂತೆಂದುಸಿರ್ವ ಮಂತ್ರಿಗೆ ಮುಳಿದವನಂ ಜರೆದು ಝೆಂಕಿಸುತಿರ್ಪಿನಂ ದಾಕ್ಷಾಯಣಿಯ ಮಾತೆಯಪ್ಪ ದಕ್ಷಪತ್ನಿ ತನ್ನಪತಿಯೊಳುಸಿರ್ದಳೆಂತೆಂದೊಡೆ,

ಇಚ್ಛೆಗಳನುಗಿದೊಡೀಗಳ್
ಪೆಚ್ಚುಟಿ ನಿನಗಪ್ಪುದೆಂದು ನನ್ನಿಯನುಸಿರ್ದಾ ।
ನಚ್ಚಿನ ಮಂತ್ರೀಶ್ವರನಂ
ಪುಚ್ಚುಂಗೊಳಿಸುವುದಿದಾವ ಮತವೆಂದುಸಿರ್ದಳ್ ॥ ೬೫

ಮೃಗರೂಪಮಾಂತು ತನ್ನಯ
ಮಗಳಂ ನೆರೆದಜನನೊಂದೆ ಶರದಿಂದಿಕ್ಕಿದ ।

1 ಸೊಗಮನಿರಡ.

ಮೃಗಧರಧರನಂ ನೋಡದೆ
ಪಗೆಗೊಳ್ವರೆ ಮರುಳರೆರೆಯ ಕೇಳೆಂದುಸಿರ್ದರ್ಳ್ ॥ ೭೬.

ಚೆಲ್ವಾಪ್ತ್ರಿವಿಕ್ರಮನ ನಿ
ಟ್ಟೆಲ್ವಂ ಕಂಕಾಳಮಾಗಿ ಧರಿಸಿರ್ದಾನೆದೊ ।
ಪಲ್ವೊದೆದವನೀಜಗಮಂ
ಕೊಲ್ವವನೊಳ್ಕಸ್ತಿಯೇ ಶಿವಾ ಎಂದುಸಿರ್ದರ್ಳ್ ॥ ೭೭

ಮೂಲೋಕಮನಲರಂಬಿಂ
ಸೋಲಿಸಿದಂಗಜನಿದಿರ್ಚಿವರೆ ಪಣೆಗಣ್ಣಿಂ ।
ದಾಲೋಕಿಸುತುರುಪಿದನವ
ನಾಲೋಕಿಸದುಮ್ಮಳಿವರೆ 1 ಬಾಳ್ವನರರ್ಗಳ್ ॥ ೭೮

ದಂಡಧರಂ ಮುನ್ನಂ ಮಾ
ರ್ಕಂಡೇಯನನುಗ್ರಕೋಪದಿಂದಿರದೆ ಮರು ।
ಳ್ಗೊಂಡರೆಯುಟ್ಟಿದ ಕತದಿಂ
ದಂಡನಗೊಳಗಾಗನೇ ತ್ರಿಲೋಕೇಶ್ವರನಾ ॥ ೭೯

ಹರಿವಿಧಿಗಳನೆರ್ದೆಗೆಡಿಸಿದ
ಪಿರಿದಿಂದಂ ತಿಸುಳಿಯೆಡೆಗೆ ನಡೆತಂದಂಥಾ ।
ಸುರನದಟಾಗಳ್ಪರಮೇ
ಶ್ವರನಡಿಯಿಂದಳ್ಗಿ ಪೋದುದಂ ನೀನರಿಯಾ ॥ ೭೦

ಎಲೆ ಮೂರ್ಖದಕ್ಷ ಮುನ್ನಂ
ಜಲಂಧರಂ ಭುವನವೆಲ್ಲವಂ ಸದೆದಧವನ ।
ನಿಲಯಕ್ಕೇಳ್ತಂದಾಗ
ಳ್ತಲೆಯಂ ಪೋಗಾಡಿಕೊಂಡುದಂ ನೀನರಿಯಾ ॥ ೭೧

ಮುಪ್ಪೊಳಲೆರೆಯರ್ಸೊರ್ಕಿಂ
ಮುಪ್ಪುಂದಪ್ಪುಗರನಳಲಸುತ್ತಿರ್ಪನ್ನಂ ।
ದರ್ಪಂಗೆಡಿಸನೆಯುವರಂ
ಕಪ್ಪುರವಣ್ಣಂ ಬಳಿಕ್ಕದಂ ನೀನರಿಯಾ ॥ ೭೨

1 ಬಾಳ್ವರ್ಗಳ್.

ಹಾಳಾಹಳಮಂ ನುಂಗು
ತ್ತೀಳೆರಡನಿಸಿರ್ಪ ಜಗವನುಜಿಜ ರಕ್ಷಿಸಿದ ಕೃ ।
ಪಾಳುವಿನೊಳ್ತ್ರೋಟಿಯೆ ಬ
ಲ್ಲಾಳಿದರೊಪ್ಪುವರೆ ಕೇಳೆನುತ್ತವಳುಸಿರ್ದಳ್ ॥ ೭೩

ಎಲ್ಲಾ ದೇವರ್ಕಳ್ಗೋ
ರ್ವಲ್ಲ ಸತೀವಲ್ಲಭಂ ಬಳಿಕ್ಕಂದಿಕ್ಕಿದ ।
ಪುಲ್ಲೊಂದನೆತ್ತಲಾರದೆ
ಪುಲ್ಲಿಂ ಲಘುವಾದರವರ್ಗಳೆಂಬುದನರಿಯಾ ॥ ೭೪

ಉದಿಸಿದೆಳೆವೆರೆಯ ಹಿಮದಿಂ
ಮುದವಳಿದು ಮುರುಂಟಿದನಿಕರಮುಸೀಕ್ಷಿಸು ।
ತದನುಜಿಜ ತಾಳ್ದವರ್ಗಳನೋ
ವಿದ ಶಿವನೊಳ್ಮಚ್ಚರವೆ ಮಹಾದೇವೆಂದಳ್ ॥ ೭೫

ತಾರಕನದಟಂ ತನ್ನ ಕು
ಮಾರಕನಂ ನಿಲಿಸಿ ದೇವನಾರಿಯುರಾಶ್ರುತಿ ।
ಪೂರಮನಂದುಳಪಿದ ಜಿತ
ಮಾರನೊಳೇಂ ದ್ವೇಷವೇ ಶಿವಾಯೆನುತುಸಿರ್ದಳ್ ॥ ೭೬

ವೇದಂಗಳರಸಿ ಕಾಣದ
ಮಾದೇವರ ಮಾನಸಕ್ಕಗೋಚರನೆನಿಸಿ ।
ಪಾದಿಮಧ್ಯಾಂತಶೂನ್ಯಮ
ಹಾದೇವನೊಳಂಕವೇ ಶಿವಾಯೆಂದುಸಿರ್ದಳ್ ೭೭

ದಾರುವನಾಶ್ರಮಸ್ಥಿತಮುನಿಪ್ರಕರಂ ಮುನಿಸಿಂದವೇಳ್ದಪ
ಸ್ಮಾರಮಹಿಪ್ರತಾನಮನಲಂಪುಲಿ ನಾಡೆ ಮರುಳ್ಗಳಂ ವಲಂ ।
ಕ್ರೂರಮೆನಿಪ್ಪವಂ ಸೃಜಿಸಿ ಶಂಕರನಂ ಕೊಲಲಟ್ಟಲಾತನಂ
ಸೇರೆಯಲಂಕೃತಂಗಳೆನಿಸಿರ್ದುವು ಪೋರುವರಾರ್ಪಿನಾಕಿಯೊಳ್ ॥ ೭೮

ವ॥ ಇಂತೆಂದು ಬುದ್ಧಿವೇಳ್ದು ಮಹಾಮಹಿಮನಪ್ಪ ಶಿವನೊಳ್ ದ್ವೇಷಮನುಚಿತಮೆಂದುಸಿರ್ದಮಾತ್ಯನಂ ನಿರ್ದಾಟಿಸುವುದಕೃತ್ಯವೆಂದ ಮಾನಿನಿಯ ನುಡಿಯುಂ ಕೇಳದೆ ನೆಲನಂ ಪೊಯ್ದು ಸಾಯಲ್ಪಲ್ಲರ ದೇವಂ ಗೌಳಿವಾತಿಂದವಳಂ

ಜರೆದು ಝಂಕಿಸಿ ನಿಲಿಸಿಯಾಕ್ಷಣದೊಳಧ್ವರಸಂಭಾರವೆಲ್ಲವಂ ತರಿಸಿ ಯಾಗ ಕುಂಡಮಂ ತೆಗೆಯಿಸಿ ಋತ್ವಿಜರಂ ಬರಿಸಿ ವಿಷ್ಣುಪ್ರಮುಖದೇವರ್ಕಳಂ ಕರೆಯಿಸಿ ಜನ್ನಮನೊಡರ್ಚುತ್ತಿರ್ಪಿನಮಿತ್ತಲಾಜಗದೀಶ್ವರನ ರಾಣಿಯಾದ ಸತೀದೇವಿಯಾ ವೃತ್ತಾಂತಮನರಿದು ದಕ್ಷನ ದುರ್ಬುದ್ಧಿಯಂ ನಿಲಿಸಿ ಬರ್ಪೆನೆಂದೀಶ್ವರಂಗೆ ಬಿನ್ನ ವಿಸಲೊಡನಾತನಿಂತೆಂದಂ,

ಮದಮುಂಟುನ್ಮಾದಜನಕೆ
ಮದಮುಂಟುಗ್ರಗ್ರಹಂಗಳುಚಿ ಸೋಂಕಿದವರ್ಗೆ ।
ಮದಮುಂಟು ಮಹಾರೋಗಿಗೆ
ಮದಮಿಲ್ಲಂ ಮರುಳನೆನಿಪ ಮೂರ್ಖಂಗೆಂದಂ ॥ ೭೯

ಕೇಡಡಸಿದಪೊಳ್ತಾರ್ಗಂ
ಕೂಡದು ಸನ್ಮತಿ ಸುಬುದ್ಧಿವೇಳ್ದರೊಡನೆ ಮಾ ।
ತಾಡರವರ್ ನೀಂ ತಳರ
ಲ್ವೇಡ ಗಡಾ ಎಂದು ನುಡಿದನಾಭೂತೇಶಂ ॥ ೮೦

ವ॥ ಇಂತೀಶ್ವರಂ ನಿರವಿಸಲದಂ ಸತೀದೇವಿ ಪರಿಭಾವಿಸದೆ ದಕ್ಷನಡೆಗೇ ಳ್ತಂದು ನಿರವಿಸಿದಳದೆಂತೆಂದೊಡೆ,

ಜನ್ನಮನೊಡರ್ಚುವವರ್ಗಳ್
ಜನ್ನಕಧೀಶ್ವರನೆನಿಪ್ಪ ಪರಮೇಶ್ವರನಂ ।
ಮುನ್ನಂ ಪೂಜಿಸಿದಲ್ಲದೆ
ಜನ್ನಮನುದ್ಯೋಗಿಸರ್ಬಳಿಕ್ಕದನರಿಯಾ ॥ ೮೧

ಶಿವನಿಲ್ಲದ ಯಾಗಂ ತಾಂ
1 ಶಿವೇತರಮದಾಗಿ ತೋರ್ಪುದೈಯದರಿಂದಂ ।
ಶಿವನಂ ಪೂಜಿಸುವರ್ಬ
ಲ್ಲವರ್ಗಳ್ಮಿಗೆ ಜನ್ನಮೊಗದೊಳೆಂದುಮೆಯುಸಿರ್ದಳ್ ॥ ೮೨

ವ॥ ಇಂತುಸಿರ್ದಳೆ ದಕ್ಷಾ ಪರಮೇಶ್ವರನಂ ಬರಿಸಿಯಾತಂಗಗ್ರಪೂಜೆಯು ನೊಡರ್ಚೆಂದ ಮಹಾದೇವಿಯ ಮಾತಂ ಮನ್ನಿಸದೆ ಕುಪಿತನಾಗಿ ತನ್ನಳಿಯಿಂಗನು ಕೂಲಮಾದುಕ್ತಿಗಳನಾಗಳ್ ಗಳಪುತ್ತಿರ್ದನದೆಂತೆಂದೊಡೆ,

1 ಶಿವೇತರಮಾಗಿ,

ಕುಲಹೀನಂ ಬಳಿಕಾತನ
ನೆರೆಗಾಣೆಂ ಗುಣವಿದೂರನಾಗಿರ್ಪಂ ಮು ।
ದ್ವಿಲಸತ್ಕ್ರತುಗಾತನನಾಂ
ಬಲಗೊಂಬನೆ ಮಗಳೆ ಕೇಳೆನುತ್ತಿಂದೆಂದಂ ॥ ೮೩

ಸೊಡಬಲಿಯೊಳಾವಗಂ ಸರೆ
ಗುಡಿಗಟ್ಟಿರ್ಪವನನುಂತೆ ಬೊಮ್ಮನ ತಲೆಯಂ ।
ಪೊಡೆದನನಗ್ಗಳಧರ್ಮಂ
ಗೆಡಿಸಿದನಂ ಮನ್ನಿಸುವೊಡೆ ನಾನೇಂ ಮರುಳೇ ॥ ೮೪

ಇನ್ನಾಂ ಮನ್ನಿಪೆನೆಂದೊಡೆ
ತಾನ್ನೆರೆ ಸತ್ತುದೆ ಸಮಸ್ತದೇವಸಮೂಹಂ ।
ನಿನ್ನಯ ಗಂಡನ ನಾನಿ
ರ್ಪನ್ನಂ ಮನ್ನಿಸೆನೆನುತ್ತೆ ನುಡಿದಂ ಮೂರ್ಖಂ ॥ ೮೫

ವ॥ ಇಂತೀಶ್ವರನಂ ನಿಂದೆಗೆಯ್ದು ದುರಾತ್ಮಂಗೆ ಮುಳಿದವನೊಳ್ಮಾದೇವಿ ಯಿಂತೆಂದಳ್,

ದೇವೇಂದ್ರಂ ವಾರಿಜಾತೋದ್ಭವಹರಿಮೊದಲಾಗೆಯ್ದೆ ರಂಜಿಪ್ಪ ನಾನಾ
ದೇವವ್ರಾತಂ ಮಹಾತಾಪಸಜನಮಸುರರ್ನಾಗಲೋಕಾಧಿನಾಥರ್ ।
ತೀವಿರ್ಪಾಶಕ್ತಿಯಿಂದರ್ಚಿಪ ಬಹುಭುವನಾರಾಧ್ಯವಿಶ್ವೇಶ್ವರಂ ಮಾ
ದೇವಂ ನಿನ್ನಿಂದೆ 1 ಪೂಜ್ಯತ್ವವ ಪಡೆದಪನೇ ದುಷ್ಟ ಹೋ ಕೆಟ್ಟೆಯೆಂದಳ್ ॥ ೮೬

ಆವನ ಕಣ್ಗಳೊಪ್ಪುವ ಜಗಕ್ಕವು ಕಣ್ಗಳವಾಗಿ ತೋರ್ಪುವಂ
ತಾವನ ಕಾಯವೋ ಸಕಲಲೋಕಕೆ ಕಾಯಮದಾದುದೊಳ್ಪಿನಿಂ ।
ದಾವನ ಬಾಣಮಾವಿವಿಧವಿಷ್ಟಪಮಂ 2 ಸಲೆಯೋವುತಿರ್ಪುದಾ
ದೇವಮಹೇಶನಂಘ್ರಿಗಳನರ್ಚಿಸದಿರ್ಪವರಾರ್ಧರಿತ್ರಿಯೊಳ್ ॥ ೮೭

ಪರಮೇಶಂ ಮುಡಿದಿರ್ದ ಪೂವಿದು ಬಳಿಕ್ಕಂತಾಸುಧಾಸೂತಿಯಾ
ಕರದಿಂ ಪೊಣ್ಮಿದ ಧಾನ್ಯಸಂತತಿಯದೆಲ್ಲಂ ನೋಳ್ಪಿನಂ ನಾಡೆ ಶಂ ।
ಕರಶೇಷಂ ಸಲೆ ವೀತಿಹೋತ್ರಮುಖದಿಂದಾ ಧಾನ್ಯಮಂ ಕೊಳ್ವ ತ
ತ್ಸುರರೆಲ್ಲಂ ಪರಮಪ್ರಸಾದಿಗಳಲಾ ನೋಡಾ ಮಹಾದೇವನಾ ॥ ೮೮

1 ಪೂಜ್ಯತ್ವತೆವಡೆದಪನೇ. 2 ಸಲೆಯಾವುತಿರ್ಪುದಾ.

ಪುಟ್ಟಿದುದೀ ಜಗಂ ಶಿವನ ವಿಗ್ರಹದಿಂದೆ ವಿಚಾರಿಸಲ್ಕೆ ಮೇ
ಣ್ನಿಟ್ಟಿಪುದೀ ಜಗಂ ಭವನ ಕಣ್ಗಳಿನಾರಯೆ ರೂಢಿಯಿಂದೊಡಂ ।
ಬಟ್ಟುಣದಿರ್ಪುದಂತವನ ಶೇಷಮನಂತು ಸಮಸ್ತರಿಂತಿದಂ
ನೆಟ್ಟನೆ ಕಂಡು ಕಾಣದಿರುತಿರ್ಪುದು ಕಲ್ಮಷದೇಳ್ಗೆಯಲ್ಲವೇ ॥ ೮೯

ಲೋಕಬಾಂಧವನ ಪೆಂಪಂ
ಘೂಕನದೇನರಿವುದೇ ಸಮುದ್ರದ ಗುಣ್ಪಂ ।
ಭೇಕಂ ಕಾಣ್ಬುದೆ ನೆರೆ ಚಾ
ರ್ವಾಕಂ ಬಲ್ಲನೆ ಮಹೇಶನಾ ಮಹಿಮೆಗಳಂ ॥ ೯೦

ಕುರಿಯೆಂಬೆನೆವೊಂಬತ್ತರೊ
ಳುರುವಂ ನೀಂ ನಿನ್ನ ಬುದ್ಧಿಯಿಂ ನೀನೀಗ ।
ಳ್ಕುರಿಯಾದ್ಯೆ ಮುಂದಕ್ಕರೆ
ಗುರಿಯಾದಪೆಯೆಂದಳಾ ಭವಾನಿಯದಾಗಳ್ ॥ ೯೧

ಗುರುತಲ್ಪಗಂಗೆ ಪರಮೇ
ಶ್ವರನಂ ನಿಂದಿಸಿದವಂಗೆ ವಿದ್ಯಾಚೋರಂ ।
ಗುರುನಿಗಮದೂಷಕಂಗೇ
ಳ್ತರದುಳಿಯದಪಾಯಮಾಕ್ಷಣದೊಳೆಂದುಸಿರ್ದಳ್ ॥ ೯೨

ಹರನಿಂದೆಗೆಯ್ದ ದೋಷೋ
ತ್ಕರದಿಂದಂ ನಿನ್ನ ಬಂಚವೆಲ್ಲಂ ನೆಲದೊ ।
ಳ್ನೆರೆಗುಂ ನಿನ್ನಧ್ವರದ್ಯೆ
ಸಿರಿ ಕಿಡುಗುಂ ನಿನ್ನ ಕಾಯಮಿಾಗಳೆ ಬೀಳ್ಗುಂ ॥ ೯೩

ಇನ್ನೊಂದು ಜನ್ಮದೊಳ್ ಹರ
ನಂ ನಿಂದಿಪುದೊಂದು ಯಜ್ಞಮಂ ಮಾಳ್ಪೆ ಬಳಿ ।
ಕ್ಕಂ ನಿನಗಪ್ಪುದಪಾಯಂ
ನನ್ನಿಯಿದೆಂದುಸಿರ್ದು ತನುವನಳಿದಳದಾಗಳ್ ॥ ೯೪

ವ॥ ಇಂತಾ ಸತೀದೇವಿ ದಕ್ಷಸಂಬಧದೇಹತ್ಯಾಗವಂ ಮಾಡೆ ಜನ್ನದಗ್ನಿ ಮುಸುಳ್ದುದು ಮಂತ್ರಂಗಳ್ಮಂದಮಾದುವು ಜನ್ನದ ಜನಂ ಜಗುಳ್ದುದು ಬಳಿಕ್ಕ ತ್ತಲಾ ಸತೀದೇವಿ,

ಗಿರಿರಾಜನ ಮೇನೆಯು ನಿ
ಷ್ಕುರತಪಕುಜು ಮೆಚ್ಚಿಯವರ್ಗೆ ಮಗಳಾಗಿ ಮಹೇ ।
1 ಶ್ವರಕರವಿಡಿದಾ ಗುಹಗಣ
ವರರಂ ಪೆತ್ತಿರ್ದಳಧಿಕತರಸಂತಸದಿಂ ॥ ೯೫

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಳಾಗ್ರದೊಳ್ ॥ ೯೬

ಮುಳಿಯಲಗೇಂದ್ರಜಾತೆ ತಲೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಘ್ರಿಗೊಳ್ಪಿನಿಂ ।
2 ತುಳಿಲನೊಡರ್ಚಲಾಲ್ಪು ಪೊಗದೊಳ್ಮೊಗವಿಕ್ಕುತೆ ಸಂತಪಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಪೀಜಗಮಂ ಗುರುವಿಶ್ವವಲ್ಲಭಾ ॥ ೯೭

ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬರೆದ ರಜಮ 3 ನಿರದೆ ಸವಿದು ತಣಿದು ತನ್ನ ಲೀಲೆಯಿಂ ।
ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮಿಾಗಭೀಷ್ಟಮಂ ॥ ೯೮

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತಪಾದ
ಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪಾದಪಂಕೇಜಮಕರಂದಮಧು
ಕರಾಯಮಾಣ ಶ್ರೀಕಂಠವಂಶಾರ್ಣವಪೂರ್ಣಚಂದ್ರನೆನಿಪ ಸತ್ಕ
ವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ ಶ್ರೀವೀರ
ಭದ್ರವಿಜಯಮಹಾಪ್ರಬಂಧದೊಳ್ ಸೂರ್ಯೋದಯ
ಹಿಮಶಿಶಿರವರ್ಣನಂ ಪರಮೇಶ್ವರಾಸ್ಥಾನ
ವರ್ಣನಂ ದಕ್ಷಶಾಪಕಥನಂ
ಸಪ್ತಮಾಶ್ವಾಸಂ.
ಸಂಪೂರ್ಣಂ

---

1 ಶ್ವರನಂ ಕೈವಿಡಿದು ಗುಹಗಣ. 2 ತುಳಿಲನೊಡರ್ಚದೊಲ್ದು. 3 ನುರದೆ.

# ಅಷ್ಟಮಾಶ್ವಾಸಂ

ಗಿರಿಜಾಲಿಂಗನದಿನಿದಿಂ
ಪೊರೆಯೇರಿ ಪೊದಳ್ದು ನಾಡೆ ವಿಸ್ತರದೆ ಜಗ ।
ದ್ಭರಿತಾಂಗನಾದ ವಿಶ್ವೇ
ಶ್ವರನೆಮಗೀಗಿಷ್ಟಸಿದ್ಧಿಯಂ ಸಂತಸದಿಂ ॥ ೧

ವ॥ ಇಂತು ಕಾಶೀಪಟ್ಟಣದೊಳ್ವಿಶ್ವನಾಥಂ ಪರ್ವತರಾಜಕುಮಾರಿಯೊಳನೆ ಕವಿನೋದದಿಂದಿರ್ಪಿನಮಿತ್ತಲಾ ದಕ್ಷಂ

ಪ್ರಾಚೀನಬರ್ಹಿಯಾತ್ಮಜ
ನಾಚತುರಂ ತಾಂ ಪ್ರಚೇತಸಂ ತತ್ಪುತ್ರಂ ।
ವಾಚಾಲಂ ಪುಟ್ಟಿರ್ದಂ
ಪ್ರಾಚೇತಸದಕ್ಷನೆಂಬ ಪೆಸರಿಂದಾಗಳ್ ॥ ೨

ಅಳಿಯಂದಿರಿವನ ಪೆಣ್ಮ
ಕ್ಕಳ ತಂಡ ಮರುಳ್ದು ವಸುಧೆಯೊಳ್ಮಿಗೆ ಮಾನವ ।
ರ್ಗಳ ಬಸಿರೊಳ್ಪುಟ್ಟಿದರಾ
ಗಳೆ ಶಿವನಂ ನಿಂದಿಪರ್ಗೆ ಪುಟ್ಟಳಿದಪುದೆ ॥ ೩

ವ॥ ಇಂತಿವರ್ಗಳ್ನರಜನ್ಮದೊಳ್ಪುಟ್ಟಿರ್ದಪುದನರಿದಿವಂದಿರಂ ಶಿಕ್ಷಿಸಲ್ಸಮರ್ಥನಪ್ಪೊರ್ವ ಕುಮಾರನಂ ಪಡೆಯಲ್ವೇಳ್ಕೆಂದು ಚಿಂತೆಯಂ ತಳೆದಿರ್ದ ದೇವಿಯುರ ಮೊಗಮಂ ಪರಮೇಶ್ವರಂ ನೋಡಿ,

ವನಿತೆ ನಿನ್ನಾನನಂ ಪಗ
ಲಿನ ಚಂದಿರನಂ ಪೊದಳ್ದ ಮೇಘಾಮದನ ।
ಳಿನಮಂ ಪೋಲ್ತಿರ್ದಪುದಿದ
ನೆನಗರುಪೆಂದಭವನಳ್ಕರಿಂದಂ ನುಡಿದಂ ॥ ೪

ನುಡಿನುಡಿ ಮನದೀಪ್ಸಿತಮಂ
ಕುಡುವೆಂ ನಿನ್ನಾಣೆ ಬಹಳಖೇದೋತ್ಕರಮಂ ।

1 ಬಿಡುಬಿಡುಯೆಂದಾ ಪಶುಪತಿ
ಯೊಡನೆ ಮಹಾದೇವಿ ಸಂತಸದೊಳಿಂತೆಂದಳ್ ‖ ೫

ಮುನ್ನಂ ನಿನ್ನಂ ನಿಂದಿಸಿ
ದನ್ನರ್ನರಜನ್ಮದಲ್ಲಿ ಪುಟ್ಟಿರ್ದಪರವ ।
ರನ್ನೆರೆ ಭಂಗಿಸುವೋರ್ವ ಸು
ತನ್ನನಗಿರಿದಾಗವೇಳ್ಕೆನುತ್ತಂ ನುಡಿದಳ್ ‖ ೬

ಗೆಲ್ವವನಂ ಸಮಸ್ತರಣಮಂ ಸಲೆ ಪೆರ್ಚಿದ ಶತ್ರುವರ್ಗಮಂ
ಕೊಲ್ವವನಂ ಜಯಾಂಗನೆಯ 2 ಮೆಚ್ಚಿನ ಭೂರಿರಹಸ್ಯದೇಳ್ಗೆಯುಂ ।
ಕೊಲ್ವವನಂ 3 ಸಮಂತು ಬಳಿಕೆನ್ನಮನೋರಥವೀವ ಪುತ್ರನಂ
ಚೆಲ್ವೆಸೆದಿರ್ಪನಂ ಬಯಸುತಿರ್ದಪುದೆನ್ನಮನಂ ಮಹೇಶ್ವರಾ ‖ ೭

ಧೀರನನುಗ್ರನಂ ರಿಪುಭಯಂಕರನಂ ಮಲೆತರ್ಗದಾವಗಂ
ಮಾರಿಯೆನಿಪ್ಪನಂ ತೊಡರ್ದೊಡಾಹವದೊಳ್ಕಡೆಗಾಲದಂತಕಂ ।
ಗೋರಗೆಯಪ್ಪನಂ ಪಗೆಗಳಂ ಸದೆದಿಕ್ಕುವ ಚೆನ್ನಪೊಂಗನಂ
ಶೂರನೆನಿಪ್ಪ ಪುತ್ರನನೊರಲ್ದೆನಗೀವುದು ಚಂದ್ರಶೇಖರಾ ‖ ೮

ವ‖ ಇಂತುಸಿರ್ದ ಭವಾನಿಯ ಮಾತಂ ಕೇಳ್ದಂತೆಯಕ್ಕುಮೆನುತ್ತೊರ್ವ ಕುಮಾರನಂ ಸೃಜಿಸಿ ತೋರ್ದನಾತನಿರವೆಂತಿರ್ದುದೆನೆ,

ಸಾಸಿರಮೊಗಂಗಳಿಂದಿ
ರ್ಛಾಸಿರಕಾಲಿಂದೆ ನೆಗಳ್ದ ನಿಡಿದೋಳ್ಗಳ್ನೊ ।
ರ್ಛಾಸಿರದಿಂ ಕಣ್ಗಳ್ನೊ
ರ್ಛಾಸಿರದಿಂದೊಪ್ಪಿ ತೋರ್ದುದಾ ಶಿಶುರತ್ನಂ ‖ ೯

ಎಳೆವೆರೆಯಂ ಪೊದಳ್ದ ಪೊಸಮಿಂಚಿನಗೊಂಚಲನಾಂತು ದೇಹಮಂ
ತಳೆದು ಧರಾತಳಕ್ಕಿಳಿದ ಕಾರ್ಮುಗಿಲೆಂಬಿನೆಗಂ ಸಮಂತು ಕ ।
ಣ್ಗೊಳಿಸುವ ದಾಡೆಯಿಂ ಪೊಳೆವ ಕೆಂಜಡೆಯಿಂ ಹರಿನೀಲಕಾಂತಿಯಿಂ
ತೊಳಗುವ ದಿವ್ಯಮೂರ್ತಿಯಳವಟ್ಟೆಸೆದಿರ್ದುದು ವೀರಭದ್ರನಾ ‖ ೧೦

1 ಬಿಡುಬಿಡೆಂದುಸಿರ್ದಪಶುಪತಿ. 2 ಮೆಚ್ಚಿನ....ರಹಸ್ಯದೇಳ್ಗೆಯಂ.
3 (ಸಮಸ್ತರಣಮಂತು) ಬಳಿಕೆನ್ನಮನೋರಥವೀವಪುತ್ರನಂ,

ವೀರಂ ಪುಟ್ಟಿದ ಪದದೊ
ಳ್ವೀರತೆ ಪುಟ್ಟಿತ್ತು ಸರ್ವಗಣಸಂದೋಹಕೆ ।
ಗೌರಿಯ ಸಂತೋಕಷುಜಂ
ಬೇರೂರಿ ತಳಿರ್ತು ಪೂತು ಫಲಿಸಿತ್ತಾಗಳ್ ॥ ೧೧

ಭದ್ರಂ ಸಂಜನಿಸಲೊಡಂ
ಭದ್ರಮದಾದತ್ತು ಸಜ್ಜನಗರ್ಗಾದಂ ಗಿರಿ ।
ಶದ್ರೋಹಿನಿಕರಕಾಗಳ
ಭದ್ರಂ ಸಂಜನಿಸಿತಾಗಳೇನಚ್ಚರಿಯೋ ॥ ೧೨

ವೈರಿಪ್ರತತಿಯನಿಪ್ಪೀ
ಕೈರವತತಿಗಾಯ್ತು ಬೇವಸಂ 1 ಸುಜನವ್ರಜ ।
ವಾರಿಜಕಾಯ್ತುಚಿತ 2 ಮೆನೆಯ
ಪಾರಮುದಂ ವೀರಶೂರನುದಯಿಸಿದಾಗಳ್ ॥ ೧೩

ಜಗಂ ದಕ್ಷಪಿತಾಮಹಂಗೆ ಪಿರಿದುಂ ಪೊಣ್ಮಿತ್ತು ನೋಡರ್ ಶಿರೋ
ರೋಗಂ ಪೂಷನೆನಿಪ್ಪವಂಗುದಿಸಿ ತೋರ್ದತ್ತೆಂದು ದಂತಾಬ್ಬುದಂ ।
ಆಗಳ್ಮೇಣ್ಭಗನೆಂಬುವಂಗೆ ನರೆ ಪುಟ್ಟಿತ್ತೆಂದು ಕಣ್ಬೇನೆಯಾ
ನಾಗಾಲಂಕೃತವೀರಭದ್ರನದಟಿಂ ಪುಟ್ಟಿರ್ಪಿನಂ ಧಾತ್ರಿಯೊಳ್ ॥ ೧೪

ಸರಸತಿಗಾದತ್ತು ನೆಗಡಿ
ಹರಿಣಧರಂಗಾದುದಾಗಳೇ ಕ್ಷಯರೋಗಂ ।
ಬರುಹಿಗೆ ಕಿರುನಾಲಗೆ ಭಾ
ಸ್ಕರಪುತ್ರಂಗಾದುದೆಯ್ದೆ 4 ಮೋಣ್ಬೇಳ್ದೋಳ್ಗಳ್ ॥ ೧೫

ವ॥ ಮತ್ತಮಾ ವೀರಭದ್ರಂ,

ಪುಟ್ಟಲ್ವರುಣಂಗಾಗ
ಳ್ಪುಟ್ಟಿತ್ತು ಜಲೋದರಂ ಕುಬೇರನಿರದೆ ಕಾ ।
ಲ್ಗೆಟ್ಟಂ ದೇವರ್ಕಳ ತಾ
ಯ್ಬಿಟ್ಟಳ್ಬಾಯಂ ಬಳಿಕ್ಕದೇನೆಂದುಸಿರ್ವೆಂ ॥ ೧೬

ನೆಟ್ಟನೆ ವಾಯುಗಪೌರುಷ
ಮಿಟ್ಟಣಿಸಿತು ವೀರಭದ್ರನೊಲವಿಂದಾಗ ।

---

ಸ್ವಜಲವ್ರಜ. 2 ಪೆನರಾ. 3 ಪಾರಮುದಂ. 4 ಬೇಳ್ದೋಳ್ಗಳ್.

ಳ್ದೊಟ್ಟಿಲನಲರಲ್ಕಿಂದ್ರಂ
ಬೆಟ್ಟುವಮನಂದಡರ್ದ್ದಡಂಗಿದಂ ತಾನಾಗಳ್ ॥ ೧೭

ಸುರಿದುವು ಪೂಮಳೆಗಳ್ಮುನಿ
ವರರಾಶೀರ್ವಾದವಿತತಿಯೆಂಟುಂದೆಸೆಯೊ ।
ಳ್ಪರೆದತ್ತಾನಕಮಧುರ
ಸ್ವರಕಹಳಾನಾದಮುಣ್ಮಿದುವು ಸಂಭ್ರಮದಿಂ ॥ ೧೮

ವ॥ ಆ ಶಿಶುವೆಂತಿರ್ದುದೆಂದೊಡೆ,

ಬೆಳಗಿನ ಕಣಿಯೋ ಸ್ನೈಪಿನ
ಬೆಳಸೋ ಮುಕ್ತಿಯ ನಿದಾನವೋ ನೋಳ್ಪರ ಕ ।
ಣ್ಗಳ ಹಬ್ಬದಿರವೊ ಮೇಣ್ತಿಂ
ಗಳ ತಿರುಳೋ ಎನೆ ವಿರಾಜಿಕುಂ ಶಿಶುರತ್ನಂ ॥ ೧೯

ವ॥ ಇಂತಪ್ಪ ಶಿಶುವಂ ಕಂಡು ಪಾರ್ವತಿಯೊಳೀಶ್ವರನಿಂತೆಂದಂ,

ಇದು ನಿನ್ನಾರ್ತಿದ್ರುಮಚ್ಛೇದನಕುದಿಸಿದ ಕುಮಾರಂ ಕುಠಾರಂ ಬಳಿಕ್ಕಿಂ
ತಿದು ನಿನ್ನಾನಂದವೆಂಬಾ ಕಡಲನಿರದೆ ಪೆರ್ಚಿಪರ್ಪ ಪೂರ್ಣೇಂದು ತಾನಿಂ ।
ತಿದು ನಿನ್ನಿಷ್ಟಾರ್ಥಮಂ ಕುಂದೆನಿಸದೆ ಕುಡುವೀ ಕಲ್ಪವೃಕ್ಷಂ ಕಡಂಗಿಂ
ದಿದನೋವೆಂದಿತ್ತನಾ ಹೈಮವತಿಗೆ ಶಿಶುವಂ ಚಂದ್ರಲೇಖಾವತಂಸಂ ॥ ೨೦

ವ॥ ಆಗಳ್,

ಆರುವೊಗನೊಳಾನೆವೊಗನೊಳ
ಮುಱುವವುಗಂ ತೇಜದೇಳ್ಗೆಯಿಂ ಪೌರುಷದಿಂ ।
ನೆರೆ ಪಿರಿಯನೀತನಿವನಂ
ಕಿರಿಯಂ ತಾನೆಂದು ಕಂಡಿರಲ್ವೇಡೆಂದಂ ॥ ೨೧

ತೊರೆದೊಕ್ಕವು ಮೊಲೆವಾಲ್ಗ
ಳ್ಸುರಿಘತ್ತಿರ್ದುವು ಮುದಶ್ರುತತಿಗಳ್ದೇಹಂ ।
ಪೊರೆಯೇರಿತು ಮಿಗೆ ಪುಳಕಾಂ
ಕುರಮುಣ್ಮಿದುವೆಯ್ದೆ ಪಾರ್ವತಿಗೆಯಾಪದದೊಳ್ ॥ ೨೨

ಪಟ್ಟಣದೊಳ್ಗುಡಿಗಳನುಱು
ಕಟ್ಟಿಸಿದಳ್ತೋರಣಂಗಳಂ ಸವೆಯಿಸಿದಳ್ ।
ಕೊಟ್ಟಳ್ಯಾಚಕರಿಗೆ ಕುಳಿ
ರ್ವೆಟ್ಟಣಾಗಿಯನೇಕವಸ್ತುವಂ ಬೇಳ್ಪನಿತಂ ॥ ೨೩

ಪುತ್ರೋತ್ಸವಮಂ ಸವೆದ
ಳ್ಧಾತ್ರೀಧರಪುತ್ರಿ ಸಪ್ತಮುನಿಗಳ ಚೆಲ್ವ ಕ ।
ಳತ್ರಸಮೇತಂ ರತ್ನವಿ
ಚಿತ್ರವೆನಿಪತೊಟ್ಟಿಲಂ ತೆಗೆಯಿಸುತೆ ಮುದದಿಂ ॥ ೨೪

ಆತತೊಟ್ಟಿಲಲ್ಲಿ ಪರಮಪು
ನೀತನ ನಗರಾಜನಂದನೆಯು ವಿಲಸಿತತನು ।
ಜಾತನನೊರಲ್ದು ಭುವನ
ಖ್ಯಾತನನಿರಿಸುತ್ತೆ ಪಾಡಿದರ್ಥಾವಕಿಯರ್ ॥ ೨೫

ಜೋ ಪರಜೊಮ್ಮ ಜೋ ಸುಕೃತದಾಗರ ಜೋ ಜಗದೇಕಬಂಧು ಜೋ
ಜೋ ಪರದೈವ ಜೋ ವಿಬುಧವಂದಿತ ಜೋ ಪರತತ್ವಸಾರ ಜೋ ।
ಜೋ ಪರವಸ್ತು ಜೋ ತ್ರಿಭುವನಾರ್ಚಿತ ಜೋ ಕರುಣಾಂಬುರಾಶಿ ಜೋ
ಜೋ ಪರಮೇಶ ಜೋ ಎನುತೆಪಾಡಿದರಂಗನೆಯರ್ಕುಮಾರನಂ ॥ ೨೬

ಮಂಗಳಮೂರ್ತಿ ಜೋ ಮಹಿಮೆಯುನ್ನತ ಜೋ ಭುಜಗೇಂದ್ರಹಾರ ಜೋ
ತುಂಗಕಪರ್ದ ಜೋ ದುರಿತಮರ್ದನ ಜೋ ಜಿತದಂಡಪಾಣಿ ಜೋ ।
ಅಂಗಜವೈರಿ ಜೋ ತ್ರಿಪುರಮರ್ದನ ಜೋ ಪ್ರಮಥಾಗ್ರಗಣ್ಯ ಜೋ
ಭಂಗವಿದೂರ ಜೋ ಎನುತೆ ಪಾಡಿದರಂದುರು ವೀರಭದ್ರನಂ ॥ ೨೭

1 ಗಾಡಿಯಿನೆಸೆವಾ ಸತಿಯರ್
ಪಾಡುತ್ತುಂ ವೀರಭದ್ರನಂ ಮುದದಿಂ ಕೊಂ ।
ಡಾಡುತ್ತುಂ ಸಂತೋಷಂ
ಮೂಡುತ್ತಂದಲ್ಲಿ ಗೌರಿಯಂ ಬೀಳ್ಕೊಂಡರ್ ॥ ೨೮

ವ॥ ಇತ್ತಲ್,

ಪರಭಕ್ತ್ಯಂಗನೆಯೊಲವಿಂ
ಪರಮಪದಮನ್ನೋಲುವಂತೆ ವೀರೇಶ್ವರನಂ ।

1 ಗಾಡಿಕಾರ್ತಿಯರ್ಗಳಿಂತುರೆ.

ಗಿರಿವರಸುತೆಯೊಲ್ದಾಗ
ಳ್ಪರಮಾನಂದದೊಳೆ ರಕ್ಷಿಸುತ್ತೆಸೆದಿರ್ದಳ್ ‖ ೨೯

ಗಗನಾಂಗನೆ ಸಿತಪಕ್ಷದ
ಮೃಗಧರನಂ ಬಳೆಯಿಪಂತೆ ಸಂತಸದಿಂದಂ ।
ನಗಿಸುತೆಯಾಗಳ್ತನ್ನಯ
ಮಗನಂ ಬಳೆಯಿಸುತೆ ರಂಜಿಸುತ್ತೆಸೆದಿರ್ದಳ್ ‖ ೩೦

ಸಂತಾನಂ ಶ್ರೇಷ್ಠಮೆಂದುಂ ಬುಧರತಿಶಯದಿಂದೊಲ್ದು ಪೇಳ್ವನ್ನೆಗಂ ದ
ಲ್ಭ್ರಾಂತಿಜ್ಞಾನಾಂಧ್ಯದಿಂದಾ ಹರಿವಧು ಮುದದಿಂ ಪಂಚವೃಕ್ಷಂಗಳೊಳ್ಮ !
ಖ್ಯಂ ತಾನಾಗಿರ್ದು ತೋರ್ಪೊಂದು 1 ಮರನನಿರದೋವಿರ್ದಳೆಂದಾಕೆಯುಂ ತಾಂ
ಸಂತಾನಶ್ರೇಷ್ಠನಂ ರಕ್ಷಿಸುತುಜ್ಜು ಪಳಿವುತ್ತಿರ್ದಳಂದಾರ್ಯೆಯಾಗಳ್ ‖ ೩೧

ಮಣಿಮಯಕುಂಡಲಂಗಳ ಮರೀಚಿ ಕಿರೀಟದ ಕಾಂತಿ ರನ್ನಗಂ
ಕಣದುರುತೇಜದೇಳ್ಗೆ ಸರೆ ರಂಜಿಸುತಾವಗಮಿರ್ಪ ರತ್ನಕಿಂ ।
ಕಿಣಿಗಳ ರೋಚಿ ತತ್ತನುವನಾವರಿಸಲ್ಸೊಗಸಿರ್ದನಂದು ರೋ
ಹಣಗಿರಿಯಂತೆ ಶಂಕರತನೂಭವವೀರನದೊಂದು ಲೀಲೆಯಿಂ ‖ ೩೨

ವ‖ ಇಂತಿರ್ಪ ತನ್ನಯ ನಂದನನಂ ಕಂಡು,

ಬಾರೆನ್ನಳ್ತಿಯ ಕರುವೇ
ಬಾರೆನ್ನಯ ಕಣ್ಣಪುಣ್ಯವೇ ಸುರತರುವೇ ।
ಬಾರೆನ್ನಯ ಹರಣವೆ ಬಾ
ಬಾರೆನ್ನಾಯುಷೆ ಎನುತ್ತೆ ಬಣ್ಣಿಸಿ ಕರೆವಳ್ ‖ ೩೩

ಅಪ್ಪಪ್ಪೆನ್ನ ನಿದಾನವೆ
ಅಪ್ಪಪ್ಪೆಡೆಬಿಡದೆ ರಂಜಿಸಿಪ್ಪೈಶ್ವರ್ಯವೆ ।
ಅಪ್ಪೆನ್ನಿಷ್ಟಾರ್ಥವನೀ
ವಪ್ಪಾ ಅಪ್ಪಪ್ಪೆನುತ್ತೆ ಮುದ್ದಿಸಿ ಕರೆವಳ್ ‖ ೩೪

ಇತ್ತಿತ್ತೆನ್ನ ಕುಮಾರಾ
ಇತ್ತಿತ್ತೆನ್ನನ್ನೆ ನೋಡು ತೀರದ ಸವಿಯೇ ।

1 ಮರನನುರದೋಲಿರ್ದಳೆಂದಾಕೆಯಂ.

ಇತ್ತಿತ್ತೆನ್ನಯ ಬಂಧುವೆ
ಇತ್ತಿತ್ತೆಂದಗತನೂಜೆ ಬಣ್ಣಿಸುತಿರ್ದಳ್ ॥ ೩೫

ಎನ್ನಯ ಸೌಖ್ಯದ ಸುಳಿವೇ
ಎನ್ನಂ ಸಲಪರ್ಕೆ ಬಂದೆಸೆವ ಸಂತಾನವೆ ।
ಎನ್ನಾನಂದದ ಮಡುವೇ
ಎನ್ನರಿವಿನ ಬೆಳಗೆಯೆನುತೆ ಮುದ್ದಿಸುತಿರ್ಪಳ್ ॥ ೩೬

ಎನ್ನಯ ಸೋಂಕಿನ ಸೊಗಸೇ
ಎನ್ನಯ ಮಗ್ಗಿಲೊಳೆ ಬಳೆವ ಸುರಭಿಯ ವತ್ಸವೆ ।
ಎನ್ನಯ ತೋಳ್ಗಳತೊಡವೇ
ಎನ್ನೆರ್ದೆಯೊಳ್ತೋರ್ಪ ಸುರಮಣಿಯೆ ಎನುತುಸಿರ್ದಳ್ ॥ ೩೭

ಸುರುಚಿರ ದಿವ್ಯಜ್ಞಾನಮ
ನಿರದೋವುತ್ತಿರ್ಪ ದಿವ್ಯಯೋಗಿಸಿವೋಲ್ಗಿರಿ ।
ವರಪುತ್ರಿ ಕುವರನಂ ಸ
ತ್ಕರಿಸುತ್ತುಂ ಸಾಕುತುಂ ಕರಂ ಸೊಗಯಿಸಿದಳ್ ॥ ೩೮

ವ॥ ಇಂತು ಪೊಗಳ್ತೆಗಾಶ್ರಯಮಾದ ಕುಮಾರನ ಬಾಲಲೀಲೆಯೆಂತಿರ್ದು ದೆಂದೊಡೆ,

ಉರಗೇಂದ್ರನ ತಲೆವಣಿಗಾ
ದರದಿಂ ಕೈಯಿಕ್ಕುತುಂ ಮಹಾಸಿಂಹಂಗಳ ।
ನೆರಡುಂಕೈಯೊಳ್ತಿರುವುತೆ
ಶರಭಂಗಳನಟ್ಟಿ ಕೊಂಡು ಪೋಗುತ್ತಿರ್ಪಂ ॥ ೩೯

ಖೇಚರರಂ ಕೆಡಪುತ್ತುಜಿ
ಭೂಚರರಂ ಮೊಳ್ಪನೆಯ್ದಿ ಭೂಚರರಂ ಮಿಗೆ ।
ಖೇಚರರಂ ಮಾಳ್ಪಂ ಸಲೆ
ಕೈಚಳಕದೊಳಾಗಸಕ್ಕಿಡುವನಂತವರಂ ॥ ೪೦

1 ಮೇರುಶಿಖರಂಗಳಂ ತಾ
ನಾರಯ್ಯದೆ ಕೀಳ್ತು ವೀರಭದ್ರಂ ಮುದದಿಂ ।

1 ಮೇರುಶೃಂಗಂಗಳಂತಾ.

ಗೌರಿಯ ಮೊಗಮಂ ನೋಡುತೆ
ಘೋರನೆ ತಿರಿಕಲ್ಲನಾಡುತಿರ್ಪಂ ಮುದದಿಂ ॥ ೪೧

ವ॥ ಮತ್ತಂ,

ಗಗನದೊಳಾವಗಂ ಚರಿಸುತೊಪ್ಪುವ ಸೂರ್ಯಸುಧಾಂಶುಬಿಂಬಮಂ
ನೆಗೆದವನಳ್ತಿಯಿಂ ಪಿಡಿದು ಭೋಂಕನೆ ತಂದು ಕಡಂಗಿ ನೋಡಿ ಕಂ ।
ದುಗವೆರಡಾದುವೆಂದುಭಯಹಸ್ತದೊಳಂ ನಲವಿಂದೆ ತಾಳ್ದು ತಾಂ
ನಗುತೆ ನೆಲಕ್ಕೆ ಪೊಯ್ದು ಪೊಡೆಸೆಂಡುಗಳಾಟವನಾಡುತೊಪ್ಪಿದಂ ॥ ೪೨

ಅಂದು ನವಗ್ರಹಮಂ ತಾ
ನೊಂದೇ ಕೈಯಲ್ಲಿ ಪಿಡಿದು ನಿರ್ಬಂಧಿಸಿರ ।
ಲ್ಕಂದಾಗ್ರಹಚಾರಮನೇ
ನೆಂದರಿಯದೆ ಮರುಗುತಿರ್ಪರಾ ಜೋಯಿಸರ್ಗಳ್ ॥ ೪೩

ಗಂಗಾಪ್ರವಾಹಮಂ ತ
ನ್ನಂಗುಲಿಯೊಂದರೊಳ್ ತಡೆದು ಲೋಕಕ್ಕಾತಂ ।
ಕಂಗಳೆನೆ ತೋರಿ ಮತ್ತಾ
ಯಂಗುಲಿಯಂ ತೆಗೆದು ನಲಿವುತಿರ್ಪನಜಸ್ರಂ ॥ ೪೪

ಎರಡುಂ ಕೈಯೊಳೆರಳ್ದಿ
ಕ್ಕರಿಗಳ ನೆರೆ ಪಿಡಿದು ಕುಂಭಮಂ ತಾಡಿಸುತುಂ ।
ಗಿರಿಜೆಯನೀಕ್ಷಿಸಿ ನಗುತುಂ
ಪೊರೆಯೇರುತ್ತಿರ್ದನಂದು ಬಾಲಕರೆರೆಯಂ ॥ ೪೫

ಹಿಟ್ಟುಂಗುಟ್ಟುತ್ತೇಳುಂ
ಬಟ್ಟಗಳಂ ಕಡಲ್ಗಳೇಳರೊಳ್ಕಲಸುತ್ತುಂ ।
ದಟ್ಟಿಟ್ಟುಕೊಳ್ವ ಮಗನಂ
ನಿಟ್ಟಿಸಿ ಗಿರಿವರತನೂಜೆ ಹಿಗ್ಗುತ್ತಿರ್ದಳ್ ॥ ೪೬

ತೂಪಿರಿವಲ್ಲಿತಧಸಿತದ
ಕಾಪಿಡುವಳ್ರಕ್ಷೆಗಾಗಿ ಪೊಸರುದ್ರಾಕ್ಷೆಯ ।
ನೇಪೊಳ್ತುಂ ಕಟ್ಟಿರ್ಪ
ಳ್ತಾಪತ್ರಯರಹಿತನೆನಿಪ ಶಿಶುವಿಂಗಾಗಳ್ ॥ ೪೭

ವ॥ ಇಂತಪ್ಪ ಬಾಲಕೇಳೀವಿನೋದಂಗಳಿಂ ಶೈಶವಂಗಳೆದ ವೀರಭದ್ರಂಗೆ ಯೌವನಂ ತಲೆದೋರ್ದುದೆಂತೆಂದೊಡೆ,

ನಂದನಮಂ ಸುರತರು ಪೂ
ರ್ಣೇಂದುವನುಱೆ ಕಾಂತಿ ಸಾರ್ದು ರಂಜಿಪ್ಪಂದದೊ ।
ಳಂದಲ್ಲಿ ವೀರನಂ ಸಾ
ರ್ದಂದಂಬೆತ್ತಿತ್ತು ಜವ್ವನಂ ಜಗವರಿಯಲ್ ॥ ೪೮

ಪೊನ್ನನುಱೆ ಸಾರ್ದು ರಂಜಿಪ
ರನ್ನಂಬೊಲ್ವೀರಭದ್ರನಂ ಸಾರುತ್ತಂ ।
ದುನ್ನತಿವೆತ್ತೆಳೆಜವ್ವನ
ಮನ್ನೆರೆ ಬಣ್ಣಿಸುವರಾರ್ಧರಿತ್ರೀತಳದೊಳ್ ॥ ೪೯

ಬಂದ ಬಸಂತದೊಳ್ಸಲೆ ವಿರಾಜಿಸಿ ಕಣ್ಗಿನಿದೀವ ಬಂದ ಮಾ
ಕಂದದವೋಲ್ಸಮಸ್ತಕಲೆಪೂರ್ತಿಯನೆಯ್ದಿ ಪೊದಳ್ದು ತೋರ್ಪ ರಾ ।
ಕೇಂದುವಿನಂತೆ ಜವ್ವನದ ಪೆರ್ಮೆಯಿನಾ ಕುವರಂ ಬಳಿಕ್ಕೆ ತಾ
ಯ್ತಂದೆಗಳಾದ ಪಾರ್ವತಿಗೆ ಶಂಭುಗೆ ಸೌಖ್ಯಮನೀವುತೊಪ್ಪಿದಂ ॥ ೫೦

ವ॥ ಇಂತಪ್ಪ ಕುಮಾರನಂ ಕಂಡು,

ಮೃಡನತಿಸಂತಸದಿಂದಂ
ತಡೆಕೈಯಿಂ ಮಾಡಿ ಮುದ್ದಿಸುತ್ತಿನಿವಾತಂ ।
ನುಡಿವುತೆ ಮೂರ್ಧಾಘ್ರಾಣಮ
ನೊಡರಿಸುತುಂ ನೋಡಿನೋಡಿ ನಲಿವುತ್ತಿರ್ದಂ ॥ ೫೧

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಲಾಗ್ರದೊಳ್ ॥ ೫೨

ಮುಳಿಯಲಗೇಂದ್ರಜಾತೆ ತರಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ ।
ತುಟಿಲನೊಡರ್ಚಲಾಲ್ದು ಮೊಗದೊಳ್ಮೊಗವಿಕ್ಕುತೆ ಸಂತವಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಪೀಜಗಮಂ ಗುರುವಿಶ್ವವಲ್ಲಭಾ ॥ ೫೩

ಗಿರಿಯ ಮಗಳಮುಡಿಯೊಳಮರ್ದ ಸುರಕುಜ ಪ್ರಸೂನದೊ
ಳ್ಭರೆದ ರಜಮನಿರದೆ ಸವಿದು ತಣಿದು ತನ್ನ ಲೀಲೆಯಿಂ ।
ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮಿಾಗಭೀಷ್ಟಮಂ ॥ ೫೪

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರನಿಕರಮಕುಟಮಣಿವಿರಾ
ಜಿತಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕ
ರಂದಮಧುಕರಾಯಮಾಣ ಶ್ರೀಕಂಠವಂಶಾರ್ಣವಪೂರ್ಣಚಂದ್ರ
ನೆನಿಪ ಸತ್ಕವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ
ಶ್ರೀ ವೀರಭದ್ರವಿಜಯ ಮಹಾಪ್ರಬಂಧದೊಳ್ವೀರ
ಭದ್ರೋತ್ಪತ್ತಿತಚ್ಛೈಶವಯೌವನಾ
ಭ್ಯುದಯವರ್ಣನಮಷ್ಟಮಾಶ್ವಾಸಂ
ಸಂಪೂರ್ಣಂ.

---

# ನವಮಾಶ್ವಾಸಂ

ತವಕಂ ಬಳಲ್ಕೆ ನಿಡುಸುಯ್
ಬೆಮರ್ಮುರ್ಛೆಯಗಲ್ಕೆಯೆಂಬಿವಿನಿತುಂ ಪೊರ್ದದೆ ।
1 ಶಿವೆಯ ಸುಮೇಳನಮದು ಸಂ
ಭವಿಸಿದ ವರವಿಶ್ವನಾಥ ರಕ್ಷಿಪುದೆಮ್ಮಂ ॥ ೧

ವ॥ ಇಂತು ನವಯೌವನದಿಂದತಿರಮಣೀಯನಾದ ಕುವರನಂ ನೋಡಿ ಹರುಷರಸದೊಳೋಲಾಡಿ ವಿಶ್ವನಾಥಂ ವಿಶ್ವಂಭರವರೂಥಂ ಈತಂಗೋರಗೆಯ ಪ್ಪೂರ್ವ ಕನ್ನಿಕೆಯಂ ನಿರ್ಮಿಸೆಂದು ಪಾರ್ವತಿಗೆ ನಿರೂಪಿಸಲೊಡಂ ಮಹಾಪ್ರಸಾದ ಮೆಂದು ಕೈಕೊಂಡು,

ಬರ್ಮನರಾಣಿಗೀರ್ಮಡಿ ಪುರಂದರನಂಗನೆಗೆಯ್ದೆ ನೋಡೆ ಸಾ
ಸಿರ್ಮಡಿ ಚೈತ್ರವಲ್ಲಭೆಯ ರೂಪಿನ ಸೌಂದರದೇಳ್ಗೆಗಾವಗಂ ।
ನೂರ್ಮಡಿಯಪ್ಪ ಭಾವಕಿಯನಂದಗಜಾತೆ ಮನೋನುರಾಗದಿಂ
ನಿರ್ಮಿಸಿ ಭದ್ರಕಾಳಿವೆಸರಿಟ್ಟಿರದೊಪ್ಪಿದಳೊಂದುಲೀಲೆಯಿಂ ॥ ೨

ರತಿಯತಿರೂಪಮಂ ಸಿರಿಯ ಪೊಚ್ಚರನಾಮುನಿಪತ್ನಿಯಪ್ಪರುಂ
ಧತಿಯ ಸುಶೀಲಮಂ ಪಿರಿದನಿಪ್ಪನಸೂಯೆಯ ವ್ಯೆಮೆಯಂ ನಿಶಾ ।
ಪತಿಯ ವಧೂಸ್ವಭಾವಮನೊರಲ್ದವನೆಲ್ಲಮನೊಂದುಗೂಡಿ 2 ಪಾ
ರ್ವತಿ ಸವೆದಂತೆ ಕಣ್ಗೆಸೆವುತಿರ್ದಳವಳ್ಮನಕಿಂಪನೀವುತುಂ ॥ ೩

ಧಾತ್ರಿಯ ಧೈರ್ಯಮನಾಸಾ
ವಿತ್ರಿಯ ಸಾಹಸಮನೋಳ್ಪೆವೆನುತೊಪ್ಪುವ ಗಾ ।
ಯತ್ರಿಯ ಘನಮಂ ತೆಗೆದು ವಿ
ಧಾತ್ರಂ ನಿರ್ಮಿಸಿದ ತೆರದೊಳೊಪ್ಪಿದಳಾಗಳ್ ॥ ೪

ಸಾಸಿಸ್ವರ್ಬಿದಿಗಳ್ಪೊ
ರ್ಧಾಸಿರ್ವಬಿಯಳರೆರೆಯರೆಸಿಪರ್ಪನ್ನಿರ್ ।

---

1 ಶಿವೆಯ ಸಮ್ಮೇಳನಂ. 2 ಇಲ್ಲಿ ಮೂರಕ್ಷರಗಳು ಲುಪ್ತವಾಗಿದ್ದುದರಿಂದ 'ಪಾರ್ವತಿ' ಯೆಂಬ ಪದವನ್ನು ಸೇರಿಸಿದೆ.

ಸಾಸಿರ್ವರ್ಜೀವರವಳ
ವೈಸಿರಿಯಂ ಪೊಗಳಲಾರರೆನೆ ಬಣ್ಣಿಪರಾರ್ ॥ ೫

ಆಕುವಮುದಾಕ್ಷಿಯ ಪಾದಮ
ಶೋಕಂ 1 ತಾನೆನಿಸುತಾವಗಂ ರಂಜಿಸಿಕುಂ ।
ಲೋಕದೊಳಚ್ಚರಿಯಲ್ತೇಂ
ಶ್ರೀಕಂಠದ್ರೋಹಿಗಳ್ಗೆ ಶೋಕಮನೀಗುಂ ॥ ೬

ಪೊಡವಿಯನೊಂದೇ ಮೆಯ್ಯೊ
ಳ್ಪಿಡದಾನಲ್ಕಾರೆನೆಂದು ಕೂರ್ಮಂ ಬಂದವ ।
ಳಡಿವಿಡಿದೆರಡಾದನೊ ಎನೆ
ಮಡದಿಯ ಮೇಗಾಲ್ಗಳಾವಗಂ ಸೊಗಯಿಸುಗುಂ ॥ ೭

ದುರುಳರೊಡನಾಡಿದಿನರಿ
ರ್ವರನುಳುಪರ್ವೇಳ್ಕುಮೆಂದು ಕಾಲ್ವಿಡಿದ ದಶಾ ।
ರ್ಕರೋ ತಾವೆಂದೆಂಬಿನೆಗಂ
ಪರಿರಂಜಿಸುತಿರ್ದುವಾಕೆಯಡಿವೆರಲುಗುರ್ಗಳ್ ॥ ೮

ಬಿಡದೆ ಶಿವದ್ರೋಹಿಗಳಂ
ಪಡಲಡುವೊಡೆ ತಾಳ್ದ ಲಗ್ಗೆಸೆಂಡೆಂಬಿನೆಗಂ ।
ನಿಡುಗಣ್ಣಗಾಡಿಕಾರ್ತಿಯ
ಮಡಮವು ವೃತ್ತತೆಯಿನೊಪ್ಪಿ ಕಣ್ಗೊಳಿಸಿರ್ಕುಂ ॥ ೯

ಹಿಂದಿಚ್ಚೆಗಾರ್ತಿಯರಸಂ
ಬೆಂದಳಿವಲ್ಲೀಶನವನ ದೊಣೆಯುಂ ಬೈತಿ ।
ಟ್ಟಿಂದಿವಳ್ಗಿತ್ತನೊ ಎನೆ ತಾ
ವಂದಂಬಡೆದಿರ್ದುವಂಗನೆಯ ಕಿರುದೊಡೆಗಳ್ ॥ ೧೦

2 ವೀರನ ಘನಚಿತ್ತಸ್ತಂ
ಬೇರಮಮಂ ಕಟ್ಟಲೆಂದು ಪಾರ್ವತಿ ಸಮೆದಾ ।
3 ಚಾರುಸ್ತಂಭಗಳೆಂದೆನೆ
ರಾರಾಜಿಸುತಿರ್ದುವಂಗನೆಯನುಣ್ದೊಡೆಗಳ್ ॥ ೧೧

---

1 ತಾನೆನೆ ಸಂತಸದಿ ರಂಜಿಸಿಕುಂ. 2 ವೀರಭದ್ರನ ಮನಸ್ತಂ.
3 ಚಾರುತರಕಂಭಮೆಂದೆನೆ.

1 ಬಳಹರಗಳ್ಕುತೆ ಮುನ್ನೀ
ರೊಳಗಾಳ್ದು ಬಳಿಕ್ಕ ನಾಡೆ ನಾನಾರ್ಥಂಗ ।
ಕ್ಕೊಳಗಾದದ್ರಿಗಳಂ ಮಿಗೆ
ಪಳಿವುತ್ತೆಸೆದಿರ್ಪುವವಳ ಘನಜಘನಂಗಳ್ ॥ ೧೨

ಪೀನಸ್ತನಧರಮಂ ತ
2 ನ್ನಾನಿನಿಗೊಪ್ಪುತ್ತೆ ತೋರ್ಪ ಕಬರೀಭಾರಮ ।
ನಾನಲ್ಕಾರದಡಂಗಿತೊ
ತಾನೆನೆ ಸೊಗಸಿತ್ತುದವಳ ಸಂಶಯಮಧ್ಯಂ ॥ ೧೩

ಭುವನಕೋಶಂ ಬರೆದ ವಲ
ಗೆ ವಿರಾಜಿಸುವಂದದಿಂದೆ ಭರಮಿನಿತಿಲ್ಲದೆ ।
ಭುವನಚತುರ್ದಶಮಂ ತಾ
ಳ್ದಿವಳುದರಂ ತೆಳ್ಪುವೆತ್ತು ಕಣ್ಗೆಸೆದಿರ್ಕುಂ ॥ ೧೪

ನಡು ಶೂನ್ಯಸ್ಥಳಮಾಯಿತ್ತಾ
ಮಡದಿಗನುತ್ತೆಯ್ದೆ ತೋರ್ಪ ಶೂನ್ಯಾಕೃತಿಯನೆ ।
ಕಡುರಯ್ಯಮಾಗಿ ಸೊಗಸಂ
ಬಡೆದೀವುತ್ತಿರ್ಪುದಂಗನೆಯ ಸುಳಿವೊಕ್ಕುಳ್ ॥ ೧೫

ಲಾವಣ್ಯರಸದ ಕಾರೊಳ್
ತೀವಿ ಪೊದಳ್ದುದಿಸಿ ತೋರುವೆಳೆಗರುಕೆಯನಲ್ ।
ಭಾವೆಯ ಬಾಸೆವಿಡಿದ ರೋ
ಮಾವಳಿ ಕಣ್ಗೆಡ್ಡಮಾಗಿ ರಂಜಿಸುತಿರ್ಕುಂ ॥ ೧೬

3 ಘನತಿಮಿರವೆಂಬುದೆಂದುಂ
ಜನಿಯಿಸದಳವಿಂತಿದೆಂದರಿವುತವಳೆರ್ದೆಯೊಳ್ ।
ಮನೆಗಟ್ಟಿ ತೋರ್ಪ ಚಕ್ರಮಿ
ಥುನವೆಂಬಂತೆಯ್ದೆ ಸೊಗಸಿದುವು ಪೆರ್ಮೊಲೆಗಳ್ ॥ ೧೭

ಮಧುರಸ್ವರವಂ ಬೀರುತೆ
ಮಧುರಸ್ವರವೆಂಬ ನಾಮಮುಮಂ ತಳೆದಿರ್ದಾ ।

---

1 ಬಳಹರಂಗಳ್ಕಿಮುನ್ನೀ. 2 ಕನ್ಯಾನಿತಘಗೊಪ್ಪಿ ತೋರ್ಪ.
3 ಘನತಮಸ್ಸೆಂಬುದೆಂದುಂ.

ಮಧುರಸ್ವರದಂದದೊಳಾ
ವಧುವಿನ ಸೊಗಸಿರ್ಪ ನುಣ್ಗೊರಲ್ಕಣ್ಗಿಸೆಗುಂ ॥ ೧೮

ವೀರನ ಪೂಜೆಗೆಸೆವ ಮಂ
ದಾರದ ಮಾಲೆಗಳೊಯೆಂಬಿನಂ ಪೂವಿಲ್ಲಾ ।
1 ನಾರಿಯವೊಲೊಪ್ಪುತಿರ್ಪಾ
ನಾರಿಯ ರಂಜಿಸುವ ತೋಳ್ಗಳೊಪ್ಪಿದುವಾಗಳ್ ॥ ೧೯

ಪಿರಿದುಂ ಕುಜಾತಿಯೊಳ್ಪು
ಟ್ಟಿರುತಿರ್ಪುದಿದೆಂದು ಮಾಂದಳಿರನುರೆ ಪಳಿವುತೆ ।
ತರುಣಿಯ ಮೃದುಹಸ್ತಂಗಳ್
ಪರಿರಂಜಿಸುತಿರ್ಪುವಾವಗಂ ನೋಳ್ಪಿನೆಗಂ ॥ ೨೦

2 ಮಿರುಗುವ ತಾವರೆಯೊಳ್ಮೀಣ್
ತರಿಸಂದುರೆ ರಂಜಿಸಿರ್ಪ ಗರಿವೂಗಳ ಕಿರು ।
ಗರಿಯೋ ಎಂದೆಂಬಿನೆಗಂ
ನೆರೆ ರಂಜಿಸುತಿರ್ದುವವಳ ಕೈವೆರಲುಗುರ್ಗಳ್ ॥ ೨೧

ವೀರನ ವಿಶಾಲನೇತ್ರ ಚ
ಕೋರಿಗೆ ಸೊಗಮಿವುತಿರ್ಪ ಚೆಂದಿರವಟ್ಟನೆ ।
ಯಾರಮಣಿಯ ನಗೆವೊಗವಂ
ದಾರಮಣೀಯಾಕೃತಿತ್ವದಿಂ ಸೊಗಯಿಸುಗುಂ ॥ ೨೨

3 ಕಾಂತಿಯು ಪೊರ್ದಿದೊಡೇಂ ಕಠಿ
ಣಂ ತನಗೊಂದಿರ್ಪುದೆಂದು ಮಾಣಿಕ್ಯಮನೋ ।
ರಂತೆ ಪಳಿವುತ್ತೆ ಮಾರ್ದವ
ಕಾಂತಿಯುನಾಂತವಳ ಪವಳದುಟಿ ರಂಜಿಸುಗುಂ ॥ ೨೩

ಮುತ್ತಿನ ಕಾಂತಿಯಿದೆಂಬುದು
ಮುತ್ತಿನ ಕಾಂತಿಗೆ ಸಮಾನಮಾಗಿರ್ಪುದು ಪೊಸ ।
ಗತ್ತುರಿವಣ್ಣದವಳ ಬೆಳ
ಗುತ್ತೊಪ್ಪುವ ಪಲ್ಗದಿರ್ಪಸರಿಸಿರ್ಪನ್ನಂ ॥ ೨೪

---

1 ನಾರಿಯಂತೊಪ್ಪುತಿರ್ಪಾ. 2 ಮಿರುಪತಾವರೆಯೊಳಾಗಳ್.
3 ಕಾಂತಿ ಘೋಣಿರ್ದೊಡೇಂ ಕಠಿ.

ಏವೇಳ್ವೆಂ ಚಂಪಕದಂ
ತಾವನಿತೆಯ ನಾಸಿಕಂ ಕರಂ ಸೊಗಯಿಸುಗುಂ ।
ಲಾವಣ್ಯಾಬ್ಧಿಯೊಳೊಪ್ಪುವ
ನಾವೆಯೊ ಎಂಬಂತೆ ಕಣ್ಗೆವಂದುದದಾಗಳ್ ॥ ೨೫

ಇರುಳೊಪ್ಪಂಗೆಡುತಿರ್ಪೀ
ಸರಸಿಜಮಂ ಪಗಲೊಳಲ್ವ ಕೈರವತತಿಯಂ ।
ಇರುಳುಂ ಪಗಲುಂ ಸೊಗಸು
ತ್ತಿರುತಿರ್ಪವಳಕ್ಷಿಗಳ್ಪಳಿವುತೆಸೆದಿರ್ಕುಂ ॥ ೨೬

ಶ್ರೀಕಾರಂ ಬಗೆವೊಡದೆ
ಲ್ಲಾಕಾಲಂ ಮಂಗಳಪ್ರದಂ ತಾನೆಂದುಂ ।
ಶ್ರೀಕಾರಂದಳೆದವೊಲಾ
ಶ್ರೀಕರಮಾಗೊಪ್ಪಿ ತೋರ್ಪುವಾಕೆಯ ಕಿವಿಗಳ್ ॥ ೨೭

ಇಲ್ಲರಿಸಿರ್ದೊಡೆ ಗಿರಿಜಾ
ವಲ್ಲಭನಿಂ ಸುಡದಿದೆಂದತನುವಿರಿಸಿರ್ದಾ ।
ಬಿಲ್ಲೋ ಎಂದೆಂಬಂದದೆ
ಫುಲ್ಲಾಕ್ಷಿಯ ಪುರ್ಬ್ಬು ಕಣ್ಗೆ ರಂಜಿಸುತಿರ್ಕುಂ ॥ ೨೮

ಅಳುರ್ದತ್ತು ಕುರುಳ್ಗಳ್ತ್ತಲೆ
ತಳೆದತ್ತುರುಕಾಂತಿಯಂ ಮುಖಾಬ್ಜವೆನುತೆ ಮ ।
ಯ್ಯಳಿದ ಸುಧಾಸೂತಿಯವೋ
ಲೆಳೆವೆರೆಸೊಸಲೊಪ್ಪುತಿರ್ದುದಾ ಕೋಮಳೆಯಾ ॥ ೨೯

ಏಗಂ ನೀಲರುಚಿಯೆ ನಿಜ
ಮಾಗಿರ್ದುಂ ಭ್ರಮರಕುಂತಳೆಯ ಸೋರ್ಮುಡಿಯನು ।
ರಾಗಕೆ ನೆಲೆಯೆನಿಸಿತ್ತ
ಲ್ಲಾಗಳ್ವೀರಂಗೆ ತಾನಿದೇನಚ್ಚರಿಯೋ ॥ ೩೦

ವ ಇಂತಪೂರ್ವಸೌಂದರ್ಯಮಂ ತಾಳ್ದಿರ್ದ ಕನ್ನಿಕೆಯಂ ದೇವಿಯರ್ನಿರ್ಮಿಸಿ ಮಹಾದೇವಂಗೆ ತೋರಿಸಿ ನಮಸ್ಕಾರವಂ ಮಾಡಿಸಿರ್ಪಿನಮವಳಂ ನೋಡಿ ವಿಶ್ವನಾಥಂ ನನ್ನಮಗ ವೀರಭದ್ರಂಗೆ ವಿವಾಹಮಂಟಪಮಂ ನಿರ್ಮಿಸುವುದೆಂದು ನಿಯಮಿಸಲೊಡನವರ್ಗಳ್ ಮಹಾಪ್ರಸಾದವೆಂದು ಕೈಕೊಂಡಾಗಳೆ ನಿರ್ಮಾಣಮಂಗೆಯ್ದುದರದೆಂತಿರ್ದುದೆಂದೊಡೆ,

ಪಳುಕಿನ ಭಿತ್ತಿಗಳಿಂ ಕ
ಣ್ಗೊಳಿಸುವ ಪೊಸರನ್ನದೋಲೆಗಳಿಂದಮಜಸ್ರಂ ।
1 ಪೊಳೆಯುವ ವಜ್ರದಕಂಭಂ
ಗಳಿನೊಪ್ಪುತ್ತಿರ್ಪುದಲ್ಲಿ ಪರಿಣಯಗೇಹಂ ॥ ೩೧

ಹರಿನೀಲದ ಕುಟ್ಟಿಮದಿಂ
ಮರಕತದಿಂ ವಿರಚಿಸಿರ್ದ ಮೇಲ್ವಲಗೆಗಳಿಂ ।
ದುರುವೈಡೂರ್ಯದ ಲೋವೆಯಿ
ನಿರದೊಪ್ಪುತ್ತಿರ್ದುದಲ್ಲಿ ಮಣಿಮಯಸದನಂ ॥ ೩೨

ಓರಂತೊಪ್ಪುವ ಮಣಿಬಿಂ
ಗಾರದಿನೊಂಬತ್ತುರನ್ನದಿಂ ಸಮೆದಿರ್ದಾ ।
ತೋರಣಚಯದಿಂ ಬಗೆವಂ
ದಾರಾಜಿಸಿತೋರ್ದುದಲ್ಲಿ ಮಂಗಳನಿಳಯಂ ॥ ೩೩

ಮುತ್ತಿನ ಮೇಲ್ಕಟ್ಟುಗಳಿಂ
ಬಿತ್ತಿಯೊಳಳವಟ್ಟು ತೋರ್ಪ ಪಲರನ್ನಂಗಳ ।
ಪುತ್ತಳಿಗಳಿಂದೆ ಮಿಗೆ ಸೊಗ
ಸಿತ್ತಾ ವೈವಾಹಗೇಹವದನೇವೊಗಳ್ವೆಂ ॥ ೩೪

ಕನಕಾಚಲಮಂ ತಂದೊ
ಲ್ದು ನಿಲಿಸಿ ಪುಟವಿಟ್ಟು ಕಡೆದು ಕಂಡರಿಸಿದರೆಂ ।
ಬಿನೆಗಂ ವೈವಾಹಗೃಹಂ
ಮನಕಿಂಪಂಬೀರುತಿರ್ದುದದನೇನೆಂಬೆಂ ॥ ೩೫

ವರರೋಹಣಾದ್ರಿಯಂ ಪೆ
ಚ್ಚರದಿಂ ಕೀಳ್ತೆಯ್ದು ಮಸೆವುತೊಪ್ಪಂಗೊಟ್ಟು ।
ಲ್ಲರಿಸಿದರೋ ಎನೆ ರತ್ನೋ
ತ್ಕರದಿಂದಂ ಸಮೆದ ಸದನಮೇನೊಪ್ಪಿದುದೋ ॥ ೩೬

ನಗರಾಜನಂದು ತನ್ನಯ
ಮಗಳವಿವಾಹಕ್ಕೆ ಮಾಡಿಸಿದ ಮಂಟಪಕೋ ।

1 ಪೊಳೆವ ಬಜ್ಜರದ ಕಂಭಂ.

ರಗೆಯೆನಿಸಿತ್ತೆಲ್ಲಾಗಳ್
ಸೊಗಸಂ ಸೂಸುತ್ತುಮಿರ್ದುದಾಗ್ರಹರಾಜಂ ॥ ೩೭

ಇದು ಚಿತ್ರಂ ನೆಗಳ್ದಿಂದ್ರನೀಲದ ಪೊದಳ್ದೊಪ್ಪಿರ್ಪ ಪೆರ್ಗೆರ್ಪುರ್ಪ ರ
ತ್ನದ ಕೆಂಪುನ್ನತಮೌಕ್ತಿಕಪ್ರಕರದಿಂದಂ ಬೆಳ್ಪು ಮೆಯ್ವೆತ್ತು ಪೆಂ ।
ಪೊದವಿರ್ದಾನಿಳಯಂ ಲಸತ್ತಿಮಿರಮುಂ ಸೂರ್ಯಾಂಶುವುಂ ಜೊನ್ನಮುಂ
ಪೊದಳ್ದೊಂದೇ ಪದದೊಳ್ವಿರಾಜಿಸುವವೋಲ್ತೋರಿರ್ದುದೆಲ್ಲಾಗಳುಂ ॥ ೩೮

ಕತ್ತುರಿಯಿಂಸಾರಿಸಿ ಘುಸ್ರ
ಣೋತ್ತಮರಸದಿಂದೆ ಕಾರಣೆಯುನೊಡರಿಸಿ ಪೊಸ ।
ಮುತ್ತಿನ ಕಡೆಯಂ ಮಿಗೆ ರಚಿ
ಸುತ್ತಿರ್ಪೆಳವೆಣ್ಗಳೆಸೆದರಾ ಮಂಟಪದೊಳ್ ೩೯

1 ಮಂಗಳಪದಾರ್ಥಚಯಮಂ
ಮಂಗಳವೆನಿಸಿರ್ಪವಸ್ತುಕಾರೋತ್ಕರಮಂ ।
2 ಮಂಗಳಭೂಷಣಧರಿಸಿ
ರ್ದಂಗನೆಯರ್ಕಣ್ಗೆ ಸೊಗಸನೀವುತ್ತಿರ್ದರ್ ೪೦

ತಳಿರ್ದುಟಿ ತೊಂಡೆವಾಯ್ದೆರೆ ತೊಳರ್ಪ ಮೊಗಂ ಕುಡುವುರ್ಬು ನೀಳ್ದ ಕ
ಣ್ಗಳಮರ್ದ ಬಟ್ಟಪೆರ್ಮೊಲೆಗಳೊಪ್ಪುವ ನುಣ್ದೊಡೆ ನೀಳ್ದ ಬಾಸೆ ಮಾಂ ।
ದಳಿರಡಿ ನುಣ್ಗದಂಪು ಪೊಸಮಿಂಚಿನ ಮೆಯ್ವೆಳಗಾಂತ ಪಲ್ಗದಿ
ರ್ಬೆಳೆಯಿಸುತಿರ್ಪಿನಂ ಸೊಗಸುತಲ್ಲಿ ವಿರಾಜಿಸಿತಂಗನಾಜನಂ ॥ ೪೧

ಸುಳಿಪೊರ್ಕುಳ್ತೋರಹಾರಂ ಪಿಕರವನಿನದಂ ತೆಳ್ವಸಿರ್ನೀಳ್ದ ಕೇಶಂ
ನಳಿದೋಳ್ಗಳ್ಸೂಕ್ಷ್ಮಮಧ್ಯಂ ದರಹಸಿತಮುಖಂ ಚಂದನಾಮೋದದೇಹಂ ।
ತಿಳಕಾಲಂಕಾರಭಾಳಂ ಮಣಿಮಯಕಟಿ ತನ್ನೇವುರಂಕರ್ಣಪೂರಂ
ಗಳ ಚೆಲ್ವಿಂದಿರ್ಪ ನಾನಾಸುರಸುದತಿಯರಾಗೇಹದಲ್ಲೊಪ್ಪುತಿರ್ದರ್ ॥ ೪೨

ಅರುಣೋಷ್ಠಂ ಚಂದ್ರವಕ್ತ್ರಂ ವರಕನಕಲತಾಕಾಯಮಾಸೌಖ್ಯವಾಕ್ಯಂ
ಗುರುವೃತ್ತಂಬೆತ್ತು ತೋರ್ಪಸ್ತನಮುರೆ ಸಿತದಂತಂ ಲಸನ್ಮಂದಯಾನಂ ।
ಸ್ಮರಕೇತುವ್ರಾತಮಕ್ಷಿಪ್ರತತಿಯುರಗವೇಣೀಸಮೂಹಂಗಳಾಗಳ್
ತರುಣೀಸಂದೋಹವೊಂಬತ್ತು ಗರವೆ ಮುದದಿಂ ಬಂದವೋಲೊಪ್ಪುತಿರ್ದಳ್ ॥ ೪೩

---

1 ಮಂಗಳದ್ರವ್ಯ ಚಯಮಂ. 2 ಮಂಗಳಾಭರಣಮಂ ಪಿಡಿ.

ವ॥ ಇಂತತಿಸಂಭ್ರಮದಿಂದಿರ್ಪ ವಿವಾಹಮಂಟಪಮಂ ದೇವಿಯರ್ಕಂಡು ಸಂತಸಂಬಟ್ಟು ಸಪ್ತಮಾತೃಕೆಯರಂ ಷಟ್ಕೃತ್ತಿಕೆಯರಂ ಸಪ್ತಸ್ತ್ರೀಯರ್ಮುಖ್ಯವಾದ ಸುವಾಸಿನಿಯರಂ ಬರಿಸಿ ಭದ್ರಕಾಳಿಯಂ ಸಿಂಗರಿಸರ್ವೇಳ್ಕುಮೆಂದು ನಿರವಿಸೆ,

ಗಂಗಾಂಬುವಿನೊಳ್ ಘುಸೃಣರ
ಸಂಗಳನುರುಮೃಗಮದಂಗಳಂ ಕೂಡುತ್ತುಂ ।
ಮಂಗಳಮಜ್ಜನಮಂ ನರೆ
ದಿಂಗಳಮೊಗದಂಬುಜಾಕ್ಷಿಗೊಡರಿಸಿದರವರ್ ॥ ೪೪

ಮಿರುಪ ಕುಸುಮಾಯುಧಕೆ ಪೊ
ನ್ನೊರೆಯಂ [1] ಸೇರಿಸುವ ತೆರದೆ ಪೊಂಬಣ್ಣದ ಪೊ ।
ಚ್ಚರುವಳಿಯನುಡಿಸಿದರ್ಕಿರು
[2] ವೆರೆನೊಸಲಂಗನೆಗೆ ಕೋವಿದೆಯರತಿಮುದದಿಂ ॥ ೪೫

ಮಂಗ'ಪದಮಂ ಪಾಡುತೆ
ಮಂಗಳಮಹಿಮಾಬ್ಧಿವೀರಭದ್ರನ ವಧುವಂ ।
[3] ಮಂಗಳಮಹಕ್ಕೆಸತಿಯು
ರ್ಮಂಗಳಸದನಕ್ಕೆ ತಂಧರತಿಸಂಭ್ರಮದಿಂ ॥ ೪೬

ಪೊಸಮುತ್ತಿನವಸೆಯೊಳ್ಸಂ
ಜಿಸುತೊಪ್ಪುವ ರನ್ನವರೆಯೊಳಿರಿಸುತ್ತವಳಂ ।
ಸಸಿಮೊಗದಂಗನೆಯರ್ಕ
ಳ್ಪಸದನಮಂ ಮಾಳ್ಪೊಡಾಗಳುದ್ಯೋಗಿಸಿದರ್ ॥ ೪೭

ಕನಕದ ಪೊಸಪುತ್ತಳಿಗುರೆ
ಮನಸಂದೊಳ್ಬಣ್ಣವಿಡುವ ತೆರದಿಂದಾಗಳ್ ।
ವನಿತೆಗೆ ಕಾಶ್ಮೀರರಸಾ
ದ್ಯನುಲೇಪನಮಂ ಸಮಂತು ರಚಿಸಿದರಾಗಳ್ ॥ ೪೮

ಸಸಿವದನೆಯು ಸೋರ್ಮುಡಿಯಂ
ಪೊಸಸಂಪಗೆಯರಲ್ಗಳಿಂದೆ ಸಿಂಗರಿಸಲೊಡಂ ।

---

1 ಸೇವಿಸುವ 2 ವೆರೆನೊಸಲಂಗಳನಗೆ ಕೋವಿದೆ . . . . . .
3 ಮಂಗಳೋತ್ಸವಕೆ ಸತಿಯು.

ಅಸಿತಾಭ್ರದಲ್ಲಿ ಮಿಗೆ ರಂ
ಜಿಸುವೆಳೆಮಿಂಚೊಪ್ಪುವಂತೆ ಸೊಗಸಿದುದಾಗಳ್ ॥ ೪೯

ದಕ್ಷಂಗಲ್ಲದೆ[1] ತನ್ನಿಟಿ
ಲಾಕ್ಷಿಯನುಂತಿರದೆ[2] ತೆರೆಯನಿವನೆಂದದಕುರೆ ।
ಲಕ್ಷಿಸಿದ ಮುದ್ರೆಯೆನೆ ಕಂ
ಜಾಕ್ಷಿಯ ನುಣ್ಣೊಸಲತಿಲಕಮೆಸೆದತ್ತಾಗಳ್ ॥ ೫೦

ಮೃಡವೀರಭದ್ರನೆಂಬೀ
ಕಡವರಮಂ ಕಾಣ್ಬುದಕ್ಕೆ ಕರ್ಪಿಕ್ಕುವವೋಲ್ ।
[3] ಮುಡಿಯಸುರ್ಭದ್ರಕಾಳಿಯು
[4] ನಿಡುಗಣ್ಗಳ್ಗೆಯ್ದೆ ಕರ್ಪನಚ್ಚಿದರೊಲವಿಂ ॥ ೫೧

ವೀರಭದ್ರನ ಮನೋರಥ
ಕೋರಂತುರೆ ಸಮೆದ ರನ್ನಗಾಲಿಗಳೆಂಬಂ ।
ತಾರಮಣಿಯ ತಾಟಂಕಂ
ರಾರಾಜಿಸುತಿರ್ದುದೆಯ್ದೆ ಮಣಿಮಯರುಚಿಯಿಂ ॥ ೫೨

ತರುಣಿಯ ನುಣ್ಗಲ್ಲಮವ
ರ್ಬರೆದು ವಿರಾಜಿಸುವ ಮಕರಿಕಾಪತ್ರದೆ ಸಿಂ ।
ಗರವಾಂತುದು ವೀರಂ ಪುರ
ಹರನೆಂಬಂ ಬರೆದ ಶಾಸನಂಬೋಲ್ಸತತಂ ॥ ೫೩

ಚಾಂಪೇಯದಗ್ರದೊಳ್ಕ
ಣ್ಗಿಂಪೀವುತ್ತೊಪ್ಪುವಂಬುಕಣವೆಂಬಿನೆಗಂ ।
ಚಂಪಕೋದ್ಗಮಸುಗಂಧಿಯ
ಲಂಪಿಂ ತಾಳ್ದಿರ್ದ ಮೂಕುತಿಯ ಮುತ್ತೆಸೆಗುಂ ॥ ೫೪

ಜನಿಸಿದುದೊಂದೆಡೆ ಪಲವುಂ
ದಿನಮಗಲ್ದು ಬಳಿಕ್ಕೆ[5] ಕಂಡೆವೆಂದೆನುತುಂ ನೆ ।
ಟ್ಟನೆ[6] ಶಂಖಮನಪ್ಪಿದ ಮು
ತ್ತಿನಚಯಮೆನೆ ಕೊರಳಹಾರಮೆಸೆದತ್ತವಳಾ ॥ ೫೫

---

1 ನಿನ್ನಿಟಿ. 2 ತೆರೆಯನಿವಂದದೆಕುರೆ. 3 ಮುಡಿಯರ್ಭದ್ರಕಾಳಿಯ.
4 ನಿಡುಗಣ್ಗೆಯ್ದೆ. 5 ಕಂಡೆ ಎಂದೆನುತುಂ. 6 ಶಂಬರನಪ್ಪಿದ.

ಬಾವನ್ನ ಶಾಖೆಯುಂ ಬಿಡ
ದಾವರಿಸುತ್ತೆಯ್ದೆ ಕಣ್ಗೆ ಸೊಗಸುತ್ತಿರ್ಪೆಳೆ ।
ಪಾವಿನವೋಲ್ ರ್ಲಂಜಿಸಿದುದು
ಥಾವಕಿ ತಾಳ್ದಿರ್ದ ಬಾಹುವಲಯಮದಾಗಳ್ ॥ ೫೬

ಕರಸರಸಿರುಹದ ಮಧುವಂ
ಬರೆದಿರ್ದಂದಲ್ಲಿ ಮೆಯ್ಮರೆದು ಬಳಸಿದ ಮಧು ।
ಕರಸಂದೋಹವೆನಲ್ಕಾ
ತರುಣಿಯ ಮುಂಗೈಯ ಪಚ್ಚೆಕಡಗಮದೆಸೆಗುಂ ॥ ೫೭

ಪಾಣಿಗ್ರಹದೊಳ್ನಿನ್ನಯ
ಪಾಣಿಯೆ ಮೇಲಾಗಿ ತೋರ್ಪುದೆಂದರಿಪುವವೊರ್ ।
ಮಾಣಿಕದುಂಗುರವಂ ನೆರೆ
ಜಾಣೆಯುರಂದವಳ ಚೆಲ್ವಕೈವೆರಲ್ಗಿಟ್ಟರ್ ೫೮

ಶ್ರೀಕರಲಾವಣ್ಯಾಬ್ಧಿಗೆ
ಕೋಕನದಾಸನನೊರಲ್ದು ಕಟ್ಟಿದ ನವರ ।
ತ್ನಾಕಲಿತಸೇತುವೆಂಬಂ
ತಾಕೆಗೆ ಕಟಿಸೂತ್ರಮೆಯ್ದೆ ಕಣ್ಗೊಳಿಸಿರ್ಕುಂ ॥ ೫೯

ಪತಿಗಪರಾಧಂ ದಕ್ಷ
ಕ್ರತುವಿಂ ಮುಂದಪ್ಪುದೆಂತದಂ ಸ್ಮರಿಪುದೆಂ ।
ದತಿಶಯದಿಂ ಕಾಲ್ವಿಡಿದುದು
ತತಿಯೆಂಬಂತವಳಮುತ್ತಿನಂದುಗೆಯೆಸೆಗುಂ ॥ ೬೦

ತರಳೆಯ ಚರಣಾಂಗುಲಿಗ
ಳ್ಗರಿವಿಂದಾಕ್ಷಿಯರಮರ್ಚಿದುರುಮುದ್ರಿಕೆಗಳ್ ।
ಪರಿಣಯದೊಳ್ವೀರಂಗವು
ಕರದಾಕಲ್ಪಂಗಳಾದುವಚ್ಚರಿಯಲ್ತೆ ॥ ೬೧

ಪಚ್ಚಂಗಳ್ಗೀಸತಿಯೊಳ್
ವಚ್ಚಂ ತಾನಾಗಿ ತೋರ್ದಳಲ್ಲದೆ ಬಳಿಕಾ ।
ಪಚ್ಚಂಗಳಿವಳ್ಪಚ್ಚಂ
ಪಚ್ಚಂ ತಾವಾದುದಿಲ್ಲದೇನಚ್ಚರಿಯೋ ॥ ೬೨

ವ॥ ಇತ್ತಲವರೀಪ್ರಕಾರದಿಂ ಭದ್ರಕಾಳಿಯುಂ ಸಿಂಗರಿಸುತ್ತಿರ್ಪಿನಮತ್ತಲ್ವಿಶ್ವನಾಥನನುಜ್ಞೆಯಿಂ ಮಹಾಸೇನಗಣಾಧಿಪತಿಗಳ್ವೀರಭದ್ರಂಗೆ ಪ್ರಸಾಧನಮಂ ಕೈಗೊಳಿಸಲಾತನೊಪ್ಪಿರ್ದನದೆಂತೆಂದೊಡೆ,

ಮುತ್ತಿನ ಬಾಸಿಗಂ ನೆಗಳ್ದ ಮುತ್ತಿನ ಚೌಕಳಿ ಮುತ್ತಿನೊಚ್ಚರಂ
ಮುತ್ತಿನ ಕಂಕಣಂ ಮಿಸುಪ ಮುತ್ತಿನ ಪಂಚಸರಂ ಪೊದಳ್ದ ಚಿ ।
ನ್ಮುತ್ತಿನ ತೋಳಬಂದಿಗಳನಂದೆಸೆದಂ ಶರದಭ್ರಮಾವಗಂ
[1] ಮುತ್ತಿ ವಿರಾಜಿಸಿರ್ದ ನವನೀಲನಗಂಬೊಲುಮೇಶನಾತ್ಮಜಂ ॥ ೬೩

ಪೀತಾಂಬರಾಂಗದಿಂ ವಿ
ಖ್ಯಾತಂಬೆತ್ತಿರ್ಪನಂತಭೂಷಣದಿಂದೆ ವಿ ।
ಭೂತಿಯನೆಲ್ಲಾಗಳ್ಬಳಿ
ಕಾತಂ ಭೂತೇಶನಂತೆ ಕಣ್ಗೆಸೆದಿರ್ದಂ ॥ ೬೪

ಕಮಲಾಲಂಕೃತನಾಗಿರು
ತೆ ಮಹಾಲಕ್ಷ್ಮೀಶನಂತೆ ಚತುರಾನನನಾ ।
ಗಿ ಮಹಾಪುರುಷಂ ಭಾವಿಸೆ
ಕಮಲಾಸನನಂತೆ ಕಣ್ಗೆವಂದನದಾಗಳ್ ॥ ೬೫

ಸಕಲಾಧಿಷ್ಠಿತನಾಗಿ ಸಿ
ತಕರಂ ಪೂರ್ಣೇಂದುವೋಲ್ವಿರಾಜಿಸುತುಂ ಚೋ ।
ದ್ಯಕೆಪಕ್ಕಾದಂ ವೀರಂ
ಸುಕರಜಗಚ್ಚಕ್ಷುವೆನಿಸಿ ಸೊಗಸೀವುತ್ತುಂ ॥ ೬೬

ವ॥ ಇಂತಪ್ಪ ವೀರಭದ್ರಂ ವಿವಾಹಮುಹೂರ್ತವೇಳ್ತಿರ್ಪ ಕಾಲದೊಳ್,

ಮಾರಾರಿಗೆ ನಮಿಸುತ್ತುಂ
ಗೌರಿಯಪಾದಾಂಬುಜಕ್ಕೆ ವಿನಮಿತನಾಗು ।
ತ್ತಾರಿಸಿಗಳ ಪರಕೆಯುನವ
ಧಾರಿಸುತಾನಂದದೇಳ್ಗೆಯಿಂ ಪೊರಮಟ್ಟಂ ॥ ೬೭

ಐರಾವತವನಡರ್ದುರು
ಭೇರಿಧ್ವನಿಶಂಖನಿಸ್ವನಂ ಕಹಳೆಗಳ ಮಃ ।

1 ಮುತ್ತಿರಿರಾಜಿಸಿದ.

ಹಾರಾವಮದೆಣ್ದಿಸೆಯುಂ
ಪೂರಿಸಲಾಸಮಯದಲ್ಲಿ ವೀರಂ ಮುದದಿಂ ॥ ೭೮

ಹಿಂದಂ ಬೆಳ್ಗೊಡೆವಿಡಿದುಂ
ಚಂದಂ ಚಾಮರಯುಗಂಗಳಂ ಢಾಳಿಸುತುಂ ।
ಅಂದಾತನನೋಲೈಸುತೆ
ಬಂದರ್ಸಂತೋಷರಸದೊಳೋಲಾಡುತ್ತುಂ ॥ ೭೯

ಅಗಣಿತರುದ್ರಗಣಂ ಪ್ರಮ
ಥಗಣಂ ಭೃಂಗೀಶನಂದಿಮಾಕಾಳಮುರ್ಖಂ ।
ದಗಲದೆ ಬರುತಿರ್ದರ್ಸರ್ಕಂ
ದಗಣೇಶ್ವರರೊಡನೆ ವೀರನಂ ನೋಡುತ್ತುಂ ॥ ೮೦

ದೆಸೆಯಾಣ್ಮರ್ನಾನಾಸುರ
ವಿಸರಂ ಬ್ರಹ್ಮಾಚ್ಯುತರ್ಕಳೆರಡುಂ ಮೆಯ್ಯೊ ।
ಳ್ಬಿಸುಗಣ್ಣನನೋಲಗಿಸು
ತ್ತೊಸಗೆಗೆ ನಡೆತಂದರಧಿಕಸಂಭ್ರಮದಿಂದಂ ॥ ೮೧

ಕಟ್ಟಿದ ಪೊಂಬಟ್ಟೆಯು ಮೇ
ಲ್ಕಟ್ಟುಗಳೊಪ್ಪಿದುವು ವೀರಭದ್ರನ ಸಿರಿಯಂ ।
ನಿಟ್ಟಿಸದೆಲರ್ವಟ್ಟೆಗುರದೆ
ಪುಟ್ಟಿರ್ದನುರಾಗವೆಂಬಿನಂ ಸೊಗಸುತ್ತುಂ ॥ ೮೨

ಎಡೆವಿಡದೆ ಪಿಡಿದ ಕೇತುಗ
ಳಡರ್ದೊಪ್ಪಿದುವಲ್ಲಿ ಖಚರರಂ ಮದುವೆಗೆ ಕೈ ।
ವಿಡಿದಿಳುಪಲ್ಬೊಮಾಸಿನಿ
ಬಿಡದೆತ್ತಿದ ಕೈಗಳೆಂಬಿನಂ ಸೊಗಸುತ್ತುಂ ॥ ೮೩

ವ॥ ಮತ್ತಮಲ್ಲಿ,

ಸುರಧನುವನಲ್ಲಿ ತಾಂ ಕಂ
ದಿರಿಸಿದರೆಂಬಂತೆ ನೀಲದಿಂ ಮಾಣಿಕದಿಂ ।
ಮರಕತದಿಂದಂ ರಚಿಸಿದ
ಸುರುಚಿರಮಾಗಿರ್ಪ ತೋರಣಂಗಳ್ತೋರ್ಕುಂ ॥ ೮೪

ವ॥ ಇಂತು ಪೊಳಲಸಿಂಗರವಂ ನೋಡುತ್ತುಂ ಬಪರ್ಗಗಳ್,

ನಡೆಮಡಿಗಳ ಪಾಸುತ್ತುಂ
ಸಡಗರದಿಂ ಶೋಭನಂಗಳಂ ಪಾಡುತ್ತುಂ
ಬಿಡದಾರತಿಗಳನೆತ್ತುತ್ತೆ
ಮಡದಿಯರಿದಿರ್ಗೊಂಡರಲ್ಲಿ ವಿಶ್ವೇಶ್ವರನಂ ॥ ೭೫

ಆರತಿ ಪಲವುಂ ತನುವಿಡಿ
ದಾರತಿಗಳನೆತ್ತುವಂತೆ ರತ್ನಂಕೆತ್ತಿಸಿ ।
ದಾರತಿಗಳನತಿಶಯದಿಂ
ದಾರತಿಪತಿವೈರಿಗೆತ್ತಿದರ್ಧಾವಕಿಯರ್ ॥ ೭೬

ಬಾಜಿಪ ಬದ್ದವಣದ ದನಿ
ಮೂಜಗಮಂ ತುಂಬೆ ದಿವ್ಯರತ್ನೋತ್ಕರದಿಂ ।
ರಾಜಿಪ ವಿವಾಹಗೇಹಮ
ನೋಜೆಯಿನೇೞ್ತಂದು ಪೊಕ್ಕನಾವೀರೇಶಂ ॥ ೭೭

ನಂದೀಶಂ ಕೈಗೊಡಲಾ
ಸ್ಕಂದಂ ವಿಘ್ನೇಶ್ವರಂ ಬಳಿಕ್ಕೆಡಬಲದೊಳ್ ।
ನಿಂದಿರ್ಪನ್ನಂ ವೀರಂ
ಗಂದಾಗಳ್ಕಂಡಪಡವನುರೆ ಪಿಡಿದರವರ್ ॥ ೭೮

ಏಗಂ ನವಗ್ರಹಂಗ
ಳ್ಬೇಗದಿನೇಕಾದಶಸ್ಥಲಕ್ಕೇೞ್ತಂದನು ।
ರಾಗದೊಳಿರ್ದರ್ಲಗ್ಗಿಗ
ರಾಗಳ್ಪೊಂದೆರೆಯನೋಸರಿಸಿದರ್ಮುಪದಿಂ ॥ ೭೯

ಮೊಟ್ಟಕ್ಕಿಯ ಮೇಲೊಪ್ಪುವ
ನಿಟ್ಟಯ್ಟಯ ಕೈಯನಿರದೆ ವೀರನ ಕೈಯೊ ।
ಳ್ಕಟ್ಟನಿರಿಸುತ್ತ ಮುದವಳ
ವಟ್ಟಾಗಳ್ಪೊನ್ನಗಾಡಿಯಂ ಪಿಡಿವುತ್ತುಂ ॥ ೮೦

ಧಾರೆಯನೆರೆದಂ ಮುದದಿಂ
ವಾರಿಜಭವನಾಮುಹೂರ್ತದೊಳ್ಮದವರ್ಕಳ ।

ಕೂರೆಂಬ ಲತೆಯ ಬೇರ್ಗ
ಳ್ಗೀರಂತರೆವಂತೆ ನೀರನಂದಾಪದದೊಳ್ ॥ ೬೧

ಮೊರೆದುವು ಸುರದುಂದುಭಿಗ
ಳ್ಸುರಿದುವು ಪೂಮಳೆಗಳಾಗಸದಿನೆಲ್ಲಾಗ ।
ಳ್ಮರೆದಿರ್ದ ಜನಕ್ಕೆಲ್ಲಂ
ಹರಿಸಗಡರ್ಕ್ಕೇರೆದಪ್ಪಿ ಪರಿದತ್ತಾಗಳ್ ॥ ೬೨

ಪೊಸಮುತ್ತಿನಿಂದೆ ರಂಜಿಪ
ಪಸೆಯೊಳ್ಕುಳ್ಳಿರಿಸಿ ಬೂವವಿಟ್ಟಾದರದಿಂ ।
ಮಿಸುಗುವ ನೀರಾಜನಮಂ
ಬಿಸಜಾಕ್ಷಿಯರವರ್ಗಳಡಿಗೆ ನೀರಾಜಿಸಿದರ್ ॥ ೬೩

ವ॥ ಮಲ್ಲಿಕಾಮಾಲಾ,

ಎಲ್ಲರುದ್ರಸಮೂಹದಿಂ ಗಣವೃಂದದಿಂ ಸುರರಾಜಿಯಿಂ
ದಲ್ಲಿ ವೀರನ ಪಾದಪದ್ಮಕೆ ಕಾಣ್ಕೆಯಂ ಮುದದಿಂದುಮಾ ।
ವಲ್ಲಭಂ ಕೊಡಿಸುತ್ತೆಯಾಮುದವರ್ಗಳುನ್ನತತೇಜಮಂ
ನಿಲ್ಲದೀಕ್ಷಿಸಿ ಹಿಗ್ಗುಗ್ಗತುಂ ಪೊರೆಯೇರುತುಂ ಪೊದಳ್ದೊಪ್ಪಿದಂ ॥ ೬೪

ಪಿರಿದುಂ ಸಂತಸದಿಂದೆ ನಾಗಬಲಿಯಂ ನಾಲ್ಕುಂ ದಿನಂ ಬರ್ಪಿನಂ
ಪರಮಾನಂದದೊಳಂದು ತೀರ್ಚಿ ಮೃಗಘೂಕಾಶ್ಮೀರನೀರಂಗಳಿಂ
ದಿರದೊಲ್ದೋಕುಳಿಯಾಡಿಸುತ್ತೆ ಬಳಿಕಂ ದಿವ್ಯಾನ್ನದಿಂದಂದು ಬಂ
ದರನೆಲ್ಲಂ ತಣಿವುತ್ತೆ ವಿಶ್ವಪತಿಯೊಪ್ಪಿರ್ದಂ ಮನೋರಾಗದಿಂ ॥ ೬೫

ಅವರವರ ಸಲಗೆ ಸಾಮಿ
ಪ್ಯವನರಿತವರವರ ತಾರತಮ್ಯವನರಿದು ।
ತ್ಸವದಿಂದಂ ಬೀಳ್ಕೊಟ್ಟಂ
ದಿವಿಜಾದಿಗಳಂ ಬಳಿಕ್ಕೆ ಗುರುವಿಶ್ವೇಶಂ ॥ ೬೬

1 ವೀರಂಗೆ ಭದ್ರಕಾಳಿಗೆ
ಸೇರಿಸುತತಿಸುಖದ ಪೆರ್ಚುಗೆಯನೊಲವಿಂದಂ ।
ಮಾರಹರಂ ಪುರಮಥನಂ
ಗೌರೀಶಂ ವಿಶ್ವನಾಥನೊಪ್ಪುತ್ತಿರ್ದಂ ॥ ೬೭

1 ವೀರಭದ್ರಂಗೆ ಕಾಳಿಗೆ.

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರಮಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಲಾಗ್ರದೊಳ್ ॥ ೮೮

ಮುಳಿಯಲಗೇಂದ್ರಜಾತೆ ತಲೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಘ್ರಿಗೊಲ್ವಿನಿಂ ।
ತುಳಿಲನೊಡರ್ಚಲಾಲ್ಪು ಮೊಗದೊಳ್ಮೊಗವಿಕ್ಕುತೆ ಸಂತವಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಹೀಜಗಮಂ ಗುರುವಿಶ್ವವಲ್ಲಭಾ ॥ ೮೯

ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬಿರೆದ ರಜಮನಿರದೆ ಸವಿದು ತಣಿದು ತನ್ನ ಲೀಲೆಯಿಂ ।
ಪೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮೀಗಭೀಷ್ಟಮಂ ॥ ೯೦

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತಪಾದ
ಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದಮಧು
ಕರಾಯಮಾಣ ಶ್ರೀಕಂಠವಂಶಾರ್ಣವಪರಿಪೂರ್ಣಚಂದ್ರನೆನಿಪ ಸತ್ಕ
ವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ ಶ್ರೀವೀರ
ಭದ್ರವಿಜಯಮಹಾಪ್ರಬಂಧದೊಳ್ ಭದ್ರಕಾಳಿಯು
ತ್ಪತ್ತಿ ತತ್ಪಾದಾದಿಕೇಶಾಂತವರ್ಣನಂ ವೀರ
ಭದ್ರವಿವಾಹವರ್ಣನಂ
ನವಮಾಶ್ವಾಸಂ
ಸಂಪೂರ್ಣಂ

———

# ದಶಮಾಶ್ವಾಸಂ

ಶಿವೆಯ ನಗೆಮೊಗದ ಸೌಂದ
ರ್ಯವನಿರದೀಕ್ಷಿಪೊಡೆ ವಿಶ್ವತಶ್ಚಕ್ಷುವೆನಿಸಿ ।
1 ಭುವನದೊಳೆಕೀರ್ತಿವೆತ್ತೊ
ಪ್ಪುವ ಪಶ ಪತಿ ವಿಶ್ವನಾಥ ರಕ್ಷಿಪುದೆಮ್ಮಂ ॥

ವೀರನ ಲೀಲೆಯಂ ನೆಗಳ್ದ ವೀರನ ಚೆಲ್ವಿನ ರೀತಿಯೇಳ್ಗೆಯಂ
ವೀರನುದಾರಮಂ ಬಳಿಕ ವೀರನ ತೇಜದದೊಂದು ಪೆರ್ಮೆಯಂ ।
ವೀರನ ಕೀರ್ತಿಯಂ ಲಲಿತವೀರನ ಸೊಲ್ವಿಡಿದಿರ್ಪ ಗಾನಮಂ
ಮಾರಹರಂ ನಿರೀಕ್ಷಿಸುತೆ ಸಂತಸದಿಂದಿರುತಿರ್ದನಾವಗಂ ॥ ೧

ವೀರನ ಮಾತೆ ಮಾತೆಯೆನಿಸಿರ್ಪುದು ಸರ್ವಜಗಕ್ಕೆ ಭಾವಿಸ
ಲ್ವೀರನ ಮಾರ್ಗಮೇ ಸುಗತಿಗಂತದು ಮಾರ್ಗಮೆನಿಪ್ಪುದಾವಗಂ
ವೀರನ ಬಿನ್ನಣಂ ಧರೆಗೆ ಬಿನ್ನಣಮಾಗಿ ವಿರಾಜಿಕುಂ ವಲಂ
ವೀರನ ಭಾವಮೆಂಬುದದು ಲೋಕಕೆ ಜೀವನಮಾಗಿ ರಂಜಿಕುಂ ॥ ೨

ವ॥ ಇಂತಪ್ಪ ವೀರಭದ್ರನಂ ಲಾಲಸುತ್ತೆ ವಿಶ್ವನಾಥನಿರುತ್ತೊಂದು ದಿವಸಂಪೇರೋಲಗದೊಳ್ಭದ್ರಾಸನಾಸೀನನಾಗಿರುತಿರ್ಪಿನಂ ನಾರದನೇಳ್ತಂದು ಸಾಷ್ಟಾಂಗಪ್ರಣತನಾಗಿ ಕರಕಮಲಮಂ ಮುಗಿದು ನಿಂದು,

ಪಗಲೊಳ್ತಿಳಿಜೊನ್ನಮನಿಂ
ದುಗುಳ್ದಪುದೀ ಚಂದ್ರಬಿಂಬಮಿದು ಚಿತ್ರಮೆನ ॥
ಲ್ನಗೆಮೊಗದಿಂ ಪಲ್ಗದಿರ್ಗ
ಳ್ಮಿಗೆ ಸೂಸುತ್ತಿರ್ಪಿನಂ ಮುನೀಶಂ ನುಡಿದಂ ॥ ೪

ವ॥ ದೇವಾ ದಕ್ಷವೆಸರಿಂದಿರ್ಪ ಮೂರ್ಖನೋರ್ವಂ ನೀಲಗಿರಿಯಿಂ ಪಡುವಲಾಗಿ ತೋರ್ಪ ಹರಿದ್ವಾರಕ್ಕೆ ಸಮೀಪವಾದ ಹಿಮವತ್ಪರ್ವತದ ತಪ್ಪಲೊಳ್ಗಂಗಾದ್ವಾರದ ಸಮೀಪದಲ್ಲಿ 2 ಕನಖಲವೆಂಬ ಪೆಸರ್ವೆತ್ತ ಪುರಮಿರ್ಪುದಲ್ಲಿ 3 ಬೃಹಸ್ಪತಿಸವ

1 ಭುವನದೊಳ್ಕೀರ್ತಿವೆತ್ತೊ. 2 ಬನಕಲ. 3 ಬೃಹಸ್ಪತಿಸಬು.

ವೆಂಬ ನಾಮುವಂ ತಾಳ್ದಶ್ವಮೇಧಯಾಗಮನುಪದ್ರಷ್ಟೃವೆಂಬ ಯಜ್ಞರಕ್ಷಕನನು ಮತದಿಂ ಮಾಡುತ್ತಿರ್ದನಾಯಜ್ಞಕ್ಕನುಕೂಲವಾಗಿ ಸಮಸ್ತದೇವರ್ಕಳುಂ ಋಷಿಗಳುಂ ಬಂದಿರ್ದಪರವರಾರೆಂದೊಡೆ,

ಹರಿಯುಂ ವಾಸವನುಂ ಕೃಶಾನುಯುಮರುಂ ನ್ಯೆರುತ್ಯನುಂ 1 ಸಾಗರೇ
ಶ್ವರನುಂ ವಾಯುಮನುಷ್ಯಧರ್ಮಪಶುಪರ್ಮುಂತಾದ ದೇವರ್ಕಳುಂ ।
ವರಭೃಗ್ವತ್ರಿವಸಿಷ್ಠಮುಖ್ಯಮುನಿಗಳ್ವೆಂಪಿಂದೆ ತಂತಮ್ಮ ಪೆಂ
ಡಿರನಂದೊರ್ಳ್ದೊಡಗೊಂಡು ಬಂದು ತೊಡಗುತ್ತಿರ್ದಪ್ಪರಾಯಜ್ಞಮಂ ॥ ೫

ಭಗನೆಂಬಾದಿತ್ಯನುಂ ಪೂಷನೆನಿಸುವಿನನುಂ ಸೋರ್ಕಿನಿಂ ಕೂಳ್ಗೆ ಬಂದಾ
ವಗಮಿರ್ಪರ್ದೇವಸಂತತ್ಯದಿತಿಪಿತೃಗಣಂ ವಾಣಿನಾಸತ್ಯರೇಗಂ ।
ಸೊಗಸಂಸೂಸುತ್ತಮೇಕಾದಶರೆನಿಸುವ ರುದ್ರರ್ಕಳುಂ ನಾಡೆ ತಾವಿ
ಲ್ಲಗೆ ಬಂದಿರ್ದಾಕ್ರತೂದ್ಯೋಗಕೆ ಮೊದಲಿಗರಾಗಿರ್ದಪರ್ಪೆಂಪಿನಿಂದಂ ॥ ೬

ವ॥ ಆಸಮಯದೊಳ್,

ತಾರಕದಾನವೇಂದ್ರನ ಮಹಾಬಲವಂ ಸಲೆ ಸಾರ್ದು ರಂಜಿಪಾ
ಕೋರನವೋಲನೂನ ಘನವಾರಿಧಿಗಂದು ಕನಲ್ದು ಬಂದುಮಾ ।
ಧೀರನಗಸ್ತ್ಯನಂತೆ ಖಳದಕ್ಷನೆನಿಪ್ಪನ ಯಜ್ಞಶಾಲೆಯಂ
ಸೇರಿದನೆಯ್ದೆ ಜನ್ನದ ಜನಂ ಜರಿಯಲ್ಕೆ ದಧೀಚಿತಾಪಸಂ ॥ ೭

ವ॥ ಬಂದೊಳಪೊಕ್ಕಾಸಭೆಯೊಳ್ಮಹಾದೇವಾ ನಿಮ್ಮ ಕಾಣದೆ,

ಶಿವನಂ ಕಾಣೆನನಂತವೇದವರಸುತ್ತಿಪ್ಪಾತನಂ ಕಾಣೆನಾಂ
ಭವನಂ ಕಾಣೆ ನಗಾತ್ಮಜಾಧಿಪತಿಯಂ ಕಾಣೆಂ ಲಸನ್ಮೂರ್ತಿಶಂ ।
ಭವ ನಾಂ ಕಾಣೆನೊರಲ್ದು ಯಜ್ಞಹವಿಯಂ ಕೈಯಿಕ್ಕಿ ಮುಂದತ್ತನು
ಣ್ಣವನಂ ಕಾಣೆನೆನುತ್ತೆ ತನ್ಮುನಿವರಂ ತೋರೆಂದನಾದಕ್ಷನೊಳ್ ॥ ೮

ಉಸಿರಿಲ್ಲದೊಡಲ್ಬಗೆವೊಡೆ
ಸಸಿಯಿಲ್ಲದ ರಾತ್ರಿ ಗಂಡನಿಲ್ಲದ ಪೆಣ್ಕ
ಣ್ಗೆಸೆವಳೆ ನಿನ್ನೀಯಾಗಂ
ಸಸಿಧರನಿಲ್ಲದೆ ಸಮಂತು ತಾನೊಪ್ಪುಗುಮೋ ॥ ೯

ನನ್ನಿವೆರೆದಿರದ ಪೆಲ್ನುಡಿ
ಬಿನ್ನಣವೊಡಗೂಡದಿರ್ಪ ಪರಮುವಿರಾಗಂ ।

---

1 ನಗರೇ.

ಪನ್ನಗಭೂಷಣನಿಲ್ಲದ
ಜನ್ನಕ್ಕೆ ಜಯಂ ಧರಿತ್ರಿಯೊಳ್ಸಮನಿಪುದೇ ॥ ೧೮

ಪೂಜಾರ್ಹನನೊಲವಿಂದಂ
ಪೂಜಿಸದೆಯಪೂಜ್ಯರಪ್ಪರಂ ಧಾರಿಣಿಯೊಳ್ ।
ಪೂಜಿಸುವಾತಂ ಮಿಗೆ ಪಳೆ
ಗಾಜಂ ಪಿಡಿದಮರಮಣಿಯನೊಕ್ಕದನಕ್ಕುಂ ॥ ೧೧

ನಿಜಸತ್ಫಲವೀವೀಸುರ
ಕುಜಮಂ 1 ಬಿಟ್ಟೆಲವಕೆಯ್ದು ನೀರೆರೆವನವೋಲ್ ।
ತ್ರಿಜಗತ್ಪತಿಯನುಳಿದು ನಾ
ಕಜರಂ ಮನ್ನಿಸಿ ಬಯಲ್ಗೊರೆಯನೀಂಟುವರೇ ॥ ೧೨

ಪ್ರಾಜ್ಞಕೀರ್ತಿವೆನಿಸಿರ್ಪ ತಾಪಸಜನಂ ಕೆಯ್ವೊಕ್ಕ ತಂತಮ್ಮ ದಿ
ವ್ಯಜ್ಞಾನೇಕ್ಷಣದಿಂ ನಿರೀಕ್ಷಿಪಜನಂ ನಿರ್ಮಾಯನಂ ನಿತ್ಯನಂ ।
ಸುಜ್ಞಾನಾವೃತನಂ ತ್ರಿಲೋಕಪಿತನಂ ಶ್ರೀಮನ್ಮಹಾದೇವನಂ
ಯಜ್ಞಾರಂಭದೊಳಾತನಂ ಭಜಿಸು ಕೀರ್ತಿರ್ಬಾಳ್ವೆನೆಂದೆಂಬವರ್ ॥ ೧೩

ಪುರ್ವಿನೊಳಾವಗಂ ಬರಡನಳ್ಕರಿನಿಂ ಕರೆವುತ್ತೆ ನಚ್ಚುವೀ
ಪೆರ್ಮರುಳಂತೆಯೆನ್ನಲರ್ಗೆ ಯಾಗಸಹಸ್ರದ ಸತ್ಫಲಂಗಳಂ ।
ಬೀರ್ವವನಂ ಬಿಸುಟ್ಟು ಸುರವೃಂದಮನರ್ಚಿಸಿ ಕೆಟ್ಟೆ ನೀಂ ಬಳಿ
ಕ್ಕೊರ್ವನೆನಿಪ್ಪ ರುದ್ರನ ಪದಂಗಳನರ್ಚಿಸು ಬಾಳ್ವೆನೆಂಬೊಡಂ ॥ ೧೪

ವ॥ ಎಂದುಸಿರ್ದ ಮುನಿಪುಂಗವಂಗಾಕೂಳನಿಂತೆಂದಂ,

ಇಂದೊರ್ವ ರುದ್ರನಿರದೊಡೆ
ಕುಂದಪ್ಪುದೆ ಯಾಗಮಿತ್ತ ನೋಡು ಕರಂ ಪ ।
ನ್ನೊಂದೆನಿಸುವ ರುದ್ರರ್ಸಲೆ
ವಂದಿರ್ದಪರೆನ್ನ ಸಭೆಯೊಳೆಂದಂ ಮೂರ್ಖಂ ॥ ೧೫

ನೆಲಕೆಲ್ಲಂ ಮುನ್ನಾತಂ
ತಲೆಹೊರೆಯಾಗಿರ್ದವಂ ಬಳಿಕೆ ಮೂಲೋಕದ ।

. 1 ಬಿಟ್ಟೆಲರಕೆಯ್ದು.

ಕೊಲೆಯಂ ಪೊತ್ತಿರ್ದವನೀ
ಸ್ಥಲಕೇಂ ತಾಂ ಯೋಗ್ಯನೇ ಎನುತ್ತವನುಸಿರ್ದಂ ॥ ೧೬

ಜಡರೂಪಂ ಮಱುರೂರಂ
ಕಿಡಿಸಿದವಂ ನಿಗಮದೂರನಾಸಿರ್ದೈರ್ವಂ ।
ಪೊಡವಿಯೊಳವನಂ ನೀಂ ಪೆಸ
ರ್ವಿಡಿವರೆ ಕೇಳ್ಮುನಿಯ ನಿನಗೆ 1 ಮೆಳ್ಪಡೆಯುಂಟೇ ॥ ೧೭

ದೈಕಂತಿಂಬವನೆನ್ನ ಜನ್ನದ ಮಹಾನ್ನೈವೇದ್ಯಕೇನರ್ಹನೇ
ಯೇಕಾಕಿತ್ವದೊಳಿರ್ಪವಂ ಸುರಸಭಾವ್ಯೂಹಕ್ಕದೇಂ ಸಲ್ವನೇ ।
ಶ್ರೀಕಾಂತಂ ಮಿಗೆವಂದವಂ ಬಳಿಕೊರಲ್ದಾತಂಗೆ ಪೆಂಪಿಂದಮು
ಲ್ಲಾಕಾಲಂ ಸಲೆ ಶೂಲಗೀವಹವಿಯಂ ಪೇಳ್ವೆಂ ಮನೋರಾಗದಿಂ ॥ ೧೮

ವ॥ ಇಂತೆಂದು ಪೇಳ್ದಾ ಕ್ಷುದ್ರದಕ್ಷಂಗೆ ಮುನಿ ಮುನಿದುಸಿರ್ದನದೆಂತೆಂದೊಡೆ,

ವಾಸಿಯದೇಕೊ ದಕ್ಷ ಘನಮತ್ತಗಜಂ ಬಗೆದಂದುಕೊಳ್ವರು
ಗ್ರಾಸಮನುಂಡು ಜೀವವಿಡಿದೊಪ್ಪುವುದೇ ಮೃಗಧೂರ್ತಕಂ ವಲಂ ।
ವಾಸುಗಿ ತಾಳ್ದ ಧಾತ್ರಿಯನಣಂ ಪೊರಲಾರ್ಪುದೆ ಡುಂಡುಭಂ ಹರಿ
ದ್ವ್ಯಾಸನ ಬಾಯ್ತುತುತ್ತು ದನುಜಾರಿಗೆ ಪಥ್ಯಮದಾಗಿ ತೋರ್ಪುದೇ ॥ ೧೯

ವ॥ ಇಂತುಸಿರ್ದು ಶಾಪಂಗೊಟ್ಟನದೆಂತೆಂದೊಡೆ,

ನಿನ್ನಯ ಯಜ್ಞಕಿಂದೆ ಪಿರಿದಪ್ಪ ಭಯಂ ತಲೆದೋರ್ಕೆ ಸಂತತಂ
ಜನ್ನಮನೆಯ್ದೆ ರಕ್ಷಿಸುವೆನೆಂಬ ಖಳಂಗುರುಮಾರಿ ಬರ್ಕೆ ಕೇ ।
ಳ್ನಿನ್ನಯ ಜನ್ನದೋಗರಕೆ ಬಾಯೊರತರ್ಗೆ ಪಿಪತ್ತು ತೋರ್ಕೆಯಿಾ
ಜನ್ನಿಗನಪ್ಪವಂಗಿರದೆ ಸಾರ್ಗೆಯುಲುಂಬಲೆಯೆಂದನಾಕ್ಷಣಂ ॥ ೨೦

ಪರಮೇಶ್ವರ 2 ನಿಂದೆಯಿನಿಹ
ಪರಮುಂ ಬಿಟ್ಟಿರ್ಪುದಾರಿ ಭಾಪೆನುತುಂ ಮುನಿ ।
ವರನಾಗಳ್ ಶಪಿಸುತ್ತ
ಲ್ಲಿರದೆ ನಿಜಾಶ್ರಮಕೆ ತೆರಳ್ದನಂದಾಕ್ಷಣದೊಳ್ ॥ ೨೧

3 ದೇವನಗಸ್ತ್ಯನುಮಾಭೃಗು
ದೇವಂ ಗೌತಮವಸಿಷ್ಠರುಪಮನ್ಯು ಮಹಾ ।

---

1 ಮೆಳ್ಪಡಿಯೊಂಟೇ. 2 ನಿಂದೆಯಾಗಿಹ. 3 ದೇವನಗಸ್ಥ್ಯನಾಭೃಗು

ದೇವರ ನಿಂದಾಧ್ವರಮಿದು
ನಾವಿರೆವೆಂದೆನುತೆ ತೆರಳ್ದರಾಸ್ಥಳದಿಂದಂ ॥ ೨೨

ಓರೊರ್ವರ ಕೂಡೇಳ್ದ
ತ್ತೋರಂತಂಟೆಂಟುಸಾಸಿರಂ ಮುನಿನಿಕರಂ ।
ಚಾರುತರಾಧ್ವರಪಥವಂ
ಘೋರೆನೆ ತೊಲಗಿತ್ತದಾಗಳೇನೆಂದುಸಿರ್ವೆಂ ॥ ೨೩

ಮುಖದಧಿದೈವಂ ತಾನೆ ವಿ
ಮುಖವಾದತ್ತೆಂದು 1 ನುಡಿವುತಲ್ಲಿನ ಸಭೆಯಾ ।
ಮುಖಮದ ಕೆಟ್ಟಿತ್ತಾಗ
ಳ್ಮುಖಮಿಾತೆರದಿಂದ ಕೆಡುವುದೆಂದರಿಪುವವೋಲ್ ॥ ೨೪

ತರಳವೃತ್ತಂ॥ ಕೆಲಬರೀತನಸಂಗದಿಂ ನಮಗೀಗಳಪ್ಪುದಪಾಯುವೆಂ
ದುಲವುತಿರ್ದರದಲ್ಲಿ ಮತ್ತೆ ಕೆಲಂಬರೀತನ ಮೇಳದಿಂ ।
ತಲೆಗೆ ಬಂದುದಿದೆಂದು ಬೆರ್ಚಿ ಮಿಡುಂಕಿದರ್ಕೆಲರೀತನಿಂ
ವಿಲಯವಾದೆವೆನುತ್ತೆ ಕಣ್ಗಿಡುತಿರ್ದರಲ್ಲಿಯ ಸಾಧುಗಳ್ ॥ ೨೫

ಶಕುನಂ ಸಾಮಾನ್ಯವಾಗಿರ್ದುದನರಿತರಿತು 2 ಭ್ರಾತೃಗಳ್ಪೋಪೆವೆಂದೆಂ
ದು ಕರಂ ಬಾಯ್ಬಿಟ್ಟೊಡಂ ಮೇಣ್ಪಿರಿಯರೆನಿಸುವರ್ನೀತಿಯುಲ್ಲೆಂದೊಡಂ ಬಂ ।
ದು ಕದಂಬಂ ಗೋಳಿಡುತ್ತುಂ ಪಿಡಿದುರೆ ನಿಲಿಸಲ್ಮಿಕ್ಕವೆಂದೊರ್ವರೊರ್ವ
ರ್ಗಿಕಳಂಗೊಡಿರ್ದವೆಂದುಂ ನುಡಿವವಸರದೊಳ್ಪೂಷನಿಂತೆಂದುಪೇಳ್ದಂ ॥ ೨೬

ಮುನಿಗಳ್ಮುಂದರಿಯದೆ ಘೋಂ
ಕನೆ ಪೋದೊಡೆ ಚಿತಯೆ ಗಾಳಿಗೂಳರವರ್ಕೆ ।
ಮ್ಮನೆ ಕಾಲ್ಗೆಡುವುದುಚಿತಮುರೆ
ಜಿನುಗೇಕೆ ಬಳಿಕ್ಕೆ ನಿಮಗೆ ಭಯವೇಕೆಂದಂ ॥ ೨೭

ಕಿರಿದಾನುಂ ಪೊಳ್ತು ಚಿಂತಾರ್ಣವದೊಳದಿರುತಾಳ್ದಿರ್ದ ದೇವರ್ಕಳಂ ಕಂ
ಡರದಾಪೂಷಂ ನಗುತ್ತುಂ ಮೊದಲತಿಶಯದಿಂ ಬಂದುದೇ ಪೊಲ್ಲಮಿಂದ ।
ಳ್ಕರುಗೊಂಡೀಗಳ್ಬಳಿಕ್ಕಂ ತಿರುಗುವದದಕಿಂದಂ ಕರಂ ಪೊಲ್ಲಮೆಮ್ಮಂ
ಜರಚುತ್ತುಂ ಸಂತವಿಟ್ಟಂದವರ್ಗಳಕೊಲೆಗೆಂತೊಟ್ಟನೋಡುಟ್ಟನಾಗಳ್ ॥ ೨೮

1. ನುಡಿವುತಲ್ಲಿರ್ದಸಭೆಯ. 2 ಭ್ರಾತ್ನಗಳ್ಪೋಗವದೆಂ.

ನಿಲ್ಲಮಿದೇಕೆ ಪೋದಪಿರಿಮಾತ್ಮ ಜನಂ ತಲೆಗಾಯ್ದೊಡಂದು ಪೂ
ವಿಲ್ಲನನಿಕ್ಕಿ ಗೆಲ್ದೊಡಸುರಾಂಧಕನಂ ಮುಳಿಸಿಂದೆ ಕೊಂದೊಡೇಂ ।
ಬಲ್ಲಿದನಪ್ಪನೇ ರಣಕೆ ಬಂಟನೆ ಬಳ್ಳಡಿಯೆಂದು ಹಾಸ್ಯದಿಂ
ಸೊಲ್ಲಿಸಿದಂ ದುರಾತ್ಮಭಗನೆಂಬಿನನೆಂದುಸಿರ್ದಂ ಮುನೀಶ್ವರಂ ॥ ೨೯

ಚಿತ್ತವಿಸು ಜೀಯ ಎನುತಾ
ಬತ್ತು ಪಣವನೇನುಮುಳಿಯದಂದದೊಳಾಮುನಿ ।
ಪೋತ್ತಮನುಸುರರ್ ಶಂಭು ನ
ಗುತ್ತಾಗಳ್ವೀರಭದ್ರನಂ ನೋಡಲೊಡಂ ॥ ೩೦

ವ॥ ಅಗಳಭನವರುದ್ರನಪ್ಪ ವೀರಭದ್ರಂ ಕೋಪಾರೂಢನಾಗಿರ್ದನದೆಂತೆಂದೊಡೆ,

ಕುಣಿವ ಪೊದಳ್ದ ಮೀಸೆ ಮಿಸುಕುತ್ತಿಸೆದಿರ್ಪಧರಂ ಕನಲ್ಕೆವೆಂ
ಟಣಿಸಿದ ಮಾನಸಂ ಕಿಡಿಯನಂದುಗುಳ್ವಕ್ಷಿ ಕಲಂಕಿದಾಸ್ಯಮಂ ।
ತಣಿಯರ ಮಾನಿ ತಾಂ ಮಸೆವ ದಾಡೆಯಿನೊಪ್ಪುತೆ ವೀರಭದ್ರನಾ
ಕ್ಷಣದೊಳೆ ಭೈರವಾಕೃತಿಯನಾಂತೆಸೆದಿರ್ದನಿದೇಂ ವಿಚಿತ್ರಮೋ ॥ ೩೧

ಕಡೆಗಾಲದಲ್ಲಿ ಜಗಮಂ
ಸುಡುವ ಮಹಾಕಾಳರುದ್ರನೆಂದಂಬಿನೆಗಂ ।
ಕಡು ಮುನಿಸಿಂ ಖಡ್ಗಮನುರೆ
ಜಡಿವುತ್ತುಂ ವೀರಭದ್ರನೇಳ್ದನದಾಗಳ್ ॥[1] ೩೨

ವೀರನ ಚಿದ್ರದಲ್ಲೊಗೆದ ಮುನ್ನಿನ ಜೇರದ ಜೇರ್ಗೆ ನೀರದಾ
ಯಾರಿಸಿವಾಕ್ಯಮಲ್ಲಿ ಬೆಳೆದಾಸ್ಯದೊಳಂದು ತಳಿರ್ತುದು ಪೂತಮೋ ।
ಲಾರಮಣೀಯಮಾಗೆಯಧರಾರುಣಮುಂ ದಶನಪ್ರಕಾಶಮುಂ
ಧೀರನತೀವ ಕೋಪವೆಡೆಗೊಂಡುಸಿರ್ದಂ ಸಭೆಯಾಯೆನುತ್ತಿರಲ್ ೩೩

ಪೋಳ್ವೆಂ ದಕ್ಷನಮುಂಡೆಯುಂ ಭಗನ ಕಣ್ಣಂ ಮೀಂಟುತಿರ್ಕುಳ್ಗಳಿಂ
ಕೀಳ್ವೆಂ ಪೂಷನ ಪಲ್ಗಳಂ ಬಿದಿಯ ಕಾಂತಾಘೋಣಮಂ ಕತ್ತಿಯಿಂ ।
ಸೀಳ್ವೆಂ ಬಂದ ಮುನಿಪ್ರತಾನದಭಿಮಾನಂಗೊಂಡು ಮೇಣ್ ಲಜ್ಜೆಯುಂ
ಕೊಳ್ವೆಂ ನಾಡೆ ಕಡಂಗಿ ಬೆಳ್ಪಸಮನಾಂ ತಾಳ್ವೆಂ ಮನಃಪ್ರೀತಿಯಿಂ ॥ ೩೪

1 ಜಡಿವುತ್ತುಂ......ವೀರಭದ್ರನಾಗಳ್.

ಕಡಿವೆಂ ಕಾಲನ ತೋಳ್ಗಳಂ ರಸನೆಯಂ ಕೊಯ್ವೆಂ ಬಳಿಕ್ಕಗ್ಗಿಯಾ
ಸುಡುವೆಂ ಜನ್ನದ ಶಾಲೆಯಂ ಭಯದೆ ಪುಲ್ಗರ್ಚುತ್ತೆ ನೀರ್ವೊಕ್ಕರಂ ।
ಬಿಡುವೆಂ ತೋಳ್ವಲಮಂ ರಣಾಂಗಣದೊಳೆಲ್ಲರ್ಗಿಂದು ನಾಂ ತೋರುವೆಂ
ಬಡಿವೆಂ ಪಾಳ್ಮನೆಹಾಳನಂ ಬಡಿವವೋಲ್ಮಿಕ್ಕಾದ ದೇವರ್ಕಳಂ ॥ ೩೫

ವ॥ ಇಂತೆಂದು ಪೂಣ್ದು ನುಡಿದ ವೀರಭದ್ರಂಗೆ ವಿಶ್ವನಾಥಂ ನಿರವಿಸಿದ ನದೆಂತೆಂತೊಡೆ,

ಬಡನರಿಯುಂ ಬಡಿವೊಡೆ ಮೇ
ಣ್ತೊಡುವರೆ ಪಾಶುಪತಮಸ್ತ್ರವೊರ್ಪಿಡಿವುಲ್ಲಂ ।
ಸುಡುವೊಡೆ ಬಡಬಾನಳನಂ
ಪಿಡಿವವರುಂಟೇ ಧರಿತ್ರಿಯೊಳ್ಕೇಳೆಂಡಂ ॥ ೩೬

ಕಡಲಂ ದಾಂಟುವವಂಗೆ ಬೆಂಚೆ ಗನವೇ ಬ್ರಹ್ಮಾಂಡಮಂ ನಾಡೆ ತು
ತ್ತಿಡುವಂಗಾಮಳಕಂ ಕರಂ ಪಿರಿದೆ ಮೇಣ್ಸಪ್ತಾದ್ರಿಯಂ ಸಂತತಂ ।
ಪೊಡೆಚೆಂಡಾಡುವವಂಗದೇಂ ಗರ್ದುಗಿನಾಟಂ ಪೆಂಪೆ ಮೂಲೋಕಮಂ
ಬಡಿಪೀಸಾಸಿಯೆನಿಪ್ಪವಂಗೆ ಬಡದಕ್ಷಂ ದೊಡ್ಡಿತೇ ನೋಳ್ಪಿನಂ ॥ ೩೭

ಅವರವರ ದೋಷವೇ ತಾ
ನವರವರಂ ತಿಂದು ತೇಗುಗುಂ ನೀನೀಗ ।
ಳ್ಸವರದೊಳವರಂ ಪಿಡಿತಂ
ದೆನಗೊಪ್ಪಿಸೆನುತ್ತೆ ವೀರನಂ ಬೀಳ್ಕೊಟ್ಟಂ ॥ ೩೮

ವ॥ ಆಗಳ್ವೀರಭದ್ರನುಮಾಮಹೇಶ್ವರರ್ಗೆ ವನತೋತ್ತಮಾಂಗನಾಗಿರ್ಪಿನಂ ದೇವಿಯುರ್ಪುತ್ರಪ್ರೇಮಾದಿಂದಾಲಿಂಗನಂಗೆಯ್ದು ಜಯಸೇಸೆಯಿಟ್ಟು,

ವೀರಶ್ರೀಯಂ ಪದಪಿಂ
ವೀರಂಗೊಲ್ದಿತ್ತು ಕಳುಪುವಂತೊಲವಿಂದಂ ।
ಗೌರಿ ಪರಸುತ್ತೆ ಕಳುಪಿದ
ಳೋರಂತಾಭದ್ರಕಾಳಿಯಂ ಸಂತಸದಿಂ ॥ ೩೯

ವ॥ ಆಗಳ್ವೀರಭದ್ರಂ ಪೊರಮಟ್ಟು ಸಂಗ್ರಾಮಭೇರಿಯಂ ಪೊಯ್ಸುವಿನಂ,

ಉಳ್ಕೆಗಳುದಿರ್ದುವು ನಭದಿಂ
ಕಳ್ಕನೆ ಮುನ್ನೀರ್ಗಳೇಳ್ವುವಾಗಸಕಾಗಳ್ ।

ತುಳ್ಕಿದುವಹಿತನಿಕಾಯಮು
ದಳ್ಕುವಿನಂ ಪೊಣ್ಮಿದತ್ತು ಭೇರೀನಿನದಂ ॥ ೪೦

ಆಗಳ್,

ಎಳೆ ಬಳೆದತ್ತೊ ದಿಗ್ವಳಯಮಿಾದುದೊ ನೋಳ್ಪನಮಾವಗಂ ನಭ
ಸ್ಥಳಮುರೆ ಪೆತ್ತುದೋ ಬಳಿಕೆ ಮುನ್ನಳಿದಿರ್ದ ಸಮಸ್ತಲೋಕಮಿಾ।
ಗಳೆ ಜನಿಸಿತ್ತೊ ಎಂದೆನೆ ಕರಂ ನೆರೆದತ್ತು ಚತುರ್ಬಳಂ ಮಹಾ
ಬಳನೆನಿಸಿರ್ಪ ಶೂಲಿಗೆ ಚತುರ್ಬಲದಾಸೆಯದುಂಟ ನೋಳ್ಪನಂ ॥ ೪೧

ಪೊಂದೇರನಡರ್ದನಾನಿಜ
ಸುಂದರಿಯುನೊಡಂಗೊಳುತ್ತೆ [1] ವೀರಂ ಮುದದಿಂ।
[2] ದಂದಲ್ಲಿ ಜಾಂಗುಭಲರೇ
ಯೆಂದುಸಿರುತ್ತಿರೆ ಸಮಸ್ತಗಣಸಂದೋಹಂ ॥ ೪೨

ಸಾರಥಿಯಾದಂ ಮುದದಿಂ
ವಾರಿಜಭವನುಭಯಚಾಮರವನಾಂತವರೊ।
ಳ್ಚಾರುಕರೇಣುಕರೆನಿಪ
ರ್ವೀರಂಗಂದಾತಪತ್ರಮಂ ಪಿಡಿದಿರ್ದರ್ ॥ ೪೩

ಅಡಪವಳಂ ಸಾನಂದಂ
ಪಡೆವಳ್ಳಂ ನಂದಿ ಮಿಸುಪ ಪೊಂಗಿಂಡಿಯುಮಂ।
ಬಿಡದೆಸೆವ ಪುಷ್ಪದತ್ತಂ
ಪಡಿಯರನಾಗಿರ್ದು ಪೊಗಳ್ವಪಂ ಮಾಕಾಳಂ ॥ ೪೪

ವರರತ್ನದ ಪಾದುಕೆಯಂ
ಕರದೊಳ್ತಾಳ್ದಲ್ಲಿ ಬಂದವಂ ಚಂಡೇಶಂ।
ಸುರುಚಿರಕನಕದ ಡವಕೆಯ
ನಿರದಾಂತಿರ್ಪಾತನಾಸುಕೇಶಿ ಗಣೇಶಂ ॥ ೪೫

[3] ಭಾನುಸುಕಂಪಗಣೇಶಂ
ತಾನಾಂತಂ ವ್ಯಜನವಂ ನಿಕುಂಭಗಣೇಶಂ।

---

1 ವೀರರುಮುದ. 2 ದಿಂದಲ್ಲಿಜಾಂಗುಭಲಾ. 3 ಭಾನುಕಂಪನಗಣೇಶಂ.

ಮಾನಿತಪದಂಗಳಂ ಪರ
ಮಾನಂದದೊಳೊತ್ತುವೊಳಿಗಮನಾಂತಿರ್ದಂ ॥ ೪೭

ಹಾಹಾಹೂಹುಗಳೊಲವಿಂ
ನೀಹಾರಮಯೂಖಧರನ ವೀರಾವಳಿಗಳ ।
ನೇ ಹಾಡುತ್ತುಂ ಮುದದಿಂ
ದಾಹರನ ಕುಮಾರನಂಪ್ರಿಯಂಪೊಂದಿರ್ದರ್ ॥ ೪೭

ವ॥ ಇಂತನಂತವೈಭವದಿಂ ವೀರಭದ್ರಂ ನಡೆವವಸರದೊಳ್,

ಎವೆಯುಲುಗುವನಿತರೊಳ್ವಿ
ಶ್ವವನೆಲ್ಲಂ ಸುಟ್ಟು ಬೊಟ್ಟಿಡುವ ರುದ್ರರ್ಕ ।
ಳ್ನವಕೋಟಿವೆರಸಿ ಬಂದಂ
ತವಕದೆ ಕಾಲಾಗ್ನಿರುದ್ರನೆಂಬ ಗಣೇಶಂ ॥ ೪೮

ಆಗಸವಂ ಭೂಮಿಯುನನು
ರಾಗದೊಳುರ ತಾಳವಾಗಿ ಬಾಜಿಸುತಿರ್ಪ ಮು ।
1 ಹಾಗಣಶತಕೋಟಿಗಳಿಂ
ದಾಗಳ್ನಡೆತಂದನಿರದೆ ಘಂಟಾಕರ್ಣಂ ॥ ೪೯

ಕೊರ್ಬಿದ ಶತ್ರುಸಮೂಹದ
ಗರ್ಬವನೆಳ್ಬಟ್ಟುತಿರ್ಪಸಂಖ್ಯಾತಗಣದ ।
ಪರ್ಬುಗೆಯಿಂ ಬಂದಾತನ
ದೊರ್ಬಂ ಶ್ರೀಕಾಳಕಂಠನೆಂಬ ಗಣೇಶಂ ॥ ೫೦

ಮುನಿದೊಡೆ ಕಡಲೇಳಂ ಭೊಂ
ಕನೆ ಕುಡಿವ ಗಣಂಗಳೆಂಟುಖರ್ವದೆ ಸಹಿತಂ ।
2 ಮುನಿಸಿಂ ಕುಕಿಲಿರಿವುತೆ ತಾ
ನೆನಸುಂ ಬೇಗದೊಳೆ ಬಂದನಾಜ್ವಾಲಾಸ್ಯಂ ॥ ೫೧

1 ಹಾಗಣೇಶರ್ಶತಕೋಟಿಗಳಿಂ. 2 ಮುನಿಸಿ ಕುಕಿಲಿರಿವುತೆ ತಾ.

ತರಿಸಂದು ಕುಲಾದ್ರಿಗಳಂ
ತಿರಿಕಲ್ಲಾಡುವ ಗಣಂಗಳೇಳರ್ಬುದಷಂ ।
ನೆರೆ ಕೂಡಿಕೊಂಡು ಮಿಗೆ ಬೊ
ಬ್ಬಿರಿವುತ್ತುಂ ಬಂದನಾಗಳಿರದೆ ಸುಘೋಷಂ ॥ ೫೨

ಚಂಡಭುಜಬಲಪರಾಕ್ರಮಿ
ದಂಡಿಯು ಕೂಡ್ಯೆದು ಕೋಟಿ ಬಂದುದು ನಾಡೆ ಶಿ ।
ಖಂಡಿಯೊಡನೊಂದು ಖರ್ವಂ
ಕೆಂಡವನುಗುಳುತೆ ಬಂದರುತ್ಸವದಿಂದಂ ॥ ೫೩

ಕೋಳಾಹಳಮದು ನೆಗಳಲ್
ಶೂಳಿಯು ಕೂಡೆಂಟುಪದ್ಮಮುರುಗಣನಿಕರಂ ।
ಕಾಳಾಂತಕಗಣನೊಡನೀ
ರೇಳೆನಿಸುವಕೋಟಿ ಮುಖ್ಯಗಣರೇಳ್ತಂದರ್ ॥ ೫೪

ಲಾಕುಳಿಯೊಡನೇಳ್ತಂದುದ
ನೇಕಗಣಂ ಮುಂಡಮಾರಿಯಂಬರನೊಡನೆ ಪಿ ।
ನಾಕಿಯು ಕೂಡೆಂಟೆಣಿಪಾ
ಪಾಖರ್ವಂ ಬಂದುದಾಗಳಾಗಸದಿಂದಂ ॥ ೫೫

ಭರದಿಂ ತ್ರಿಮೂರ್ತಿಯೊಡನಾ
ದರದಿಂದಂ ವಿಶ್ವಮಾಲಿಯೊಡನುತ್ಸವದಿಂ ।
ಪಿರಿದೇಳೇಳ್ಕೋಟಿಗಣೀ
ಶ್ವರರಾಗಳ್ಬಂದು ನಿಂದರದನೇನೆಂಬೆಂ ॥ ೫೬

ಭರದಿಂ ಪುಷ್ಕರನುಂ ಪ್ರಭಾಸನುಮೊರಲ್ದಾಶಾಧಿಯುಂ ದಂಡಿಯುಂ
ಪಿರಿದಾಂತಿರ್ಪಮರೇಶಪಾವಕರ್ಗಳಂ ಕಾಮುಂಡಿಯುಂ ನೈಮಿಶಾ
ಖ್ಯರುಮಿಂತೆಂಟೆಣಿಸಿರ್ಪ ರುದ್ರರಿವರಂದೊರೊರ್ವರೆಂಟೆಂಟು ಸಾ
ಸಿರಮಾಗಿರ್ಪುರುಕೋಟಿರುದ್ರಗಣದಿಂದೇಳ್ತಂದರಾನಂದದಿಂ ॥ ೫೭

ಭವನುಂ ರುದ್ರನುಮುಗ್ರನುಂ ಪಶುಪನುಂ ಶರ್ವಂ ಮಹಾದೇವರಂ
ಬಿವರುಂ ಭೀಮನುಮಾವಗಂ ಸೊಗಸುತಿರ್ಪೀಶಾನನುಂ ಮತ್ತಿವರ್ ।

ಶಿವನೆಂದೆಂಟೆಣಿಸಿರ್ಪ ಮೂರ್ತಿಗಳಜಸ್ರಂ ತಾವದೆಂಟೆಂಟುಪ
ದ್ಮವೆನಿಪ್ಪಾ ಪ್ರಮಥರ್ಕಳ ನ್ನಿಕೆಯಿಂದೇಳ್ತಂದರಂದಳ್ತಿಯಿಂ ॥ ೫೮

ಪಿಡಿತಂದೆಣ್ದೆಸೆಯಾನೆಯುಂ ಶರಭಮುಂ ಶಾರ್ದೂಲಮುಂ ಸಿಂಗಮುಂ
ಕಡುಪಿಂದೇರಿ ನಭಕ್ಕೆ ಧಿಂಕಿಡುತೆ ಚಂದ್ರಾದಿತ್ಯಬಿಂಬಕ್ಕೆ ಕೈ ।
ದುಡುಕುತ್ತುಂ ಮಿಗೆ ಬಟ್ಟೆವೆಟ್ಟುಗಳನೋರಂತಣ್ಣೆ ಕಲ್ಲಾಡುತುಂ
ನಡೆದತ್ತಾಗಣಸೇನೆಯಾರ್ಭಟ ದಿಶಾಭಾಗಕ್ಕೆ ತಳ್ಪೊಯ್ವಿನಂ ॥ ೫೯

ಅರಿಲ್ಗಳನುರೆ ತರಿದೊಲವಿಂ
ತರುಂಬುತೊಂಬತ್ತುಗರದಿನೆಕ್ಕಸರಂಗೆ ॥
ಯ್ದೊರಲ್ದುತಳೆವುತ್ತೆ ನೆರೆ ಬಾಂ
ದೊರೆಯುಂ ಚಲಕುತ್ತೆ ತಳರ್ದರಥವಗಣಂಗಳ್ ॥ ೬೦

ಪರಿವಿಡಿಯಿಂದಮಿಾತರದೊಳಬ್ಜಭವಾಂಡಮೆ ತಾನೆಯಾರಯ
ರ್ಕ್ನರೆದುದೊ ಎಂಬಿನಂ ನೆಗಳ್ದುರುದ್ರಗಣಂ ಪ್ರಮಥರ್ಕಳಿಂದಮು ।
ಚ್ಚರಿವಡೆದಿರ್ಪ ತದ್ಬಲಮನೀಕ್ಷಿಸುತಂದು ಕಡಂಗಿ ಪೆರ್ಚಿ ಸ
ತ್ಕರಿಸುತ ವೀರಭದ್ರನಿರದೆಳ್ತರುತಿರ್ದನನೂನರಾಗದಿಂ ॥ ೬೧

ಮುನಿದೊಡೆ ಮೂರೋಕಮನೊ
ರ್ವನೆಯುರುಪುವ ಸಾಸಿಗಂಗೆ ಮುಖಮುಂ ತವಿಸ ।
ಲ್ಕನಿತೇತರ್ಕೆ ಬಲಂ ಪ್ರಥು
ವೆನಿಸಿರ್ಪರ ಚಿತ್ತವೃತ್ತಿಯುಂ ಬಲ್ಲವರಾರ್ ॥ ೬೨

ಧರೆಯಿಂಬಿಲ್ಲ ಚತುರ್ಬಲಂ ನಡೆವುದಕ್ಕೇನೆಂಬೆನಾನೀಗಳಂ
ಬರಮಿಂಬಿಲ್ಲ ಬಳಿಕ್ಕೆ ನೀಳ್ದುಮಿಳಿರ್ವಾ ಕೇತುಪ್ರತಾನಕ್ಕೆ ಬಂ ।
ಧುರನಾನಾವಿಧವಾದ್ಯಘೋಷಕೆ ವಲಂ ಬ್ರಹ್ಮಾಂಡಮಿಂಬಿಲ್ಲ ನೋ
ಳ್ಪರೆ ಕಣ್ಣಂ ಪಡೆಯುರ್ಕೆ ನೋಟಕರ್ಗೆ ಮೆಯ್ಯಿಂಬಿಲ್ಲಮೇಣಿಂತಿದಂ ॥ ೬೩

ತಳ್ಗಿದುದವನೀಭಾಗಂ
ಮುಳ್ಗಿದನಾನಂದಿರಾಜ 1 ನಳಿದುದು ದಿಗಿಭಂ ।
ನುಳ್ಗಿದಂ ಕೂರ್ಮಂ ಬಲ
ದೇಳ್ಗೆಯನಾವಂ ಬಳಿಕ್ಕೆ ಬಣ್ಣಿಸುವಾತಂ ॥ ೬೪

1 ನಳಿದಷ್ಟದಿಗಿಭಂಗಳ್.

ಭರದೆ ಚತುರ್ಬಲಂ ನಡೆವುತಿರ್ಪಿನೆಗಂ ಪದಘಾತದಿಂದಮಂ
ಬರಕಡರುತ್ತೆ ಮುಂಬರಿದು ದಕ್ಷನ ಪಟ್ಟಣಮಂ ಮುಸುಂಕಿ ಪ |
ತ್ತಿರದೆ ವಿರಾಜಿಸಿತ್ತು ಬಹುಧೂಳಿ ಬಳಿಕ್ಕೆರುವೀರಭದ್ರನಾ
ಸಿರಿದೆನಿಸುತ್ತೆ ತೋರ್ಪ ಪಡೆವಳ್ಳನವೋಲ್ಬಯಮಂ ನಿವಿರ್ಚುತಂ ‖ ೬೫

ಆದಂ ಪದಹತಿಯಿಂದ
ಳ್ದಾಧೂಳಿ ನಭಕ್ಕೆ ನಿಳ್ಕಿ ಕಡಲಂ ಮುಸುಕ |
ಲ್ಕಾದತ್ತಾಗಳ್ ಹರ್ಷವಿ
ಷಾದಂ ಗಿರಿರಾಜಸುತೆಗದೇನಚ್ಚರಿಯೋ ‖ ೬೬

ಕಳಸಂಗಳ್ಗಣವರ್ಯರುನ್ನತಕಿರೀಟಂಗಳ್ ಲಸದ್ದರ್ಪಣಂ
ಗಳೆ ಮಾಣಿಕ್ಯದಿನೊಪ್ಪುವಡ್ಡಣಗಳೋರಂತೊಪ್ಪುವಾ ನಿಬ್ಬಣಂ |
ಬಳಮಾಗಲ್ ಜಯಕಾಂತೆಯುತ್ಸವಕೆ ವೀರಂಗೆತ್ತಿ ತಾಂ ತೋರ್ಪ ಕೆಂ
ದಳೆಯೆಂಬಂತೆ ವಿರಾಜಿಸಿತ್ತು ನೆಗೆದಾಕೆಂಧೂಳಿಯಾಕಾಶದೊಳ್ ‖ ೬೭

ಇಂತಪ್ಪ ಗಣಸಮೂಹದ
ನಂತಬಲಂಬೆರಸಿ ಬಂದು ದಕ್ಷನಗರದೊಳ್ |
ಮುಂತೊಪ್ಪುವ ಪಾಳೆಯಮಂ
ಸಂತಸದಿಂ ಬಿಟ್ಟನಲ್ಲಿ ವೀರಂ ಧೀರಂ ‖ ೬೮

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹವೊಲ್ದು ಪು
ಟ್ಟಿದತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ |
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಲಾಗ್ರದೊಳ್ ‖ ೬೯

ಮುಳಿಯಲಗೇಂದ್ರಜಾತೆ ತಲೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದೆ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ |
ತುಳಿಲ 1 ನೋಡರ್ಚಲಾಲ್ದು ಮೊಗದೊಳ್ಮೊಗವಿಕ್ಕುತೆ ಸಂತವಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಪೀಜಗಮಂಗುರುವಿಶ್ವವಲ್ಲಭಾ ‖ ೭೦

ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬೆರೆದ ರಜಮು 2 ನಿರದೆ ಸವಿದು ತಣಿದು ತನ್ನ ಲೀಲೆಯಿಂ |

---

1 ನೊಡರ್ಚದಾಲ್ದು. 2 ಸುರದೆ.

ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮಿಾಗಭೀಷ್ಟಮಂ ॥ ೭೧

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತ
ಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದ
ಮಧುಕರಾಯಮಾಣ ಶ್ರೀಕಂಠವಂಶಾರ್ಣವಪೂರ್ಣಚಂದ್ರನೆನಿಪ
ಸತ್ಯವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ ಶ್ರೀ ವೀರ
ಭದ್ರವಿಜಯ ಮಹಾಪ್ರಬಂಧದೊಳ್ ದಕ್ಷಾಧ್ವರಪ್ರಾ
ರಂಭಂ ದಧೀಚಿಶಾಪಂ ವೀರಭದ್ರಪ್ರಯಾಣವರ್ಣನಂ
ದಶಮಾಶ್ವಾಸಂ ಸಂಪೂರ್ಣಂ.

---

# ಏಕಾದಶಾಶ್ವಾಸಂ

ಸರ್ವ್ವಜಗಕ್ಕೆಲ್ಲಂ ತಾ
ನೊರ್ವ್ವನೆ ತಾಯ್ತ್ತಂದೆಯೆಂಬುದಂ ತೋರ್ಪ್ಪಡೆ ಸಲೆ ।
ಪಾರ್ವ್ವತಿಗರೆವೆಯ್ಯಿತ್ತಾ
ಸರ್ವ್ವಜ್ಞಂ ವಿಶ್ವನಾಥ ರಕ್ಷಿಪುದೆಮ್ಮಂ ॥ ೧

ವ॥ ಈ ರೀತಿಯಿಂ ಪಾಳೆಯುವಂ ಬಿಟ್ಟು ವೀರಭದ್ರಮಿರ್ಪ್ಪಿನಮತ್ತಲಾ ದಕ್ಷಂ ತನ್ನ ಸೊರ್ಕಿಂದೇನುಮನರಿಯದೆ ನಾರಾಯಣಂಗಗ್ರಾಸನಂಗೊಟ್ಟುಳಿದದೇವರ್ಕಳ್ಗೆಲ್ಲಮವರವರ ತಾರತಮ್ಯವನರಿದುಚಿತಾಸನಂಗಳನಿತ್ತು ಯಜ್ಞಸಂಭ್ರಮದೊಳಿರ್ಪ್ಪಿನಂ,

ಸುರಿದುವು ರಕ್ತದ ಮಳೆಗಳ್
ಧರೆಗೊರಗಿದುವಲ್ಲಿಯುಪವನದ ವೃಕ್ಷಂಗಳ್ ।
ಗಿರಿಗಳ್ಮಿಗೆ ನಡುಗಿದುವಂ
ದುರಿಯಂ ಸೂಸಿತ್ತು ತಾಲವೃಂತದ ಪವನಂ ॥ ೨

ಊಳ್ದುವನಂತಜಂಬುಕಮುವಾಪಗಲಲ್ಲಿರದೆಯ್ದೆ ತಾರೆಗ
ಳ್ಬೀಳ್ದುವನಂತಮಶ್ವನಿಕರಂ ಸಲೆ ಸೂಸುವ ಕಣ್ಣನೀರ್ಗಳಿಂ ।
ದಳ್ದುವು ದೇವತಾಪ್ರತಿಮೆ ದೇಗುಲದೊಳ್ಪನಮುಂದು ನೋಳ್ಪಿನಂ
ಪೋಳ್ದುವು ಸೂರರೀರ್ವ್ವರುರೆ ತೋರ್ದರದಾಗಳೆ ಪಶ್ಚಿಮಾಶೆಯೊಳ್ ॥ ೩

ಎಡದ ಕಣ್ಣಿಡದಲ್ಲಿಯಾಗಳೆ ಕೆತ್ತುತಿರ್ದುವು ಸಂತತಂ
ಪಿಡಿದ ಕೈಯಲಗಾಗಳುಂ ತೊರೆಯುರ್ಚಿ ಬೀಳ್ದುದದಾವಗಂ ।
ಪಡುವಮಂದಿರದಲ್ಲಿ ಜೇನಿರದಿಟ್ಟುದಂದುರೆ ನೋಳ್ಪಿನಂ
ಬಿಡದೆ ಜನ್ನದ ವಹ್ನಿ ಭೋಂಕನೆ ತಣ್ಣಿತಾದುದು ದಕ್ಷನಾ ॥ ೪

ವ॥ ಆ ಸಮಯದಲ್ಲಿ,

ಭಾನುಸಹಸ್ರಕೋಟಿ ಬಳಿಕೊಂದೆ ಶರೀರಮನಾಂತುದೆಂಬಿನಂ
ಬಾನೆಡೆಯಲ್ಲಿ ತೋರ್ದುದು ನವೀನಮಹಾಪ್ರಭೆಯೊಂದು ಮೂರ್ತಿ ದಲ್ ।

ತಾನದು ಘೋರನಾಗಳಿಳಿತಂದುದು ನಿಂದುದು ಮೂರ್ಖದಕ್ಷನಾ
ಸ್ಥಾನದೊಳಿರ್ದ ದೇವನಿಕರಂ ಮುನಿಸಂತತಿ ಬೆರ್ಚಿ ಬೀಳ್ವಿನಂ ॥ ೫

ವ॥ ವ ತ್ತಮಾ ಮೂರ್ತಿ,

ಸಾಸಿರಕಣ್ಗಳಿಂದುರಿಗಳಂ ಸರೆ ಸೂಸುತೆ ನೀಳ್ದು ತೋರ್ಪ ನೂ
ರ್ಛಾಸಿರತೋಳ್ಗಳಿಂ ಪಿಡಿದ ಕೂರಸಿಯಂ ಜಡಿವುತ್ತೆ ನಾಡೆ ಮೂ ।
ರ್ಛಾಸಿರಮಾದ ಪೆರ್ಮೊಗದಿನುಣ್ಮಿ ಕರಂ ನಿಡಿದಾದ ಜಿಹ್ವೆಯಿಂ
ದಾಸುರಮೂರ್ತಿಯೆಂಬ ಗಣಪುಂಗವನಲ್ಲಿರದೊಪ್ಪಿದಂ ವಲಂ ॥ ೬

ಬಳಿಕಾತಂ ತಾಳ್ದ ನೂರ್ಛಾಸಿರವರಕರದೊಳ್ಪಾಡೆ ರಂಜಿಪ್ಪ ಕೂರ್ಪಾ
ಳ್ಗಳೊಳಾಮೂರ್ತಿಸ್ವರೂಪಂ ಪೊಳೆವಿನೆಗಮುದಂ ಕಂಡು ಕಣ್ಗಿಟ್ಟು ಮತ್ತಾ ।
ಗಳೆ ರುದ್ರಕೋಟಿಯಾ ಬಂದುದು ಮಿಗೆ ಸಭೆಯಂ ಮುತ್ತಿದತ್ತೆಂದು ಬೆಂಬೀ
ಳ್ದಳಲುತ್ತುಂ ಬಾಯ್ಬಿಡುತ್ತುಂ ಕಳವಳಿಸುತೆ ಕಣ್ಗೆಟ್ಟುದಾಸ್ಥಾನವಾಗಳ್ ॥ ೭

ತಾಳ್ದನಸುರಾರಿ ಭೀತಿಯು
ನೆಳ್ದೋಡಿದನಿಂದ್ರನಖಿಳದೇವಪ್ರತತಿ ತೆ ।
ಮಳ್ದುದು ದಕ್ಷಂ ಕಾಲ್ಗೆ
ಟ್ಟಿರ್ದಂ ಮರವಟ್ಟು ಧೈರ್ಯವಿಡಿದಿರ್ದನವೋಲ್ ॥ ೮

ವ॥ ಇಂತಿರ್ದ ದಕ್ಷನೆಂತಾನುಮೆಳ್ಚತ್ತು ಗಣೇಶ್ವರನೊಳಿಂತೆಂದಂ,

[1] ನೀನಾರ್ಬಂದಿಹ ಕಾರಣ
[2] ವೇನುಸುರೆನಲಾತನಲ್ಲ ಗಹಗಹಿಸುತೆ ಷಂ ।
ಡಾನನಕುಮಾರವೀರನ
ಸೇನಾಪತಿ ನಾನೆನುತ್ತೆ ಬಳಿಕಿಂತೆಂದಂ ॥ ೯

ಆಹವನೀಯಪಾವಕನೊಳಾವಿಧಿಪೂರ್ವಕವಾಗಿ ಬೇಳ್ಪ ದಿ
ವ್ಯಾಹುತಿ ದೇವದೇವನೆನಿಸಿರ್ಪ ಪಿನಾಕಿಗೆ ಸಲ್ವುದಾವಗಂ ।
[3] ಆ ಪುರವೈರಿಗಂತದನೆ ಮೊತ್ತಮೊದಲ್ಮಗೆ ಕೊಟ್ಟುದಂ ಬಳಿ
ಕ್ಕಾಹುತಿ [4] ಗೊಳ್ವುದೊಲ್ದು ಸುರಸಂತತಿ ಸಾಧುಗಳೆಯ್ದೆ ಬಲ್ಲವೊಲ್ ॥ ೧೦

---

1 ನೀನದಾರ್ಬಂದಕಾರಣವ. 2 ದೇನುಸುರನಲಾ. 3 ಆ ಪುರವೈರಿ.
4 ಗೊಳ್ಳದೊಲ್ದು.

ಅದರಿಂದೆ ವೀರಭದ್ರಂ
ಮೊದಲಾಹುತಿಭಾಗಕೆನ್ನನಟ್ಟಿದನೆನೆ ಕೋ ।
ಪದಿನೆಂದಂ ದಕ್ಷಂ ಪುಗಿ
ಸಿದರಾರೋ ನಿನ್ನನಿಲ್ಲಿಗೆನಲಿಂತೆಂದಂ ॥ ೧೧

ನಿನ್ನ ಮಗಳೀಶನೆನಿಸಿ
1 ರ್ಪೆನ್ನೊಡೆಯನ ರಾಣಿ ಮಾವನಾತಂಗುರೆ ನೀಂ ।
ನಿನ್ನ ಮನೆಗೆಯ್ದೆ ಸಲುಗೆಯ
ಬಿನ್ನಣದಿಂ ಬಂದೆನೆಂದೊಡವನಿಂತೆಂದಂ ॥ ೧೨

ಆತನೆನಗಳಿಯನೆ ಬಳಿ
ಕ್ಕಾತಂ ಕೈವಿಡಿದ ಪೆಣ್ಣದೆನ್ನಯ ಮಗಳೇ ।
ಏತರ ನುಡಿ ನಿನ್ನದು ಕೇ
ಳ್ಮಾತೊಂದಿದು ನಿನಗೆ ಮಾನ್ಯವೆಂದವನುಸಿರ್ದಂ ॥ ೧೩

ಎನ್ನಳಿಯಂದಿರೆನ್ನ ತನುಜಾತೆಯರೆನ್ನಯ ಬಂಧುಗೋತ್ರಗ
ಳ್ತನ್ನಯ ಜೀವವೆಂದೆನಿಪ ದೇವತೆಗಳ್ಕನಿಪ್ಪಂದವಿಾಗಳೀ ।
ಯೆನ್ನಸುವಿಂಗೆ ತಾವೆ ನೆರವಾಗಿದೆ ನೋಡು ಬಳಿಕ್ಕೆ ಮಿಕ್ಕರಂ
ನನ್ನವರೆನ್ನದಿರ್ನಿನಗೆ ಕೂಳ್ಗೊಡೆನೆಂದೆನುತಿರ್ದನಾಖಳಂ ॥ ೧೪

ಸಂಗರಕೆ ಬಂದು ಬರುವಾ
ತುಂಗುಟ್ಟದಿರೆನ್ನ ಮಸ್ತಕಂ 2 ದುರ್ಮತಿ ಯು ।
ದ್ಧಾಂಗಣದೊಳ್ಬೀಳ್ದ ಬಳಿ
ಕ್ಕಂಗವಿಪುದು ನಿನ್ನ ತುತ್ತನೆಂದವನುಸಿರ್ದಂ ॥ ೧೫

ಎನ್ನೀ ಪೊಗಮಂ ಮುಂದಿ
ಟ್ಟಿನ್ನಾಂಮಗಳೆಂದುಮಳಿಯನೆಂದೆನುತವರಂ ।
ಮನ್ನಿಸಿದೊಡೆ ಗಣಪುಂಗವ
ನೀನ್ನಗು ಬಳಿಕೆನ್ನನೆಂದು ನುಡಿದಂ ದಕ್ಷಂ ॥ ೧೬

ವ॥ ಅದಕ್ಕಾ ಗಣಪುಂಗವಂ,

---

1 ರ್ಪೆನ್ನೊಡೆಯನರಾಣಿ....ಮವನಾತಂಗುರೆ. 2 ಮತಿಯು.

ಮೃಡನ ವಿರೋಧವೇಂ ನಿನಗೆ ಪಥ್ಯವೆ ಬೇಡೆನೆ [1] ನಾನದಂ ಬಿಡೆಂ
ಕೆಡುವೆ ದಿಟಕ್ಕೆಯಂತದರಿನೆಂದೆನೆ ಕೆಟ್ಟಪೆ ನಾಂ ಬಳಿಕ್ಕೆ ನೀ ।
ನುಡಿಯದಿರೆಂದೆನಲ್ಕಗಲ್ದ ನಿನ್ನಯ ಪೆರ್ದಲೆ ವೀರಭದ್ರನಿಂ
ದುಡಿವುದೆನುತ್ತವಂ ನುಡಿದು ಪೋದನದಾಗಳತೀವಕೋಪದಿಂ ॥ ೧೭

ವ॥ ಆಗಳೊರ್ವಂ ಬಂದು ದಕ್ಷನೊಡನಿಂತೆಂದಂ,

ಏಳಂಬುಧಿಗಳ್ಮೆರೆದುವೊ
ಕಾಳನ ಜಂಗುಳಿಯೊ ಮಿಳ್ತುವಿನ ಮೊತ್ತವೊ ಎನೆ ।
ಶೂಳಿಕುಮಾರನ ವೀರನ
ಪಾಳೆಯಮದುಪೊಳಲ್ಗೆ ಬಂದುದೆಂದವನುಸಿರ್ದಂ ॥ ೧೮

ಪಾಳೆಯದೊಳ್ಮಿಗೆ ಪರ್ಬಿದ
ಕೋಳಾಹಳಮಂ ಪೊದಳ್ದು ಧೀಂಕಿಟ್ಟೊಪ್ಪುವ ।
ಧೂಳಿಯ ಬಿತ್ತರವಂ ನೀಂ
ಕೇಳೀಗಳ್ನೋಡೆನುತ್ತೆ ನುಡಿದಂ ದೂತಂ ॥ ೧೯

ವ॥ ಆಗಳ್ದಕ್ಷಂ ಭಯವಿಹ್ವಳನಾಗಿ,

ಹರಿಯಂ ಬರ್ಹಿಯನಾದಿನೇಶಸುತನಂ ಕ್ರವ್ಯಾದನಂ ಸಾಗರೇ
ಶ್ವರನಂ ಮಾರುತನಂ ಕುಬೇರನನೊರಲ್ದೀಶಾನರೆಂಬಷ್ಟದಿ ।
ಗ್ವರರಂ ನೋಡಿ ಪೊದಳ್ದ ಭೀತಿಯೊದವಿಂದೇಳೇಳೆನುತ್ತಿರ್ದನಾ
ತುರದಿಂ ದಕ್ಷಪಿತಾಮಹಂ ಮಿಗೆ ವಿವೇಕಂ ಭೀತರೊಳ್ತೋರ್ಕುಮೇ ॥ ೨೦

ವ॥ ಇಂತೆಂಬಿನಮಾಗಳ್ನಾರಾಯಣಂ ಸಮಸ್ತದೇವವ್ಯೂಹಮಂ ಕೂಡಿ ಕೊಂಡು ಪೊಳಲಂ ಪೊರಮಟ್ಟು ವೀರಭದ್ರಂಗಿದಿರಾಗಿ ಪೌಜಂ ರಚಿಸಿರ್ದನದೆಂತೆಂದೊಡೆ,

ಎನಸುಂ ಶೈಲಚಯಂ ಸುರೇಂದ್ರನಿದಿರೊಳ್ಮೇಘಂಗಳೊಡ್ಡಾಪ್ರಥಂ
ಜನಸಾಮುಖ್ಯದೆ [2] ಕುಂಭಸಂಭವನ ಮುಂದಂಭೋನಿದಾನಂ ವಲಂ ।
ಮುನಿದೇಳ್ತಂದಿದಿರೊಡ್ಡಿ ನಿಲ್ವ ತೆರದಿಂದಾರಯ್ಯೆ ತಾಂ ವೀರಭ
ದ್ರನಮುಂಭಾಗದೊಳೆಯ್ದೆ ಬಿಟ್ಟುದದಟಿಂದಂ ದೇವಸ್ಯೆನ್ಯೋತ್ಕರಂ ॥ ೨೧

ಇಂತೊಡ್ಡಿದ ಪೌಜಂ ಕಂ
ಡಂತಕಹರವೀರನಂದು ನಂದೀಶ್ವರನಂ ।

---

1 ಬೇಡೆನಾನದಿಂಬಿಡೆ. 2 ಕುಂಭ....ವನ.

ನೀಂ ತಿಳಿಪಿವರಿವರಾರೆನೆ
ಸಂತಸದಿಂ ಬಿನ್ನವಿಸಿದನಾತನದಾಗಳ್ ॥ ೨೨

ಅರಿಯಿಂದರಿದೆನಿಸುವ ದನು
ಜರ ತಲೆಗಳನರಿವ ರಾಕ್ಷಸಾರಿ ಬಳಿಕ್ಕೆಮ ।
ಗರಿಯೆನಿಸಿ ಪದ್ಮಸಂಖ್ಯೆಯ
ಪರಿವಾರಂಗೂಡಿ ಬಂದನಿದೆ ನೋಡೆಂದಂ ॥ ೨೩

ಶತಕೋಟಿಯಿಂದೆ ರಾಕ್ಷಸ
ಶತಕೋಟಿಗಳಂ ಸಮಂತು ಗೆಲ್ವಾತಂ ಬಲ ।
ಶತಕೋಟಿಯಿನಿರ್ದಪನೀ
ಶತಕೋಟಿಧರಂ ಸಮಂತು ನೋಡೆಂದುಸಿರ್ದಂ ॥ ೨೪

ಅವಿಚಾರಿಗೆ ಕೃಷ್ಣಗತಿ
ತ್ವವೆ ನಿಜವೆಂದರುಪುವಂತೆ ಲೋಕಕ್ಕೆಲ್ಲಂ ।
ಅವಿಚಾರಿಕೃಷ್ಣವರ್ತ್ಮಂ
ನವಕೋಟಿಬಲಂಗಳಿಂದೆ ತೋರ್ದಪನೀತಂ ॥ ೨೫

ಸಮವರ್ತಿಗೆ ತಾಂ ಗಡ ದ
ಕ್ಷಮುಖಕ್ಕಾಪ್ತತೆ ಬಳಿಕ್ಕೆ ನವ್ಮೊಳ್ವೈರಂ ।
ಸಮನಿಸಿಯುಮಿಾತನೊಳ್ವ
ದ್ಮವೆನಿಪ ಬಲಮಿದೆ ನಿರೀಕ್ಷಿಸೆಂದೆನುತುಸಿರ್ದಂ ॥ ೨೬

ಪುಣ್ಯಜನಂ ತಾನೆನಿಸಿಯು
ಪುಣ್ಯಾಧ್ವರಕೊಲ್ದು ಬಂದು ಬಿಟ್ಟಿರ್ದಾತನ ।
ಗಣ್ಯಬಲೋಪೇತಂ ತಾಂ
ಪುಣ್ಯಜನಂ ಬಳಿಕೆ 1 ನೋಡಿವನನೆಂದುಸಿರ್ದಂ ॥ ೨೭

ನಂಜಿನ ಮೊತ್ತಮೊ ಸಿಡಿಲ್ಗಳ
ಪುಂಜವೊ ಎನೆ ಪತ್ತುಪದ್ಮಬಲದಿಂದಂ ಮಿಗೆ ।
ರಂಜಿಸುವಾತಂ ರಿಪುಕುಲ
ಭಂಜನನೆನಿಸಿರ್ಪ ವರುಣನಿವನೆಂದುಸಿರ್ದಂ ॥ ೨೮

ಕಡಲಂ ಕಲಂಕಿ ಗಿರಿಗಳ
ಗಡಣವನೆಳ್ಚಟ್ಟಿ ಪಲವುಮುಗಿಲೊಡ್ಡುಗಳಂ ।

1 ನೋಡಿವನೆಂದುಸಿರ್ದಂ.

ಕೆಡಿಸುವವಂ ಪದ್ಮವೆನಿಪ
ಪಡೆಯಿಂ ಬಂದಿರ್ಪವಂ ಪ್ರಭಂಜನನೀತಂ ॥ ೨೯

ನೇತ್ರತ್ರಯಂ ಜಗಕೆ ಸ
ನ್ಮಿತ್ರಂ ತಾನಾಗಿ ಪತ್ತುಪದ್ಮದ ಬಲದಿಂ ।
1 ದೈತಂದಿಹ ಚೈತ್ರರಥನ
ಮಿತ್ರಂ ಈಶಾನನಾತನಂ ನೋಡೆಂದಂ ॥ ೩೦

ಈಸನ ಮುದೆ ಯನೇ ತಾ
ಳ್ದೀಸಂಗೆ ವಿರೋಧಿಯಾಗಿ ಬಂದಿರ್ದವನೀ ।
ಈಸಾನ್ಯನೆಂಬವಂ ನೂ
ರ್ಧಾಸಿರಪಡೆಯಿಂದೆ ಚಿತ್ತವಿಸು ನೀನೆಂದಂ ॥ ೩೧

2 ಪೂಸಂ ಮೋಣ್ಬಗಮಿಂತಿವ
ರೀಸಂಗೊಂದಂಗವಾಗಿ ತೋರುತ್ತಿರ್ದುಂ ।
ನಾಸಕ್ಕೇಳ್ತಂದವರ್ನೂ
ರ್ಧಾಸಿರಲಕ್ಕವಡೆಯೊಡನೆ ನೋಡೆಂದುಸಿರ್ದಂ ॥ ೩೨

ವ॥ ಇಂತು ದೇವರ್ಕಳನೋರೊರ್ವರಂ ವೀರಭದ್ರಂಗೆ ನಂದಿಕೇಶ್ವರಂ ತೋರಿ ಬಿನ್ನವಿಸುತಿರ್ಪಿನಮಾಪ್ರಸ್ತಾವದೊಳುಭಯಬಲದೊಳ್ಪೊಣ್ಮುವ ಸನ್ನೆಯ ಭೇರೀರವವೆಂತಿರ್ದುದೆಂದೊಡೆ,

ಇದು ಕಡಲಂ ಸಮಂತು ಕಡೆವಂದು ಪೋದಳ್ದ ಮಹಾನಿದಾನವೋ
ಇದು ಕಡೆಗಾಲದೊಳ್ಮೊಳಗುತಿರ್ಪ ಸಿಡಿಲ್ಗಳ ಬೊಬ್ಬೆಯೋ ಬಳಿ
ಕ್ಕಿದುವೆ ಮಹಾತ್ಮಭೈರವನ ಢಕ್ಕೆಯ ರಾವವೊ ತಾನಿದೆಂಬವೋ
3 ಲುದಿಸುತಜಾಂಡಮಂ ತುರಿಹದಿಂದಡರ್ದತ್ತುರೆ ದುಂದುಭಿಸ್ವನಂ ॥ ೩೩

ವ॥ ಆಗಳ್,

ಕುಳಿಕನ ಕುಳವೋ ಬಡಬಾ
ನಳನಾಜ್ವಾಲೆಗಳೊ ಭೈರವನ ಬಳಗವೊ ಎನೆ ।

---

1 ಬಂದಾತಂಚೈತ್ರರಥಾ
ಧೀಶನಮಿತ್ರಂಯಿಶಾನನಾತನಂ ನೋಡೆಂದಂ ॥
2 ಪೂಸನುಂಭಗನುಮಿಂತಿವ.
3 ಲುದಿಸುತಜಾಂಡಮಾತುರಿಹದಡರ್ದತ್ತುರೆ.

ಕೊಳುಗುಳದೊಳುಭಯಬಳಮದು
ಪಳಂಚಿ ಬೊಬ್ಬಿಡುತಮಿರ್ದುದದನೇನೆಂಬೆಂ ॥ ೩೪

ಜ್ಯಾರವಮುಂ ಕಿಳಿರುಂ ಚೀ
ತ್ಕಾರಂ ಬೃಂಹಿತಮುಮಖಿಳವಾದ್ಯಧ್ವನಿ ಪರಿ ।
ವಾರದ ಬೊಬ್ಬೆಗಳುಂ ಮಿಗೆ
ತಾರಗೆವಟ್ಟೆಯನೆ ಮುಟ್ಟಿ ಪರ್ಬಿದುದಾಗಳ್ ೩೫

ಬಿಲ್ವಡೆ ಪನ್ನತಿಕೆಯಿನಾ
ಬಿಲ್ವಡೆಯೊಳ್ಪರಿಗೆಕಾರರೆಂದೆನಿಸಿರ್ಪಾ ।
ಬಲ್ವಂಟರ್ಪರಿವಿಡಿದಾ
ಬಲ್ವಂಟರೊಳಾಗಳಮರ್ದು ಪೊಣರ್ದತ್ತಾಗಳ್ ೩೬

ಕುಂತದ ಬಲ್ಗಯ್ಯರ್ವಿಗೆ
ಕುಂತದ ಬಲ್ಗಯ್ಯರೊಡನೆ ಗೋಳಾಯಿಲರುರೆ !
ಯಂತಾಗೋಳಾಯಿಲರೊ
ಳ್ಸಾಂತಂ ತಳ್ತಿರಿದಾಡಿ ಕುಕಿಲಿರಿವುತೊಪ್ಪಿರ್ದಂ ॥ ೩೭

ಕರಿ ಕರಿಯೊಳ್ಬೋದರ್ಜೋ
ದರೊಳೆಯ್ದಿ ಸಮಂತು ರಥಿಕರೊಳ್ರಥಿಕಚಯಂ ।
ಕರವೀಸಿ ಕರೆದು ಕಾದಿ
ತ್ತೆರಡುಂ ಬಲದಲ್ಲಿಯದ್ಭುತಂ ಪುಟ್ಟುವಿನಂ ॥ ೩೮

ಶರಮಯಮಾದುದಂಬರಮದಾಗಳೆ ನೋಳ್ಪನೆಗಂ ಜಗಜ್ಜನಂ
ಶರಮಯವಾದುದೀಧರಣಿಯೆಲ್ಲಮವಂದಿರದಂತು ದಿಕ್ಕುಗಳ್ ।
ಶರಮಯವಾದುದಿರ್ವಲದ 1 ಬಿಲ್ವಡೆಯಾರ್ದಸುವಂದಿವೆಲ್ಲವುಂ
ಶರಮಯವಾಗಿಯುಂ ಸಲೆ ರಜೋಮಯವಾದುದಿದೇಂ ವಿಚಿತ್ರಮೋ ॥ ೩೯

ಘನತರಮಾದ ಯುದ್ಧದ ಪದೋದ್ಭವಧೂಳಿ ಮುಸುಂಕುವಲ್ಲಿಯುಂ
ದನಿಮಿಸಮಾರ್ಬಲಂ ಮುರಿದು ಚಕ್ಕನೆ ಕಣ್ಗಿಡುತೋಡುತಂ ಕರಂ ।
ಮನುಜರ ಜನ್ಮವಿಂದೆಮಗೆ ಸಾರ್ದೊಡೆ ನಾವೆ ಕೃತಾರ್ಥರಪ್ಪೆವೆಂ
ದು ನುಡಿವುತಿರ್ದುದಾಸಮರಭೂಮಿಯೊಳಾಗಳಿದೇಂ ವಿಚಿತ್ರಮೋ ॥ ೪೦

---

1 ಬಿಲ್ವೆಡೆ.

ಚೂಣಿಯ ಬಲಮದು ಮುರಿಯ
ಲ್ಕಾಣುತ್ತುಂ ಪೂಷನೆಂಬವಂ 1 ಬಲಗೊಂಡಾ ।
ಕ್ಷೋಣಿಯೊಳೇಳ್ತಂದಾಗಳೆ
ಹಾಣಾಹಾಣಿಯಿನೊಡರ್ಚಿದಂ ಸಂಗರಮಂ ॥ ೪೧

ಪೆಂಗೊಟ್ಟು ಬರ್ಪ ಬಲಕಥ
ಯಂಗೊಡುತುಂ ಬಗನೆನಿಪ್ಪ ಸೂರಂ ಪೂಷಂ .
ಗಂಗವೆನಿಸುತ್ತೆ ತನ್ನ ಬ
ಲಂಗೂಡಿ ಬಳಿಕ್ಕಮಾತನೂಡನೇಳ್ತಂದಂ ॥ ೪೨

ಎಲರುಣಿಗೊಲ್ದೆರಂಕೆಯುದು ಸಾರ್ದವೊಲಾರಯೆ ದಟ್ಟಿತಪ್ಪ ಕ
ಳ್ತಲೆಗೊಲವಿಂದೆ ನೋಡೆ ಪಿರಿದುಂ ಕಠಿಣಂ ಸಲೆ ಪೊಂದಿದಂತೆಯು ।
ಜ್ವಲಪ ದವಾನಳಂಗೆ ಮರುತಂ ನೆರವಾದವೊಲಾಭಗಂ ಮಹಾ
ಬಲನೆನಿಸಿರ್ಪವಂಗೆ ಸಖನಾಗಿ ಸಮಂತುರೆ ಬಂದನಾಕ್ಷಣಂ ॥ ೪೩

ವ॥ ಇಂತವರೀರ್ವರುಂ ತಂತಮ್ಮ ಬಲಂಗೂಡಿ ಸಂಗರಕ್ಕೇಳ್ತಂದು ನುಡಿವುತ್ತಿರ್ದರದೆಂತೆಂದೊಡ,

ಇರಿ ಇರಿ ಪೋದು ತುತ್ತುಗೊಡು ಮಾರಿಗೆ ಗಂಟಲನಾಂಕು ಗೋಣ್ಗಳಂ
ಮುರಿಮುರಿದಿಕ್ಕು ಮಾರ್ಮಲೆವರಂ ಕ್ರಕಚಂಗಳಿನಾರ್ದುದೇಹಮಂ ।
ಕೊರೆ ಕೊರೆ ತೋಳ್ಗಳಂ ತೊಡೆಗಳಂ ಕರವಾಳ್ಗಳಿನೀಗಳಿಂದು ತ
ತ್ತರದರಿಯೆಂದು ಪೇಳ್ದು ಸಲೆಯುಬ್ಬರಿಸುತ್ತೆಸೆದಿರ್ದರಾಜಿಯೊಳ್ ॥ ೪೪

ಪಿಡಿ ಪಿಡಿದಾಳ್ಗಳಂ ಬಿಡದೆ ಕಟ್ಟು ಕಡಂಗಿದಿರಾಂತ ಬಂಟರಂ
ಕಡಿಕಡಿದಟ್ಟು ಸಂಗರದೊಳೋಡಿದರಂ ಸಲೆ ಕಾಯ್ದು ವರ್ಗಳಂ ।
ಬಿಡುಬಿಡು ಬಲ್ಮೆದೋರಿದ ಭಟರ್ಕಳ ಕೊರ್ವಿದ ಪರ್ವಿದೆಲ್ಗಳಂ
ಪುಡಿಪುಡಿಗುಟ್ಟೆನುತ್ತುಸಿರುತಿರ್ದರತೀವ ಮದೋದ್ಧತೋಕ್ತಿಯಿಂ ॥ ೪೫

ವ॥ ಇಂತೆಂದು ಭಟರ್ಗೆ ನಿಯಾಮಿಸುವ ಸೂರರಿರ್ವರ್ಗಿದಿರ್ಚಿ ಬಂದು ಮೇಘನಾದನೆಂಬ ಗಣೇಶ್ವರಂ ನುಡಿವುತ್ತಿರ್ದನದೆಂತೆಂದೊಡೆ,

ಗರ್ವದಮಾತಿದೇಕೆ ನಿಮಗಿಂದು ಬಯಲ್ಗೆ(ಪೊಣರ್ಕೆಗೊಟ್ಟು ನೀ
ವಿರ್ವರನೇಕಮಾದ ಚತುರಂಗಬಲಂ ಸಹಿತೆಯ್ದಿ ಬಂದು ನಂ ।

1 ಬಲಮಂದ.

ಮೊರ್ವನೊಳಿಂದು ಕಾದಿದೊಡೆ ಕಾಣ್ಬನದಾಗಳೆ ನಿಮ್ಮಯಾ
ದೋರ್ವಲಮಂ ಬಳಿಕ್ಕಮಿದಿರಾಗಿಮೆನುತ್ತುಸಿರ್ದಂ ಗಣೇಶ್ವರಂ ॥ ೪೭

ಚೋರರ್ಕಳುಮಂ ಬಗೆವೊಡೆ
ಜಾರರ್ಕಳುಮಂ ಬಿಗುರ್ವಡಿಪ ತೆರನಲ್ತದು ।
ವೀರರ್ಕಳನಳ್ಳಿಸುವುದು
ಸೂರರ್ಕಳಬಗೆಯುದಲ್ತು ಕೇಳೆಂದುಸಿರ್ದಂ ॥ ೪೭

ಜಿಂಗಯ್ಗಳ್ಸಲೆ ಸಾಸಿರಂಗಳೆಮಗುಂಟೆಂದೆಂಬ ಗರ್ವಂಗಳಿಂ
ಮೇಲ್ಗೈಯಪ್ಪವೆನುತ್ತೆ ಬಂದಿರಿಮದಕ್ಕೇನಾಯ್ತು ರಕ್ತಾಂಬುವಿಂ ।
ತಂಗೈಯಂ ನರೆ ಮಾಡಿ ತೋರ್ಪೆವೆನುತಂ ಕೂರ್ವಾಳ್ಗಳಿಂದೆಯ್ದಿ ಹ
ಸ್ತಂಗಳ್ಸಾಸಿರಮಂ ಸಮಂತು ತರಿವಂ ರುದ್ರಂ ಬಳಿಕ್ಕುಗ್ರರಂ ॥ ೪೮

ಬಿಡದೆ ದಿವಾಂಧಕಪ್ರಕೃತಿಯುಂ ಮಿಗೆ ನಿಂದು ಕರಂಗಳಿಂದೆ ಕ
ಣ್ಗಿಡಿಸಿದೊಡಾರಯಲ್ಕುಮುದಸಂತತಿಗಂತಳಲತ್ತು ಮಿನ್ಗಳು ।
ಗ್ಗಡಪೊಳಪಂ ಮುಸುಂಕಿದೊಡೆ ಸಂಗರಕೇಂ ದಿಟ ಬೀರರಪ್ಪಿರೇ
ಸಡಿ ಘಡಯೆಂದನುತ್ತೆ ಪಿಡಿದಂ ಮುಳಿದೀರ್ವರನೊಂದುಹಸ್ತದಿಂ ॥ ೪೯

ವ॥ ಬಳಿಕ್ಕಾಗಣೇಶ್ವರಂ ವೀರಭದ್ರನನುಜ್ಞೆಯಿಂ,

ಮೊರೆವ ಮಹೋಗ್ರಸರ್ಪರದನಂಗಳನಾದುರ್ಕೆ ಕೀಳ್ವವೋಲ್ಮಹಾ
ಹರಿಯುರುದಂಷ್ಟ್ರಮಂ ಮುರಿವವೋಲ್ಮದದಂತಿಯ ನೀಳ್ದ ದಂತಮಂ ।
ಭರದಿನುದಿರ್ಚುವಂತಿರದೆ ಪೂಷನ ಪಲ್ಗಳನಿರ್ಕುಳಿಂ ವಲಂ
ಪರಿವಿಡಿಯಿಂದೆ ಕೀಳ್ತು ನೆರೆ ಬೊಬ್ಬಿರಿವುತ್ತೆಸೆದಿರ್ದನಾಗಣಂ ॥ ೫೦

ಭಗದರ್ಶನವೆಂದೆಂಬುದು
[1] ಪಗರೊಳ್ಕಡುಕಷ್ಟವೆಂದು ಗಣವರನವನಾ ।
ಮೊಗಮಂ ನೋಡದೆ ಲೋಚನ
ಯುಗಮಂ ಮಿಂಟಿಸಿದನಾಗಳೆರ್ದಾಭಗನಾ ॥ ೫೧

ಪರಮೇಘನಾದನಾತಂ
ಧರೆಯೊಳ್ ಹಂಸಾಭಿಧಾನದಿಂ ತೋರ್ಪರಿವರ್ ।
ಪರಿಕಿಪೊಡಾತನ ದೆಸೆಯಿಂ
ಪಿರಿದು ಭಯಂ ಬರ್ಪುದಿವರ್ಗಿದೇನಚ್ಚರಿಯೋ ॥ ೫೨

1 ಜಗರೊಳ್ಕದಕಷ್ಟವೆಂದೊ

ಪದೆಪಿಂದಿವರಿರ್ವರ ಸೋ
ಲದ ಪೆರ್ಚುಗೆ ತನ್ನದೆಂದು ಮುಳಿದೇಳ್ತಂದಂ ।
1 ಬರ್ದಿಲರಾಣ್ಮಂ ತನ್ನಯ ಬಲ
ದೊದವಿಂದಂ ಸಂಗರಕ್ಕೆ ಮನವೊಲ್ದಾಗಳ್ ॥ ೫೩

ಐರಾವತವನಡರ್ದು ಮಿಗೆ
ಹೀರಾಯುಧವಿಡಿದು ಬರ್ಪ ಸುರಪನೊಡನೆ ಮದ ।
ವಾರಣಬಲವೇಳ್ತಂದುದ
ಪಾರಂ ಬೆಟ್ಟಕ್ಕೆ ಕಾಲ್ಗಳಾದಿಸಿದ ತೆರದಿಂ ॥ ೫೪

ಹರಿರಥಮಂ ಸಮಂತು ಸಲೆ ಮುಂಚುವ ಪೆರ್ಮೆಯನಾಂತು ರಂಜಿಪಾ
ಹರಿಹಯಮಂ ಬಳಿಕ್ಕಿರದೆ ತಮ್ಮಯ ಸತ್ವರದಿಂದೆ ಸೋಲಿಪೀ ।
ಹರಿಹಯವೃಂದವಂದಗಣಿತಂ ರಣಮಂಡಲದಲ್ಲಿ ನೋಳ್ಪಿನಂ
ಹರಿಗುರೆ ಥೀಂಕಿಡುತ್ತೆ ಬಳಿಕೆಲ್ಲಿಯುಮಾವರಿಸಿರ್ದುದಾಕ್ಷಣಂ ॥ ೭೫

ಬಲವೆಂಬಂಬುಧಿಯೊಳ್ಸಂ
ಚಲಿಸುವ ಬೈತ್ರಂಗಳೆಂಬಿನಂ ನವರತ್ನೋ ।
ಜ್ಜ್ವಲಿತರಥಂಗಳನಂತಂ
ಬಲಹರನಂ ಬಳಸಿ ಕಣ್ಗೆವಂದುವವಾಗಳ್ ॥ ೫೬

ಸುರರುಂ ಕಿಂಪುರುಷರ್ ಕಿ
ನ್ನರರುಂ ಗಂಧರ್ವರುಂ ಬಳಿಕ್ಕುರೆ ವಿದ್ಯಾ ।
ಧರರಪ್ಸರರುಂ ಸುರಪತಿ
ಯೆರಡುಂದೆಸೆಯಲ್ಲಿ ಬಂದರತಿಶಯದಿಂದಂ ॥ ೫೭

ಉಳಿದಾಶಾಪತಿಗಳ್ಬಳಿಕ್ಕದಟಿಸಿಂ ತಂತಮ್ಮ ದಿವ್ಯಾಯುಧಂ
ಗಳನಾಂತೊಪ್ಪುವ ವಾಹನಪ್ರತತಿಯಂ ತಾವೇರಿ ತಂತಮ್ಮಯಾ
ಬಳದಿಂದಿಂದ್ರನ ಪಿಂತೆಯುಂ ಬಳಸಿಯುಂ ಮೇಣ್ಮುಂತೆಯುಂ ಬಂದರು
ಜ್ಜ್ವಳತೇಜೋಮಯರಾಗಿಯಾಹವಧರಾಭಾಗಕ್ಕೆ ತಾವಳ್ಕರಿಂ ॥ ೫೮

ವ॥ ಇಂತೇಳ್ತರ್ಪಿಂದ್ರನ ಪೆರ್ಪಡೆಯುಂ ತ್ರಿಲೋಚನನೆಂಬ ಗಣೇಶ್ವರಂ ಕಂಡು ಎಲೆ ಸ್ವಾಮಿ ನಿನ್ನ ಪೂಣ್ಕೆಯುಂ ನಾನೇ ತೀರ್ಚಬರ್ಪೆನೆಂದು ವೀರಭದ್ರಂಗೆ ಬಿನ್ನವಿಸಿ ಮೇಘನಾದಂಗೆ ಬೆಂಬಲನಾಗಿ ನಿಜಬಲಂಗೂಡಿ ನಡೆತಂದು,

1 ಬರ್ದಿಲರಾಣ್ಮಂ.

ಅರೆವುಳಿಯಲಕ್ಕಿದಂ ಮ
ತ್ತರೆವುಳಿಯಂ ಬೊಬ್ಬೆಯುಬ್ಬೆಯಿಂದಟ್ಟಿದನಂ ।
ದರೆವುಳಿಯಂ ಕೈಪರೆಯ
ಬ್ಬರದಿಂದೋಡಿಸಿದನಾಗಣೇಶ್ವರನಾಗಳ್ ॥ ೫೯

[1] ತೇರ್ಗಳಿನಾತೇರ್ಗಳ ಮೊನೆ
ಯಾಳ್ಗಳಿನಾಳ್ಗಳನನೇಕಹಯದಿಂ ಹಯಮಂ ।
ನುಗ್ಗಪ್ಪಿನೆಗಮಿಡುತೆ ಕರ
ವಾಳ್ಗೊನೆಯಿಂದಿರಿದು ಕೆಡೆಪಿದಂ ಪರಬಲಮಂ ॥ ೬೦

ಮತ್ತಂ,

ಕಡುಮುಳಿಸಿಂದ [2] ಮೊರ್ಕರದಿನಾನೆಗಳಂ ನೆಗಳ್ದಾತ್ರಿಲೋಚನಂ
ಪಿಡಿದಿಡೆಯಾಗಸಕ್ಕಡರ್ದು ರಂಜಿಸುತಿರ್ದುವು ದೇವರಾಜನಿಂ ।
ಕಡಿವಡೆದಿರ್ದ ಗೂಡನಿರದೆತ್ತುವೆವೆಂದುರೆ ಸಗ್ಗಕೆಯ್ದೆ ದಾ
ಳಿಡುವ ನಗಪ್ರತಾನವೊ ಎನಲ್ಕಗೆ ರಾಜಿಸುತಂತರಿಕ್ಷದೊಳ್ ॥ ೬೧

ವ॥ ಇಂತಾ ತ್ರಿಲೋಚನನಿಂ ತನ್ನಯ ಬಲವೆಲ್ಲಂ ಬಯಲಾದುದಂ ಕಂಡಿಂದ್ರನಾತನೊಡನುಸುರ್ದನತೆಂದೆಂದೊಡೆ,

ಕಲಗೆಳೆನಿಪ್ಪವರ್ಬಲಕೆ ಬಲ್ಲಹರಾದವರಂ ಬಿಸುಟ್ಟು ಕೀ
ಳ್ಪಲವನೆ ಕೊಂದು ಕೂಗಿದೊಡೆ ಬೀರರ ಸಾಲ್ಗುರೆ ಸಲ್ಪರೇಯವ ।
ರ್ಬಲಯುತನಪ್ಪ ನನ್ನೊಡನೆ ನೀಂ ಸಮರಾಂಗಣದಲ್ಲಿ ನಿಲ್ದ ಕೂ
ರಲಗುಗುಳುತ್ತೆ ಬಾರೆನಲವಂಗದಟಿಂದುಸಿರ್ದಂ ಗಣೇಶ್ವರಂ ॥ ೬೨

ಬಲರಿಪುವೆಂದು ನಿನ್ನನುರೆ ಪೇಳ್ವುದು ಲೋಕಮದೆಂತು ನೀಂ ಕರಂ
ಬಲಯುತನಪ್ಪೆ ನೀನಬಲ [3] ನಾಶಕೆ ನಾನಿರದಂಜಿ ರಂಗದೊ ।
ಳ್ಕೊಲಲುರುದೋಷವೆಂದು ತಲೆಗಾಯ್ದೊಡದಂ ತಿಳಿದಿರ್ದುದಿಲ್ಲ ನೀ
ನಲಗಣಸೇ ಬಳಿಕ್ಕೆನಗೆ ನೀನೆ ವಿಚಾರಿಪುದ್ಯೆ ಪುರಂದರಾ ॥ ೬೩

ವ॥ ಇಂತೆಂದ ಗಣೇಶ್ವರಂಗಿಂದ್ರನೆಂದನದೆಂತೆಂದೊಡೆ,

ನನ್ನಿಯಿದಪ್ಪುದಾಂ ನಿನಗೆ ಪಾಸಟಿಯೇ ಬಗೆಯಲ್ ತ್ರಿಲೋಚನಂ
ನಿನ್ನೊಳಜಸ್ರವೊಪ್ಪುತಿದೆ ಸಾಸಿರಕಣ್ಣಿಸೆದಿರ್ಪುದಾರಯಲ್ ।

1 ತೇರ್ಗಳಿಂತೇರ್ಗಳಂಮೊನೆ. 2 ಮೊರ್ಕರಡಿ. 3 ನಾಶಲನನಾಜಿರಂಗದೊಳ್.

ನನ್ನೊಳದಾವಗಂ ಬಿಡದೆ ನನ್ನಯು ನಿನ್ನಯು ತಾರತಮ್ಯವಂ
ಪನ್ನಗಲೋಕಮುಂ ಮನುಜಲೋಕಮಮರ್ತ್ಯರುಮೆಯ್ದೆ ಕಾಣರೇ ॥ ೭೪

ವ॥ ಅದಕ್ಕಾಗಣೇಶ್ವರನಿಂತೆಂದಂ,

ಸಾಸಿರಕಣ್ಗಳುಂಟೆ 1 ನಿನಗಾಂ ಘನವೆಂದುಸಿರ್ವಯ್ ಬಳಿಕ್ಕ ನೀಂ
ಸಾಸಿಗನಪ್ಪುದಪ್ಪುದಿದು ತಪ್ಪದಲಾ ನಿನಗಾವ ರೀತಿಯೊಳ್ ।
ಸಾಸಿರಕಣ್ಗಳಾದುವದನೀಗಳೆ ಕೇಳ್ದೊಡೆ ಕೇಳ್ದರೆಲ್ಲರುಂ
ಪೇಸುವರ್ಕೈ ಬಳಿಕ್ಕನಿತು ನಾಣ್ದೊರೆದೂಳರೆ ಪಾಕಶಾಸನಾ ॥ ೭೫

ಪಣ್ಣಿದ ರಣದೊಳ್ನಿನ್ನಯ
ಕಣ್ಣೆಲ್ಲಮನೊಂದು ನಿಮಿಷಮಾತ್ರದೆ ಪಿರಿಯಾ ।
ಕಣ್ಣಿನಿಸಿ ತೋರದೊಡೆ ಮು
ಕ್ಕಣ್ಣಂ ನಾನಲ್ತು ಮೂರ್ಖ ಕೇಳೆಂದುಸಿರ್ದಂ ॥ ೭೬

ಸ್ಥಿರಮಲ್ಲದ ಬಿಲ್ಲಂ ಪು
ಷ್ಕರದೊಳ್ಮಿಗೆ ಪೊಳೆದು ಪೋಗುತಿರ್ಪಾಯುಧಮಂ ।
ಪಿರಿದುಂ ನಚ್ಚೀಗಳ್ಸಂ
ಗರಕೇಳ್ತಂದ್ಯೆ ಬಳಾರಿ ಭಾಪೆಂದುಸಿರ್ದಂ ॥ ೭೭

ವ॥ ಇಂತು ಗಣೇಶ್ವರನಪ್ಪಂಗೌದಾಸೀನೋಕ್ತಿಗಳಂ ಕೇಳ್ದು,

ನೆರೆಗೊಳ್ಳದ ಬಿಲ್ಲಿಂದಂ
ನೆರೆಗಡಿಪೆಂ ನಿನ್ನನಿಂದು ನಾಂ ತಳೆದೀ ಸಂ ।
ಚಲಿಸುವ ಖಡ್ಗದಿನಸು ಸಂ
ಚಲಿಸುವವೋಲ್ಮಾಳ್ಪೆನೆಂದನಾ ಗೋತ್ರಭಿದಂ ॥ ೭೮

ಬಗೆಯುದೆ ನಿನ್ನಂ ಕೊರ್ವೆಂ
ತೆಗೆವೆಂ ನನ್ನಳಲನಿನ್ನು ತಾಯುಸುರಂ ಮಿಗೆ ।
ಪೊಗುವುದು ನಿನಗಕ್ಕುಮೆ ಗಣ
ನಗೆಯುರ್ತೆಂದುಸಿರ್ದು ಬಿಲ್ಗೆ ಕೈಯಿಕ್ಕಲೊಡಂ ॥ ೭೯

ಬಾರದು ಬಿಲ್ಲದನುಳಿದುರು
ಹೀರಕೆ ಕೈಯಿಕ್ಕಿ ನೋಡಿದಂ ಚಲಿಸದೊಡದು ।

1 ನಿನಗೆನಾಂ.

ಪೇರಿಟ್ಟಿಗೆ ಕೈಸಾರ್ಚಿದ
ನೋರಂತದು ತೂಗದಿರೆ ಭಯಂಗೊಳುತಿರ್ದಂ ॥ ೭೦

ಸುರಗಿಗೆ ಕೈಸಾರ್ಚಿದೊಡದು
ತೆರಳದು ಖಂಡೆಯಕೆ ಕೈಯನಿಕ್ಕಿದೊಡಂ ತಾಂ ।
ಪರಿಯೊಳದು ಬಾರದಿರ್ದೊಡೆ
ಮರವಟ್ಟಂ ಮುಂದುಗೆಟ್ಟನಾ ಪುರುಹೂತಂ ॥ ೭೧

ಇನ್ನಿರ್ದೊಡೆ ಗಣವರನಿಂ
ನಾಂ ನೋವೆನೆನುತ್ತ ಬರ್ಹಿಯಾಕೃತಿಯಂ ತಾ ।
ಳ್ದುನ್ನತಿಗೆಟ್ಟೋಡುತ್ತುಂ
ತಾಂ ನೆಮ್ಮಿದನೊಂದು ಬೆಟ್ಟುವಂ ದೇವೇಂದ್ರಂ ॥ ೭೨

ನವಿಲಾಕೃತಿಯಿಂದೋಡಿದ
ದಿವದಾಣ್ಮನ ನೋಡಿ ಮೇಘನಾದಂ ತ್ರ್ಯಂಬಕ ।
ರವರಿರ್ವರ್ ಕೈವೊಯ್ದು ನ
ಗುವಿನಂ ಸುರಸೇನೆ ಬಂದು ಮುತ್ತಿದುದಾಗಳ್ ॥ ೭೩

ತೋಳ್ತುರುಗ 1 ಲ್ಕೇಸುರಿಯುಂ
ಕಳ್ತಲೆ ಕಾಳ್ಗಿಚ್ಚನೆಯ್ದೆ ಮುತ್ತುವ ತೆರದಿಂ ।
ಪೊಳ್ತುವನುರೆ ಗೆಲ್ದನ ಬ
2 ಲ್ತೊಳ್ತಂ ಮುಕ್ಕುರಿಸಿತಖಿಳಸುರಬಲವಾಗಳ್ ॥ ೭೪

ಪಡೆ ಕವಿಯಲ್ಕಡಂಗಿದನೆ ಮೇಣ್ಪ್ರತಿಗುಂದಿದನೇ 3 ಪೊಡರ್ಪದೇ
ನುಡುಗಿತೆ ತೇಜದೇಳ್ಗೆಯುದ ಪ್ಪೆಸರಿಸಿತ್ತೆ ಬಿಗುರ್ಪೊದಳ್ದುದೇ ।
ಕಡುಪಳಿಯಿತ್ತೆ ಮತ್ತವನ ದೋರ್ವಲಮಾಗಳೆ ಮುನ್ನಿನಿಂದೆ ನೂ
ರ್ಮಡಿಸಿತು ಪೇಳ್ವರಾರವನ ಬೀರದ ಪೆರ್ಚುಗೆಯಂ ಧರಿತ್ರಿಯೊಳ್ ॥ ೭೫

ಕರ್ಬಸುಗಳ ಜಂಗುಳಿಯಂ
ಪೆರ್ಬುಲಿ ಮುರಿವಂತೆ ವೈರಿಬಲವಂ ತ್ರ್ಯಂಬಕ ।
ನೊರ್ವನೆ ಮುರಿದುರೆ ಗರ್ಧದೊ
ಳುರ್ವುತ್ತಿರ್ದಂ ಮಹಾರಣಾಂಗಣದೆಡೆಯೊಳ್ ॥ ೭೬

---

1 ಕೇಸುರಿಯಿಂ. 2 ಲ್ತೋಳ್ತಂ. 3 ಪೊಡರ್ಪುದೇ.

ವ॥ ಇಂತು ದೇವಸೇನೆ ಬಯಲಾಗಲುಳಿದ ದಿಕ್ಪತಿಗಳ್ತಮ್ಮ ಮನದೊಳ್ನಿಳಿಂ ಪಾಥೀಶ್ವರಂ ನಡೆದುದೇ ಮಾರ್ಗವೆಂದು ಪೋಗಲುಜ್ಜುಗಿಸಿರ್ಪನವರಿದೋ ರೊರ್ವರಂ ಪಚಾರಿಸಿ ಶಿಕ್ಷಿಸುತ್ತಿರ್ದನದೆಂತೆಂದೊಡೆ,

ಅವಿಚಾರಿತ್ವಂ ಕರಂ ಪೊರ್ದಿದ ತಳಕಡರಂ ಮಾಳ್ಪುದುಂ ಸರ್ಪಭಕ್ಷಿ
ತ್ವವೆ ನಿನ್ನಂಗಂ ಬಳಿಕ್ಕಂ ಭವದವಗುಣಮಂ ನೋಡಲಿಂಬುಂಟೆ ನಿನ್ನಂ ।
ತವೊಲಿರ್ಪೀದಕ್ಷನೆಂಬಂಗುರುತರಸಖನಾಗಿರ್ದೆಯೆಂದಗ್ನಿಯಿಂದೊ
ಪ್ಪುವ ಜಿಹ್ವಾಮೂಲಮಂ ತುಂಡಿಸಿ ಮಿಗೆ ನಲವುತ್ತಿರ್ದನಾರುದ್ರನಾಗಳ್ ೭೭

ಧರೆಯೊಳ್ಧರ್ಮವೆನಿಪ್ಪನಾಮವನೊರಲ್ದಾಂತಿರ್ದು ನಿರ್ದೈವನಾ
ಗಿರುತಿರ್ದೀತನ ಜನ್ಮಮಂ ಸಲಪಲೆಂದೇಳ್ತಂದ ಮಾಪಾಪಿಯೆಂ ।
ದರವಿಂದಾಪ್ತನ ಪುತ್ರನಂ ಜಡಿದು ದೋರ್ದಂಡಂಗಳಂ ಕೋಪದಿಂ
ದರಿದಂ ದಂತಿಯ ಹಸ್ತಮಂ ಕಡಿವ ಸಿಂಗಂಬೋಲ್ಗಣಾಧೀಶ್ವರಂ ॥ ೭೮

ಸುಷ್ಟುಂ ಪಾಪಿಷ್ಠನೀತಂ ರಗುತದ ಕಡಲಂ ಪೀರ್ದು ಮಾಂಸಕ್ಕೆ ಬಾಯಂ
ಬಿಟ್ಟಿರ್ಪಾತಂ ಸದಾ ದಕ್ಷನ ಮಖಕುರುವಾಚಾರ್ಯನಾಗಿರ್ದನೀತಂ ।
ಮಟ್ಟಕ್ಕಾಂ ತರ್ಪೆನೆಂದಾ ದನುಜನನದಟಿಂದಂ ಪೆಡಂಗೈಯನಾಗ
ಳ್ಕಟ್ಟುತ್ತೊಪ್ಪಿರ್ದನೇಗಂಗಣವರನನಿಪೀ ತ್ರ್ಯಂಬಕಂ ಪೆರ್ಮೆಯಿಂದಂ ॥ ೭೯

ಪಿರಿದುಂ ಜನ್ನದ ಕೂಳನುಂಡೊಲೆವುತುಂ ಪೆರ್ಚಿರ್ಪ ಪೆರ್ಬೊಟ್ಟೆಯು
ಬ್ಬರದಿಂ ಮೆಲ್ಲನೆ [1] ಪೋರಿಸಲ್ವರುಣನೆಂಬಾತಂ ಕನಲ್ದಾತನಂ ।
ಮರುಳೊಂದಾರ್ಭಟಿಸುತ್ತೆ ಪೇರೊಡಲನಾಗಳ್ಗುರ್ದಿಯಿಂಡಿರ್ದುದಂ
ಭರದಿಂ ಕಾರಿಸಿ ರಿಂಗಣಕ್ಕೆ ಮನಸಂದತ್ತೆಲ್ಲರುಂ ನೋಳ್ಪಿನಂ ॥ ೮೦

ಪರಮೇಶದ್ವೇಷಿಯೊಳ್ಮಿತ್ರತೆಯನೆಸಗಿದಂಗೆಯ್ದೆ ಮುನ್ನುಳ್ಳ ಭಾಗ್ಯಂ
ಸರಿಗುಂ ತಾನೆಂದು ಪೇಳ್ಪುರ್ಬಿಧವರರದನೀಗಳ್ಕರಂ ಕಂಡೆವೀಯು ।
ಧ್ವರದೊಳ್ದಕ್ಷಂಗೆ ಮಿತ್ರತ್ವವನೆಸಗುವಿನಂ ವೇಗವೇಗಂ ಕಿಡುತ್ತುಂ
ಮರುತಂ ಕಾಲ್ಗೆಟ್ಟಿರಲ್ಕಾಗಲವನ ವೃಷಣಂಗೊಯ್ಸಿದಂ ತದ್ಗಣೇಂದ್ರಂ ॥ ೮೧

ಸ್ಮರನಾಶಂಗಾಪ್ತನೆಂಬೀ ನೆಗಳ್ದುರುಯಶಮಂ ತಾಳ್ದಿರುತ್ತುಂ ಬಳಿಕ್ಕಾ
ಹರವೈರಂಬೆತ್ತು ಯಜ್ಞಕ್ಕುಕರೆ [2] ಕೆಲಚಿಸಿಸಲ್ ಶ್ರೀದಪಾದಂಗಳಂ ತೋ ।

---

[1] ಪೋರಿಸಂ. [2] ಕೆಲಜನಿಸಲ್.

ಮರದಿಂದುಂ ತುಂಡುಗೆಯ್ವಂ ಪುರಹರನವತಾರಂ ಗಣೇಶಂ ದಿಟಕ್ಕಾ
ವರಮಿತ್ರದ್ರೋಹಿಗಳ್ಗಾವಸುಮತಿಯೊಳದೇಂ ಬಾಳ್ಕೆಯುಂಟೇ ಬಳಿಕ್ಕಂ ॥ ೮೨

ಶಶಿಚೂಡಾಲಾಂಧನಂದಾಳ್ದ ಸೆದವರೊಲವಿಂ ನೋಡೆಯಜ್ಞಾನದಿಂದಾ
ಶಶಿಚೂಡದ್ರೋಹಮಂ ಮಾಡೆ ವಧೆಗೆಯುವರ್ಗಳ್ಯೋಗ್ಯ 1 ರಲ್ತೆಂದುಮೇಕಾ ।
ದಶರುದ್ರಖ್ಯಾತರಂ ದಿಗ್ವರಪಶುಪತಿಯುಂ ಮೇಣ್ಬಿಡುತ್ತೆಯ್ದೆ ಮಿಕ್ಕಾ
ದ ಶಿವದ್ರೋಹಿಪ್ರತಾನಂಗಳನುರೆ ಸದೆದಂ ತ್ರ್ಯಂಬಕಂ ಪೆರ್ಮೆಯಿಂದಂ ॥ ೮೩

ವ॥ ಆಗಳ್,

2 ಅರೆ ಉಳೆ ಸಗ್ಗಿಗರ ಬಳಂ
ಸರಿವುತ್ತಿರೆ ಮೇಘನಾದನುಂ ತ್ರ್ಯಂಬಕನುಂ ।
ಭರದಿಂದರೆಯಟ್ಟುತ್ತೆ ಸಂ
ಹರಿಸಿದರಾಬಲವನೆಲ್ಲವಂ ತತ್ಕ್ಷಣದೊಳ್ ॥ ೮೪

ಒಡಿವಡೆದರ್ಕೆಲರ್ಮುಡಿದವರ್ಪಲರಾಹವದಲ್ಲಿ ನೋಳ್ಪಿನಂ
ಒಡಿವಡೆದರ್ಪಲರ್ನುಸುಳ್ದವರ್ಕೆಲದಲ್ಲ ಸಮಂತು ಶೈಲಮಂ ।
ಬಿಡದಡರ್ದರ್ಪಲರ್ಜಲದೊಳಳ್ದವರಲ್ಲಿ ಪಲರ್ಬಳಿಕ್ಕೆ ಪು
ಲ್ವಡಿದದಟರ್ಕೆಲರ್ಪರಿದು ಪುತ್ತವನೇರಿ ಪಲುಂಬಿದರ್ಪಲರ್ ॥ ೮೫

ಪರಮದ್ರೋಹಿಗಳಾದ ದೇವತತಿಯುಂ ತಾಳ್ದಿರ್ದ ಮಾಥಾರಮಿಂ
ದರೆಯಾಯ್ತೆಂದವನೀವಧೂಟಿ ಪದೆಪಿಂ ಪೆರ್ಚುತ್ತೆ ಸಂರಂಭದಿಂ ।
ಪಿರಿದುಂ ತಾಳ್ದನುರಾಗಮುರ್ವಿ ಪರಿದಂತಂದಾಧರಾಭಾಗದೊ
ಳ್ಪರಿವುತ್ತಿತ್ತುದು ರಕ್ತವಾಹಿನಿ ಗಣವ್ರಾತಕ್ಕೆ ಸಂತೋಷಮಂ ॥ ೮೬

ಶಿವಯೆಂಬೆರಡಕ್ಕರಮುದು
ಭವಮಂ ಬಹುಪಾತಕಂಗಳಂ ಕಿಡಿಸುವವೋ ।
ಲವರೀರ್ವರೆ ದಿಗ್ವರರಂ
ದಿವಿಜಬಲವ್ರಜಮನೆಯ್ದೆ ತವಿಸಿದರಾಗಳ್ ॥ ೮೭

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹಮೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿಸಂಚಯಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿಡೆನಿಸಿ ವೀರಭದ್ರ ವಿಜಯಂ ಮೆರೆದಿಪುದು ಭೂತಳಾಗ್ರದೊಳ್ ॥ ೮೮

---

1 ರಲ್ತೆಂದದೇಕಾ. 2 ಅರೆವುಳೆ.

ಮುಳಿಯಲಗೇಂದ್ರಜಾತ ತರೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದಿ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ಪಿನಿಂ ।
ತುಳಿಲನೊಡರ್ಚದೊಲ್ದು ಮೊಗದೊಳ್ಮೊಗವಿಕ್ಕುತೆ ಸಂತವಿಟ್ಟುಬಾಂ
ಬೊಳೆಗೊಲವಿತ್ತ ಜಾಣ ಸಲಪೀಜಗಮಮಂ ಗುರುವಿಶ್ವವಲ್ಲಭಾ ॥ ೮೯

ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊಳ್
ಳ್ಪರೆದ ರಜಮು[1] ನಿರದೆ ಸವಿದು ತಣಿದು ತನ್ನ ಲೀಲೆಯಿಂ ।
ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮಿಾಗಭೀಷ್ಟಮಂ ॥ ೯೦

ಇದು ಸಮಸ್ತಭುವನಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾ
ಜಿತಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದ
ಮಧುಕರಾಯಮಾಣ ಶ್ರೀಕಂಠಪಂಶಾರ್ಣವಪೂರ್ಣಚಂದ್ರನೆನಿಪ
ಸತ್ಯವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ ಶ್ರೀ ವೀರ
ಭದ್ರವಿಜಯ ಮಹಾಪ್ರಬಂಧದೊಳ್ ದಕ್ಷಪುರೋತ್ಪಾತ
ವರ್ಣನಮಾಸುರಮೂರ್ತಿದಕ್ಷಸಂವಾದದೇವಸೈನ್ಯ
ಪ್ರಮಥಯುದ್ಧಪೂಷಭಗದಂತನೇತ್ರಾಪಹರಣ
ದೇವೇಂದ್ರಪಲಾಯನದಿಕ್ಪಾಲಶಿಕ್ಷಾವರ್ಣನ
ಮೇಕಾದಶಾಶ್ವಾಸಂ ಸಂಪೂರ್ಣಂ.

---

[1] ನುರಡೆ.

# ದ್ವಾದಶಾಶ್ವಾಸಂ

ತಲೆಗಳನಂತಂ ಕೊರಲೊ
ಳ್ಗಿಲೆಗೊಂಡುಂ ಪಂಚವಕ್ತ್ರನೆಂಬೀಪೆಸರಂ ।
ಸಲೆ ತಾಳ್ದಿಂತಾಶ್ಚರ್ಯಕೆ
ನೆಲೆಯೆನಿಸಿದ ವಿಶ್ವನಾಥ ರಕ್ಷಿಪುದೆಮ್ಮಂ ॥ ೧

ಅಂತಖಿಳದೇವಬಲವೆ
ಲ್ಲಂ ತಪ್ಪರ್ ವಿಷ್ಣುವಿರ್ದೆಡೆಗೆ ದಕ್ಷಂ ಭಯ ।
ವಾಂತು ಮುಖಕಾಂತಿ ಮಸುಳಿಸಿ
ಚಿಂತೆಯಿನೇಳ್ತಂದು ಮೆಲ್ಲನಿಂತೆಂದುಸಿರ್ದಂ ॥ ೨

ಖಂಡಶಶಾಂಕಶೇಖರನೊಳೊಳ್ಗಿತೆ ವೈರಮಿದೆಂದು ನನ್ನಯಾ
ಪೆಂಡಿತಿ ನಾಡೆ ಪುಲ್ವಿಡಿದು ಸಾರಿದಳಂದು ತನೂಜೆ ಮುನ್ನಮೇ ।
ಕಂಡವೊಲೆಯ್ದೆ ಪೇಳ್ದಳುರುಮಂತ್ರಿಯೆನಿಪ್ಪನ ಮಾತನೊಕ್ಕೆನಾಂ
ಕಂಡೆನದಕ್ಕೆ ತತ್ಫಲವನೆಂದೊರೆದಂ ಖಳನಾಮುರಾರಿಯೊಳ್ ॥ ೩

ವ॥ ಅದಕ್ಕಾವಿಷ್ಣುವಿಂತೆಂದಂ.

ಚಿಂತೆಯದೇಕೆ ದಕ್ಷ ಸಮರಾಂಗಣದೊಳ್ಮಿಗೆ ಸಾವು ಕೇಡದ
ಭ್ಯಂತರದಲ್ಲಿ ಒಕರ್ಗಮೆ ಮಹೋದಧಿಗೊರ್ಚರೆನೀರ್ಸುರಾದ್ರಿಗೋ ।
ರಂತರೆಗಾಣಿ ಕುಂದಿದೊಡೆ ಪೆರ್ಮೆಗೆ ಹಾನಿಯೆ ದೇವತಾಬಲ
ಕ್ಕಿಂತಳಿವೆಯ್ದೆ ಸಾರ್ದೊಡೆ ಬಳಿಕ್ಕದಕಳ್ಕುವರೇ ಪ್ರತಾಪಿಗಳ್ ॥ ೪

ಎನ್ನಯ ದೇಹಮುಳ್ಳನಿತುಪೊಳ್ತು ಮುನಿಪ್ರಕರಾಧ್ವರಕ್ಕೆ ಮೇ
ಣ್ನಿನ್ನಸುವಿಂಗೆ ಕೇಡನುರೆ ತರ್ಪನ ತಾಯ್ಪುಸಿ ಚಿಂತೆ ಬೇಡಿದ ।
ಕ್ಕೆನ್ನನೆ ನಂಬಿರೆಂದು ಕಳುಪುತ್ತವನಂ ಬಳಿಕಿತ್ತ ಕಾಳೆಗ
ಕ್ಕನ್ನತಿಯಿಂದೆ ಬಂದನೊಲವಿಂದವೆ ಪೆರ್ವ್ಯಲಗೂಡಿ ಮಾಧವಂ ॥ ೫

ಎಲ್ಲ ನೋಡಿದೊಡಲ್ಲಿಯಾತನ ಬಿಲ್ಲಲಂಕೃತಿ ಮತ್ತದ
ರ್ಥೆಲ್ಲ ನೋಡಿದೊಡಲ್ಲಿಯಾತನ ವಾರಣಂಗಳ ಬೃಂಹಿತಂ ।
ಎಲ್ಲ ನೋಡಿದೊಡಲ್ಲಿಯಾತನ ವಾರುವಂಗಳ ಹೇಷಿತಂ
ನಿಲ್ಲದಾವರಿಸಿತ್ತು ಲೋಕವನೆಲ್ಲವಂ ಸಿರಿಯಾಣ್ಮನಾ ॥ ೭

ಎಲ್ಲ ನೋಡಿದೊಡಲ್ಲಿಯಾತನ ಬಾಣಭೀಂಕೃತಿ ಮತ್ತದ
ರ್ಥೆಲ್ಲ ನೋಡಿದೊಡಲ್ಲಿಯಾತನ ತೇರ ಚೀತ್ಕೃತಿ ಸಂತತಂ ।
ಎಲ್ಲ ನೋಡಿದೊಡಲ್ಲಿಯಾತನ ಸೇನೆಯುಬ್ಬರದುಬ್ಬರಂ
ಘಲ್ಲಿಸಿತ್ತಿಳಿಯೆಲ್ಲವಂ ರಣರಂಗದಲ್ಲಿ ಮುರಾರಿಯಾ ॥ ೭

ವ॥ ಆಗಳ್,

ಎಳೆದೇರನಡರ್ದು ಮಿಗೆ ಮು
ಪ್ಪೊಳಲಂ ದಹಿಸಲ್ಕೆ ಪೋಪಥವನೆಂಬಿನೆಗಂ ।
ಪೊಳೆವ ಮಣಿರಥಮನಡರ್ದಾ
ಗಳೆ ತಳರ್ದಂ ವೀರಭದ್ರನಭಿನವರುದ್ರಂ ॥

ಹಿಂದೆ ಪಶುಪತಿಗೆ ಸಾರಥಿ
ಯೆಂದೆನಿಸಿದ ಬಿದಿಯೆ ತಾನೆ ಸಾರಥಿಯಾಗಲ್ ।
ಕ್ತಿಂದಂ ವೀರಂಗಾಗಣ
ವೃಂದಂ ಜಯಜಯಯೆನುತ್ತೆ ಮಿಗೆ ಪೊಗಳ್ವಿನೆಗಂ ॥ ೯

1 ಪಗಲೊಳ್ಪ್ರಭೆಯಾತನ ಸಿರಿ
ಮುಗುಳ್ಡವನೋರ್ಲ್ವೆಸೆ 2 ಕುಂದೆನೆನುತುಂ ಸಾರ್ದಾ ।
ಮೃಗಧರಬಿಂಬವೊ ತಾನೆನೆ
ನೆಗಪಿದ ನವಮೌಕ್ತಿಕಾತಪತ್ರಂ ಮೆರೆಗುಂ ॥ ೧೦

ಬಿಡದೆ ಢಾಳಿಪ ಚಾಮರಂಗಳ ಮಧ್ಯದೊಳ್ಮಿಗೆ ರಂಜಿಪಾ
ಮೃಡಕುಮಾರನ ವೀರಭದ್ರನ ಚಾರುವಕ್ತ್ರಮದೊಪ್ಪುಗುಂ ।
ಸಡಗರಂಬಡೆದಾಡುತೊಪ್ಪುವ ರಾಜಹಂಸಯುಗಂಗಳಾ
ನಡುವೆ ಕಣ್ಗೆ ವಿರಾಜಿಸಿರ್ಪ ನವೀನಕಂಜಮಿದೆಂಬಿನಂ ॥ ೧೧

ನೆಗಪಿದ ವೃಷಧ್ವಜಂಗ
ಳ್ಗಗನಾಂಗಣದಲ್ಲಿ ತೋರ್ಪ ಸುರಗಂಗೆಯು ವೀ ।

1 ಪೊಗರೊಳ್ಪ್ರಭೆ. 2 ಕುಂದದೆನುತುಂ.

ಚಿಗಳಿನ ಕಣ್ಗೆಸೆದುವು ಕಾ
ಳೆಗಕಂದಾವೀರಭದ್ರನೇಳ್ತ ಪಾರ್ಗಳ್ ‖ ೧೨

ವ‖ ಇಂತನಂತವ್ಯೆಭವದಿಂ ತನ್ನ ಸಮಸ್ತಬಲಂಗೂಡಿ ಸಮರಾಂಗಣಮಂ ಪುಗುವಾಗಳ್,

ಇದೆ ಬಂದಂ ಕಾಲಶೈಲೋಜ್ಜ್ವಲಪವಿಧರನೀಬಂದನುಗ್ರಂ ಭವಂ ತಾ
ನಿದೆ ಬಂದಂ ಶಂಬರಾರಾತಿವಿಪಿನದವನೀಬಂದಿನೀಶಂ ಮಹೇಶಂ ।
ಇದೆ ಬಂದಂ ನೋಡಿಮಾಯಧ್ವರಹರನೆನಿಪೀ ವೀರಭದ್ರಂ ಬಳಿಕ್ಕಿಂ
ತಿದೆ ಬಂದಂ ಬಂದನೆಂದುಣ್ಮುವ ಘನಕಹಳಾರಾವವೊಪ್ಪಿರ್ದುದಾಗಳ್ ‖ ೧೩

ಆಕಹಳಾರವಮಂ ಬಿಡ
ದೇ ಕೇಳುತ್ತೊಡ್ಡು ತಿರ್ದುದಾಹರಿಯ ಬಲಂ ।
ಲೋಕತ್ರಯವಿಧುಘನಶರ
ಭಾಕಾರನ ಮುಂದೆ ಹರಿಬಲಂ ನಿಂದಪುದ ‖ ೧೪

ನಾರಿಯನುನ್ಮರಿಗೇರಿಸುತ್ತವೆ ನೋಡಿ ಟಂಕೃತಿಗೆಯ್ವಿನಂ
ವೀರಭದ್ರನದಾಗಳೇ ಕಡೆಗಾಲದಲ್ಲಿ ವಿರಾಜಿಪಾ ।
ಭೈರವಸ್ವನದಿಂದೆ ನೂರ್ಮಡಿಯಾಗಿಯಂದದು ಪೊಣ್ಮಿ ಸಂ
ಹಾರಮಾದುದು ಕೇಳ್ದು ಮಾರ್ಬಲಮೆಲ್ಲಮೊಂದು ನಿಮೇಷದೊಳ್ ‖ ೧೫

ವರಜಹ್ನುಗಿದಿರ್ಚಿದ ನಿ
ರ್ಜರದೀರ್ಪಿಕೆಯಂತದಂದು ಬಯಲಾದತ್ತಾ ।
ಹರಿಯುರುಪರಿವಾರಂ ಸಂ
ಗರದಿಳೆಯೊಳ್ವೀರಭದ್ರನಿದಿರೊಳದಾಗಳ್ ‖ ೧೬

ವ‖ ಇಂತು ಬಲಂ ಬಯಲಾಗೆ ಹರಿಯಿಂತೆಂದಂ,

ಆಳ್ವಲಮಡಂಗಿದೊಡೆ ಮೇಣ್
[1] ತೋಳ್ವಲಮದಡಂಗಿಪೋಯ್ತು ಬಲಗೈಯವರ್ಗುರೆ ।
ತೋಳ್ವಲಮೇ [2] ಬಲಮೆನೆ ಕರ
ವಾಳ್ವಿಡಿದೆಳ್ತಂದನಾಹವಕೆ ಕಂಸಹರಂ ‖ ೧೭

1 ತೋಳ್ವಲವೋಡಂಗಿಪೋಯ್ತು. 2 ಬಲಮೆನುತೆಕರ. 3 ಸವರ.

ಕರವಾಳ್ಕೈಯೊಳಡಂಗ
ಲ್ಪರಿದಚ್ಚರಿವಡುತೆ ಶಾರ್ಙವಂ ಪಿಡಿದೇರಿಸಿ ।
ತಿರುವಾಯ್ಗೊಗ್ಗಲ್ದು ಮಹಾಸ್ತ್ರೋ
ತ್ಕರಮಂ ಬಿಡದೆಚ್ಚನಾಗಳಾದನುಜಹರಂ ॥ ೧೮

3 ಬವರದೊಳಚ್ಚು ನೇತ್ರನಿರದೆಚ್ಚ ಶರವ್ರಜಮಾಗಳಳ್ಗಿಪೋ
ದುವು ಶಿವಭಕ್ತಿವರ್ಜಿತನೊಡರ್ಚಿದ ನಿರ್ಮಳಪುಣ್ಯಕರ್ಮದಂ ।
ತೆವೋಲದನೀಕ್ಷಿಸುತ್ತೆ ಮಿಗೆ ಘೂರ್ಣಿಸಿ ಮಂತ್ರಶರಂಗಳಂ ಬಳಿ
ಕ್ಕವಗಡಿಸುತ್ತೆ ಬೊಬ್ಬಿರಿವುತೆಚ್ಚನಸೂಯದೆ ವೀರಭದ್ರನಾ ॥ ೧೯

ವರಚಾಂಪೇಯುಮನೊಲವಿಂ
ಪರಿತಂದು ಮುಸುಂಕಿ ತೋರ್ಪ ಬವರಂಗಳವೋಲ್ ।
ಹರಿಯುರುಮಂತ್ರಾಸ್ತ್ರಂಗ
ಳ್ಪರಿಭವಮಂ ಪಡೆದುವೆಯ್ದೆ ವೀರಭದ್ರನ ಪೊರೆಯೊಳ್ ॥ ೨೦

ಬಳಿಕಾಮಂತ್ರಾಸ್ತ್ರಂಗ
ಳ್ಪಿಳಯುಮನೆಯ್ದಲ್ಕೆ ಕಂಡು ವೈಷ್ಣವಬಾಣಂ ।
ಗಳಿನಾರ್ದೆಚ್ಚಂ ದಾನವ
ಕುಳಪರ್ವತವಜ್ರಪಾಣಿ ಹರಿ ಮುಳಿಸಿಂದಂ ॥ ೨೧

ಹರಿ ಮುಳಿದೆಚ್ಚ ವೈಷ್ಣವಶರಂ ಸರೆ ವೀರನ ಸಾರುತಲ್ಲಿ ಬೆಂ
ದುರಿದುರೆ ಬೂದಿಯಾದುವು ಮನೋಜಶಿಲೀಮುಖವಂದು ಚಂದ್ರಶೇ ।
ಖರನಿದಿರಲ್ಲಿ ಚುರ್ಚಿದವೊಲಂತದನೀಕ್ಷಿಸಿ ಮುಂದುಗಾಣದೇ
ಮರಲ್ದು ಶರಕ್ಕೆ ಕೈದುಡುಕುತಿರ್ಪವನೊಳ್ನಡಿದಂ ಮಖಾಂತಕಂ ॥ ೨೨

ಕರವಾಳ್ಕೈಯೊಳಡಂಗಿಪೋದುದು ಮಹಾಬಾಣೋತ್ಕರಂ ನೋಳ್ಪನಂ
ಮುರಿದತ್ತಲ್ಲಿಯೆ ನಾಡೆ ಮಂತ್ರಶರಸಂದೋಹಂ ಬಳಿಕ್ಕಾಗಳೇ ।
ಸರಿದತ್ತಾರಯೆ ವೈಷ್ಣವಾಸ್ತ್ರನಿಕುರುಂಬಂ ಬೀರಮಳ್ದಲ್ಲಿ ಬೆಂ
1 ದುರಿದತ್ತಂದದನೀಕ್ಷಿಸುತ್ತರಿವವಂ ತಾಂ ಚಿಂತಿಸಲ್ವೇಡವೇ ॥ ೨೩

2 ಅರಿಯದವರ್ಗೆನ್ನ ಸಾಸದ
ಕುರುಪಂ ನಾಂ ತೋರ್ಪೆನೆಂದು ಗರುಡನೆರಂಕೆಯ ।
3 ನುರೆ ಪರಿದು ಪಿಡಿದ ಬಿಲ್ಲಂ
ಮುರಿದಂ ಶರವೊಂದರಿಂದಮೋ ವೀರೇಶಂ ॥ ೨೪

---

1 ದುರಿದತ್ತಿದನೀಕ್ಷಿಸು. 2 ಅರಿಯ ದಿರ್ಪಂಗೆ ಸಾಸದ. 3 ದುರೆ.

ವ॥ ಇಂತು ಗರುಡನೆರಂಕೆಗಳ್ಪರಿವಟ್ಟೊಡಂ ವೀರಂಮುರಿಯದೆ ಗದೆ ಗೊಂಡಿಡೆ,

ಆಗದೆಯಾಗಸದೊಳ್ಬಯು
ಲಾಗೆ ಮುರಧ್ವಂಸಿ ಬೆಕ್ಕಸಂಬಟ್ಟುರೆ ತಲೆ ।
ದೂಗುತೆ ವೀರೇಶನೊಳಂ
ದಾಗಳ್ನುಡಿದಂ ನಯೋಕ್ತಿಗಳನೊಲವಿಂದಂ ॥ ೨೫

ನೀನಾರ್ನಿನ್ನಯ್ಯನ ಪೆಸ
ರೇಸಿದನೆನಗರಿಪೆನಲ್ವೊದಳ್ದೊಪ್ಪುವ ಹಸಿ ।
ತಾನನದೆ ವೀರಭದ್ರಂ
ತಾನಂದುರೆ ಪೇಳ್ದನಿರದೆ ಮಧುಸೂದನನೊಳ್ ॥ ೨೬

ಜನಕಂ ಬೇರೆನಗೊರ್ವನುಂಟೆ ನಿನಗಂ ಬ್ರಹ್ಮಾದಿಗಳ್ಗಂ ಮಹಾ
ಜನಕಂ ತಾನೆನಿಸಿರ್ಪುಮಾರಮಣನೇ ಮತ್ತಾತನಿಂತೆನ್ನಯಾ ।
ಘನನಾಮಂ ಸಲೆ ವೀರಭದ್ರನೆನಿಕುಂ ಕೇಳೆಂದೆನಲ್ಕೋಪದಿಂ
ಜಿನುಗುತ್ತಂ ದನುಜಾರಿಯುಂದುಸಿರ್ದನಾ ವೀರೇಶನೊಳ್ಪೆರ್ಮೆಯಿಂ ॥ ೨೭

ಎನ್ನಂ ಪೆತ್ತವನೊರ್ವನುಂಟೆ ಜಗಮಂ ನಾಂ ಪೆತ್ತವಂ ನೋಳ್ಪೊಡೀ
ಯೆನ್ನೀಕುಕ್ಷಿಯೊಳಾಚತುರ್ದಶಜಗಂ ತಾನಿರ್ಪುದೆಲ್ಲಾಗಳುಂ ।
ನನ್ನೀನಾಭಿಸರೋಜದೊಳ್ಜನಿಸಿದಾತಂ ಬ್ರಹ್ಮನಂತಾತನಾ
ಚೆನ್ನಂತೋರ್ಪ ಲಲಾಟದೊಳ್ಜನಿಸಿದಂ ನಿಮ್ಮಯ್ಯನಂದೊಳ್ಪಿನಿಂ ॥ ೨೮

ಅದರಿಂ ಸತ್ವಗುಣಂ ನನತ್ತು ತನತಾಬ್ರಹ್ಮಂಗೆ ತೋರ್ಪಿರ್ಪರಜೋ
ಭ್ಯುದಯಂ ನಾಡೆ ನಿಮತ್ತು ತಾಮಸಗುಣಂ ನೀನೊರ್ಮೆಯುಂ ನಮ್ಮ ಧಾ ।
ಗ್ಯದ ಪೆಂಪಂ ಸಲೆ ತಾರತಮ್ಯದಿರವಂ ಕಂಡಾತನಲ್ತಂದವಂ
ಪದೆಪಿಂ ಪೇಳೆ ನಗುತ್ತೆ ವೀರನುಸಿರ್ದಂ ವೇದೋಕ್ತಮಾದುಕ್ತಿಯಿಂ । ೨೯

ಜಗಮಂ ಪುಟ್ಟಿಪ ಸಾಸಮಂ ಬಳಿಕದಂ ರಕ್ಷಣ್ಯಮಂ ಮಾಡುವು
ಜ್ಜುಗಮಂ ಮೇಣದನೆಯ್ದೆ ಸಂಹರಿಸುವಾಸಾಮರ್ಥ್ಯದೌನ್ನತ್ಯಮಂ ।
ಬಗೆದಂದಾವಿಧಿಗಂ ಡಿಟಕ್ಕೆ ನಿನಗಂ ರುದ್ರಂಗವಿತ್ತಾಲಸ
ತ್ರಿಗುಣಾತೀತಮಹೇಶ್ವರಂಗೆ ಗುಣಮಂ ನೀಂ ಕಲ್ಪಿಸಲ್ಬರ್ಕುಮೇ ॥ ೩೦

ಬಗೆಯಲ್ ನೀಂ ಪ್ರಕೃತಿಸ್ವರೂಪನೆನಿಸುತ್ತಿರ್ಪಾತನಾರುದ್ರನೇ
ಜಗಮೆಲ್ಲಂ ಸಲೆ ಬಲ್ಲವೋಲ್ಪುರುಷನಾಗೊಪ್ಪಿರ್ಪಪಂ ಸಂತತಂ ।

ಮಿಗೆ ನಿಮ್ಮೊರ್ವರಕೂಟದಿಂ ಜನಿಸಿದಾತಂ ಬ್ರಹ್ಮನಾಶಂಭುವೋ
ಲ್ವೆಗಳ್ವಾಸ್ಯಂಗಳವೈದು ರಂಜಿಸುವುದಂ ಕಂಡಿಂತು ನೀಂ ಪೇಳ್ವರೇ ॥ ೩೧

ರಸೆಯಂ ಪುಟ್ಟಿಪ ಸಾಸಮಂ ಪಡೆವುದಕ್ಕಾರುದ್ರನಂ ನಾಲ್ಮೊಗಂ।
ನೊಸಲೊಳ್ ಧ್ಯಾನಿಸಲಲ್ಲಿ ತೋರ್ದಭವನಂ ಹೀನೋಕ್ತಿಯಿಂ ಪೇಳ್ವರೇ।
ನೊಸಲೇಂ 1 ಮೇಣ್ಣುಗದದಂತೆ ಯೋನಿವೊಲಿದೇಂ ನಿಂದಾಸ್ಪದಸ್ಥಾನಮೋ
ನುಸಿರ್ದೀಮಾತನಿದೇಕೆ ಭಂಗಕೊಳಗಾಗಿರ್ದಪ್ಪೆ ಕಂಸಾಂತಕಾ ॥ ೩೨

ನಿನ್ನೊಡಲೊಳಿರ್ಪ ಜಗಮಂ
ಮುನ್ನಂ ಮುನಿಪತಿದಧೀಚಿಗೊರೆಯಲ್ಕದನೇ।
ತನ್ನಂಗುಟದೊಳ್ತೋರುತೆ
ಬನ್ನಂಬಡಿಸಿದ 2 ನಿದೊಂದು ಘನವೆಂದುಸಿರ್ವಯ್ ॥ ೩೩

3 ಸ್ಥಿತಿಕರ್ತಂ ನೀನಾದೊಡೆ
ಸುತನಲ್ಲವೆ ಮನ್ಮಥಂ ಮಹಾದೇವಂ ಸಂ।
ಹೃತಿಯಂ ಮಾಳ್ಪಂದೇಗಂ
ಹತಮಾಗಿರ್ದೆಯ ಬಳಿಕ್ಕೆ ನೀನೆಂದುಸಿರ್ದಂ ॥ ೩೪

4 ನಿನ್ನಣುಗಂ ಗಡ ಬೊಮ್ಮಂ
ಮುನ್ನಂ ಪರಮೇಶನಿಂದೆ ಪೋಗಿರ್ದಾತಲೆ।
ಯಿಂ ನೀಂ ಕೂಡಿಸು ನೋಳ್ಪಂ
ನಿನ್ನಯ ಪನ್ನತಿಕೆಯುನ್ನತಿಯನಸುರಹರಾ ॥ ೩೫

ರಕ್ಕೆಗೆ ನೀನೊಡೆಯಂ ಗಡ
ರಕ್ಕೆಯ ಸಾಮರ್ಥ್ಯಮಂ ನನಗೆ ತೋರೆನುತುಂ।
ಮುಕ್ಕಣ್ಣನಾತ್ಮಜಂ ಹರಿ
ಯಕ್ಕುಳಿಪಂತೊಂದು ಬಾಣಮಂ ತೊಟ್ಟೆಚ್ಚಂ ॥ ೩೬

ಎಚ್ಚಂಬೆರ್ದೆಯಿಂದುರ್ಚಲ್
5 ಮುಚ್ಚುತ್ತುಂ ತಕ್ಕೆ ನಾಡೆ ತೆರ್ಪತ್ತಾಗಳ್।
ಬೆಚ್ಚದೆ ಕೋಪಾನಲಮುರಿ
ಬಿಚ್ಚಳಿಸಲ್ ಹರಿ ಬಳಿಕ್ಕೆ ನಿಡುಸ್ಸೈವಿನೆಗಂ ॥ ೩೭

1 ಮೇಣ್ಣದದಂತೆ. 2 ನೀವೊಂದು. 3 ಸ್ಥಿತಿಗೆ ನೀಂ ಕರ್ತುವಾದೊಡೆ
4. ನಿನ್ನಮಗಂ. 5 ಮುರ್ಛುತ್ತಂತಕ್ಕೆನಾಡ.

ಅತನುರುಶ್ವಾಸದೆ ಸಂ
ಜಾತಮದಾದತ್ತು ವಿಷ್ಣುಕೋಟಿಯನಂತಂ ।
ಭೂತಳಮೆತ್ತಣ್ಣು ದಿಶಾ
ವ್ರಾತಮದೆತ್ತಣ್ತಿನಲ್ಕು ಸುಂಕಿದುದಾಗಳ್ ॥ ೩೮

ಪೊಟ್ಟೆಯೊಳ್ಪುದಿದಿರ್ದ ಲೋಕಮನೆಲ್ಲಮಂ ಕಡುಗೋಪದಿಂ
ನಿಟ್ಟಿಸುತ್ತುಗುಳ್ದಾಗಳೇ ವರವೀರಭದ್ರನ ಮೇಲೆ ದಾ ।
ಳಿಟ್ಟನೋ ಹರಿಯೆಂಬಿನಂ ಬಗೆಗೂಡಿ ತೋರಿಸುವಾಬಲಂ
ಮುಟ್ಟಿವಂದುದನೀಕ್ಷಿಸುತ್ತುರುಭಾನುಕಂಪಗಣೇಶ್ವರಂ ॥ ೩೯

ವರಶಂಖಂಬಿಡದೂದುತಿರ್ಪಿನೆಗವಾನಾದಂ ವಿರಿಂಚಾಂಡಮಂ
ಪರಿದೆಯ್ದಲ್ ಶಶಿಸೂರ್ಯರಂದುರುಳ್ದರೀಭೂಭಾಗದೊಳ್ ಸಪ್ತಸಾ ।
ಗರಮಂದೆಯ್ದಿ ಕಲಂಕಿದತ್ತು ನೆಗಳ್ದಾವಿಷ್ಣುತ್ಕರಂ ನೋಳ್ಪಿನಂ
ಹರಣಂನೀಗಿದುದಂತದಕ್ಕೆ ಮುಳಿದಾಚಕ್ರಕ್ಕೆ ಕೈಯಿಕ್ಕಿದಂ ॥ ೪೦

ಒಕ್ಕೆರ್ಗೈಗೆ ಬಾರದೊಡೆ ತ
ನ್ನಿಕ್ಕೆರ್ಗೈಯಿಂದೆತ್ತಿ ನೋಡಿದಂ ಬಾರದೊಡದು ।
ನೀಳ್ಕರಿಸಿದ [1] ಚಿಂತೆಯಿನಂ
ದಳ್ಕುತ್ತಂ ನೆನೆದನೊಂದುಪಾಯಮನಾಗಳ್ ॥ ೪೧

ಶಿರದಿಂದಿಂತಿದನೆತ್ತಿಕೊಳ್ವೆನೆನುತುಂ ಬಾಗುತ್ತಿರಲ್ಕಾಗಳಂ
ಬರದೊಳ್ಪಂತ [2] ಜಲಂಧರಂ ತಲೆಯಿನಂದೆತ್ತಿಂತಿದಂ ನೋಳ್ಪೆನಂ ।
ದುರುಸತ್ವಂತಳೆದೆತ್ತುತಿರ್ದೊಡೆ ಶಿರಂ ತುಂಡಾದುದಂತಲ್ಲಿ ಮೋ
ಣಿರದೇ ನಿನ್ನ ಶಿರಸ್ಸು ಬೇಡೆನುತೆಯಾರ್ದತ್ತೊಂದು ನಾದಂ ವಲಂ ॥ ೪೨

ಆರವಮಂ ಕೇಳ್ದಾಗಳ್
ನಾರಾಯಣನಂದದೃಶ್ಯನಾದಂ ಬಳಿಕಂ ।
ವೀರಂ ನಸುನಗುತುಂ ಪರಿ
ವಾರಂಸಹಿತಧ್ವರಸ್ಥಳಕೆ ನಡೆತಂದಂ ॥ ೪೩

ಕದಳೀವನಮಂ ಮುದದಿಂ
ಮದಗಜಮುರವಣಿಸಿ ಬಂದು ಪುಗುವಂತಾಗ ।

---

1 ಚಿಂತೆಯಿಂ. 2 ಜಲಂಧರನ.

ಳ್ಪದೆಪಿಂದೇಳ್ತಂದಂ ಜ
ನ್ನದ ಸಾಲೆಗೆ ವೀರಭದ್ರನಭಿನವರುದ್ರಂ ॥ ೪೪

ಬಂದಾಮಂಟಪದೊಳ್ಬಯ
ದಿಂದಿರ್ದಾದಕ್ಷನಂ ಬಳಿಕ್ಕಧ್ವರಮಂ ।
ವೃಂದಾರಕರಂ ಮುನಿಗಳ
ವೃಂದಮನೀಕ್ಷಿಸುತೆ ಸಿಂಹನಾದಂಗೆಯ್ದಂ ॥ ೪೫

ನೆಲನಂದಿರ್ಧಾಗಮಾದತ್ತುದಧಿ ಶಮುದಯಂ ತಾಯ್ಮುಳಲ್ದೋದ್ರ್ದದೇಗಂ
ಕುಲಶೈಲಂಗಳ್ಬಳಿಕ್ಕಂ ಬಿರಿದುವು ಮಿಗೆ ಹೇಮಾಚಳಂ ನೀಳ್ದು ಸೀಳ್ದ ॥
ತ್ರೈಲರಂಬಾಗಳ್ವಲಂ ತಿರ್ರನೆ ತಿರುಗಿದುದಾಕಾಶದೊಳ್ವೀರಭದ್ರಂ
ಸರೆ ಸಿಂಹಧ್ವಾನಮಂ ಮಾಳ್ಪನೆಗಮದರ ಪೆಂಪಂ ಕರಂ ಪೇಳ್ವನಾವಂ ॥ ೪೬

ಆರವಮಂ ಕೇಳ್ದಧ್ವರ
ಪೂರುಷನಾಗಳ್ಭಯಂಬಡುತೆ ಮೃಗರೂಪಿಂ ।
ದೋರಂತೋಡುತಿರಲ್ಕಾ
ವೀರಂ ತಾನರ್ಧಚಂದ್ರಶರದಿಂದೆಚ್ಚಂ ॥ ೪೭

ತಲೆ ಪರಿದುರುಳ್ದುದಾಗಳ್
ನೆಲಕಧ್ವರಪೂರುಷನ [1] ಬಳಿಕ್ಕಾಗಳ್ಪಿಂ ।
ದಲೆಯಾಗುತ್ತೋಡಿತು ಮುನಿ
ಕುಲಮುಂ ದೇವರ್ಕಳಂಗನಾಚಯಮಾಗಳ್ ॥ ೪೮

ಉಟ್ಟುಡೆ ಕಳಲ್ದು ಪೋದುವು
ತೊಟ್ಟಾಭರಣಂ ಸಡಿಲ್ದು ಬೀಳ್ದುವು ಸುರರ್ಗಳ ।
ಹೆಟ್ಟುಗೆಯರ್ಭಯದಿಂ ನಾ
ಣ್ಗೆಟ್ಟೋಡಿತ್ತಾಗಳಲ್ಲಿಯುದನೇನೆಂಬೆಂ ॥ ೪೯

ವ॥ ಆಸಮಯದೊಳ್,

ಮತಿಯುಂ ಧೃತಿಯುಂ ಸಲೆ ಸ
ದ್ಗತಿಯುಂ ದರ್ಶನದೊಳಿರ್ಪ ವೀರನನೀಕ್ಷಿಸಿ ।
ಮತಿಗೆಟ್ಟಂ ಧೃತಿಗೆಟ್ಟಂ
ಗತಿಗೆಟ್ಟಂ ದಕ್ಷನಿಂತಿದೇನಚ್ಚರಿಯೋ ॥ ೫೦

---

1 ಬಳಿಕ್ಕಾಗಳ್ಪಿಂದಲರಾಗುತ್ತೋಡಿತು.

ವ॥ ಆಗಳ್ವೀರಭದ್ರಂ,

ನಿಕ್ಕುವಮಾದ 1 ಹೋತಗಜನಾಮುವದಾಹರಿನಾಮುವಾರಯು
ಲ್ಕಕ್ಕಡಕಾ 2 ಶಿವಾಯೆನಿಪ ನಾಮುಮುದಂದುರೆ ನೋಳ್ಪೊಡಂ ಸ್ವಗಾ ।
ಲಕ್ಕಮುರ್ದಿಪ್ಪವೋಲ್ನಿನಗೆ ದಕ್ಷನೆನಿಪ್ಪಭಿಧಾನ 3 ಮಿರ್ದೊಡೇಂ
ದಕ್ಕನೆನಿಪ್ಪೆಯೋಯೆನುತೆ ಕಣ್ಡಿಯುಮಂ ಜಡಿದಂ ಪ್ರತಾಪದಿಂ ॥ ೫೧

ಕೆಡೆಕೆಡೆ ಕೂರಕಮ್ಮಿ ಕೆಡೆ ನಾಣಿಲಿ 4 ಮೋಡ ದುರಾತ್ಮ ದುಟ್ಟ ನೀಂ
ಕೆಡೆಕೆಡೆ ತಾಣಬಟ್ಟು ಕೆಡೆ ಮಾನಿಸಗಳ್ತಿ ಮಹೋಗ್ರಪಾಪಿ ಕೀ ।
ಳ್ಕೆಡೆಕೆಡೆ ಮೂರ್ಖಭೂತ ಕಡೆ 5 ನಿಟ್ಟುರಬಾಣಿ ವಿವೇಕಶೂನ್ಯನೇ
ಕೆಡೆಕೆಡೆಯೆಂದು ಪೊಯ್ದು ಬಿಸುಟಂ ತಲೆಯುಂ ನೆರೆ ನೀಚದಕ್ಷನಾ ॥ ೫೨

ಬಿರುಗಾಳಿಯಿನೆಲೆಯುಲೆಯು
ಲ್ವರಿಪಟ್ಟಾಪಣ್ತತಾಳಫಳಮಂಬಿನೆಗಂ ।
ನೆರೆ ವೀರನ ಕರವಾಳಿಂ
ದುರೆ ಬೀಳ್ವುರುಳ್ದತ್ತು ದಕ್ಷಶಿರಮಿರದಾಗಳ್ ॥ ೫೩

ವ॥ ಆಗಳ್ವೀರಭದ್ರನಾತಲೆಯುಂ ಭದ್ರಕಾಳಿಗೆ ಕುಡಲದಂ ಕೈಕೊಂಡು ಘೊಡೆಸೆಂಡಾಡೆ ಬಳಿಕ್ಕದಂ ಬಿಸುಟ್ಟು,

ತಲೆಯೊಂದೇ ಬೀಳ್ದು ಪೋಯ್ತೆಂದುಸಿರ್ವರೆ ಬಳಿಕೀಶೀರ್ಷಮಂ ದೇವತಾಸಂ
ಕುಲವುರ್ಧವ್ರಾತವುಂ ತಾಂ ಕೆಡಪಿದ ತಲೆ ಮೇಣಾರಯಲ್ಕತ್ತೆ ತನ್ನಾ ।
ತರೆಯಿಪ್ಪತ್ತೊಂದನೇಗಂ ನಿರಯುಶರಧಿಯೊಳ್ಮುಂಕಿ ಪೋಳ್ಗಿಯ್ದು ತೋರ್ದಾ
ತಲೆಯೆಂದುತ್ಕೋಪದಿಂದಂ ತರೆಯುನಿರದೆ ಯಜ್ಞಾಗ್ನಿಯೊಳ್ಬೀಳ್ದನಾಗಳ್ ॥ ೫೪

ತಲೆಸಾಸಿರದಿಂದಹಿಪತಿ
ಸಲೆ ತಾಳ್ದೀಜಗಮನಿವನ ತಲೆಯೊಂದೀಗ ।
ಳ್ವಿಲಯುಂಗೆಯ್ದತ್ತೀತನ
ತಲೆಯೋ ತಲೆಯೆಂದು ದೇವಿ ನಸುನಗುತಿರ್ದಳ್ ॥ ೫೫

ವ॥ ಇಂತು ಭದ್ರಕಾಳಿಯುಸಿರ್ವಿನಂ ವೀರಭದ್ರಂ ದರಸ್ಮಿತನಾಗಿ,

1 ಹೋತಿಗಜ. 2 ಶಿವಾವೆನಿಪ. 3 ನಾರ್ದೊಡೇಂ.

4 ಮೋಡೆ. 5 ನಿಟ್ಟುಬಾಣಿ.

ಈತಲೆಗೆಣೆಯೆನಿಸುವ ತಲೆ
ಭೂತಳದೊಳಗಿಲ್ಲೆನುತ್ತೆ ಮುದಿಕೋತನ ತಲೆ ।
ಈತಲೆಗೆಣೆಯೆನಿಪುದೆ [1] ನು
ತ್ತಾತ್ತಲೆಯಂ ಪತ್ತಿಸಿದನವಂಗಂದಾಗಳ್ ॥ ೫೭

ವ॥ ಮತ್ತಂ,

ಅಳಿಯಂ ಗಡ ದಕ್ಷಂಗಿವ
ನಳಿಯನೆ ನಮಗೆನುತೆ ವಾಮಪದದಿಂದೆ ಕಿಮು ।
ಳ್ದುಳಿವುತ್ತಾಸಸಿಯಂ ಕಿಡು
ವುಳವಂ ಕೊಲ್ವಂತೆ ಕೊಂದನಾವೀರೇಶಂ ॥ ೫೭

ಕುಲಜರೊಳಂ ಮತ್ತಂತೆಯು
ಕುಲಜರೊಳಂ ಬೆರೆದು ತಾಂ [2] ಮಗಳ್ಮಾಯೆನಿಸುತೆ ।
ನೆಲದೊಳ್ತೋರ್ಪಳೆನುತೆ ವಾ
ಗ್ಲಲನೆಯು ನಾಸಿಕಮನರಿದನಾವೀರೇಶಂ ॥ ೫೮

ಅದಿತಿಯ ಕುಚಾಗ್ರಮಂ ಕೂ
ಡಿದ ತುಟಿಗಳನರಿಯಲವಳ ಬಾಯ್ತೆರೆದತ್ತಾ ।
ತ್ರಿದಿವದ ಬಾಳ್ಕೆಯವರ ತಾ
ಯ್ಗಿದು ಚಿತ್ರವೆ ಲೋಕವರಿಯೆ ಬಾಯ್ಬಿಡುವುದು ತಾಂ ॥ ೫೯

ಅನಲನ ಸತಿಯ ಬಲದ ಮೂ
ಗಿನ ಹೋಟೆಯನೆಡದ ಮೊಲೆಯ ತುದಿಯಂ ಕೊಯ್ವು ।
ತ್ತನಿಮಿಷರಂಗನೆಯರ ಕ
ಣ್ಬನಿವೊಳೆಯಿಂ ಕರ್ಚಿದಂ ಕರದ ಕರವಾಳಂ ॥ ೬೦

[3] ದುಟ್ಟುಳವಳೊಡೆಯನಿಂದಂ
ಘಟ್ಟಿಸಿಕೊಳ್ವಂತೆ ನಾಡೆ ದಕ್ಷಮುಖಶ್ರೀ ।
ಕೆಟ್ಟುದು ವೀರಂ ಮಿಗೆ ಮಾ
ಳ್ಪಟ್ಟುಳಿಯಿಂದೊಂದು ನಿಮಿಷಮಾತ್ರದೊಳಾಗಳ್ ॥ ೬೧

ಮೊಳೆಯನಿರದಳುರ್ದ ದಾವಾ
ನಳನಾಜ್ವಾಲೆಗಳ ತೆರದೆ ದಕ್ಷನ ಪೊಳಲಂ ।

---

1 ಮತ್ತಾ. 2 ಮಗುಳ್ಮಾವೆನಿಸುತೆ; 3 ದುಟ್ಟುವೆಣ್ಣೊಡೆಯನಿಂದಂ.

1 ದಳದುಳಗೆಯ್ವುದದಂತಾ
ಗಳೆ ವೀರೇಶ್ವರನ ಸೇನೆ ಕಡುಮುಳಿಸಿಂದಂ ॥ ೭೨

ವ॥ ಆಸಮಯದೊಳ್,

ಅನ್ನದ ರಾಶಿಯಂ ಘೃತದ ಕಟ್ಟೆಯನಾವಿಷದೊಟ್ಟಿಲಂ ಕರಂ
ಚೆನ್ನೆನಿಸಿರ್ಪಪೂಪನಿಚಯಂಗಳ ಬೆಟ್ಟುಮನಣ್ಣೆವಾಲ್ಗಳಾ ।
ಸನ್ನಮದಾಗಿ ತೋರ್ಪ ಕೊಳನಂ ಮೊಸರ್ವೆಂಚೆಯನೀಕ್ಷಿಸುತ್ತವಂ
ತಿನ್ನದೆ ಪೋದರೆಂದಳುತೆ ಚುನ್ನಮನಾಡಿದುದೊಂದು ಪೆರ್ವರುಳ್ ॥ ೭೩

ದುಟ್ಟನೆನಿಪ್ಪ ದಕ್ಷನ ಸುವರ್ಣಮಣಿವ್ರಜದಿಂದೆ ರಂಜಿಪಾ
ಪಟ್ಟಣಮಂ ಪೊಡಳ್ದವನ ಯಜ್ಞನಿಪಾಸಮನೆಲ್ಲವಂ ವಲಂ ।
ಸುಟ್ಟು ಮರುಳ್ಗಣಂ ಬಳಿಕೆ ನಮ್ಮೊಡೆಯಂಗಭವಂಗಿದೀಗಳೇ
ಪಟ್ಟಣವಾದುದೆಂದುಸಿರುತಿರ್ದುದದಾಗಳದೇಂ ವಿಚಿತ್ರವೋ ॥ ೭೪

ಮುನಿದೊಂದು ಮರುಳ್ಚನ್ನದ
ಮುನಿಗಳ ಗಡ್ಡಂಗಳಂ ಜಟಾಳಿಯನುರೆ ನೆ ।
ಟ್ಟನೆ ತರೆದುಟ್ಟುದನೆಳೆಯ
ಲ್ಚಿನವಮುನಿಗಳ ತೆರದಿನವರ್ಗಳೊಪ್ಪಿದರಾಗಳ್ ॥ ೭೫

ಯೂಪಸ್ತಂಭಂಗಳ್ಗಾ
ತಾಪಸರಂ ಕಟ್ಟಿ ಯಾಗಕಾಂತಂ ತಂದಿ ॥
ರ್ದೀಪಶುಗಳನೀಕ್ಷಿಸೆನು
ತ್ತಾಪದದೊಳ್ನಗಿಸುತಿರ್ದುವಲ್ಲಿ ಮರುಳ್ಗಳ್ ॥ ೭೬

ಜನ್ನಕೆ ತಂದು ಕಟ್ಟಿದ ತುರಂಗಮನಂ 2 ದಡರ್ದೊಂದು ಭೂತಮಂ
ತಾಂ ನಗುತೊಂದು ಭೂತಮದು ನೀಂ ಬಳಿಕಾರೆನ ನಾಂ ಧನಾಧಿಪಂ ।
ನಿನ್ನ ಬರಂ ವಿಚಿತ್ರಮೆನೆ ನನ್ನ ಸಖಂಗೆಸಗಿರ್ದ ವಾಸವಂ
ನಾಂ ನೆರೆ ನೋಡಬಂದೆನೆನುತುಂ ನಗಿಸುತ್ತೆಸೆದಿರ್ದುದೆಲ್ಲರಂ ॥ ೭೭

ಆಹವದಲ್ಲಿ ದಿಕ್ಪತಿಗಳಾಭರಣಂಗಳನಾಯುಧಂಗಳಂ
ವಾಹನವೃಂದಮಂ ಸೆಳೆದು ಭೂತಗಣಂ ಮಿಗೆ ತೊಟ್ಟು ಹಸ್ತದೊಳ್ ।

1 ದಳದುಳಂಗೆಯ್ಯುದಂತಾ. 2 ದಡರೊಂದು ಭೂತಮುಂ.

ಸಾಹಸದಿಂದೆ ತಾಳ್ದಡದಿರ್ದುದ ನಾವು ದಿಶಾಧಿಪರಿತ್ತಲೀಕ್ಷಿಸೆಂ
ದಾಹರಪುತ್ರನಂ ನಗಿಸುತೊಪ್ಪಿದುವಾಗಳತೀವ ಹಾಸ್ಯದಿಂ ॥ ೭೮

ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ ದ
ಳ್ದಲಿಯುಂ ಕಯ್ಯಾಕ್ಕಗ್ಗ ಮತ್ತಾಜಠರಗಳಕೆ ತಂದಂತವಂ ಮೇಳಿಸುತ್ತಂ ।
ದಳಲಂ ತತ್ಕ್ಲೇಶದಿಂದಂ ಬಿಗಿಬಿಗಿದುರದಾರ್ದುಂ ಪೆಡಂಗೈಸಿ ಸಿಂತಾ
ಗಳೆ ಕಟ್ಟುತ್ತುಂ ಬಳಿಕ್ಕಂಠವರ್ಗಳನೆಳತಂದೊಪ್ಪಿಸುತ್ತಿರ್ದುದೇಗಂ ॥ ೭೯

ವ॥ ಆಗಳ್ವೀರಭದ್ರಂಗೆ ಬ್ರಹ್ಮಂ ಸಾರಥಿಯಾಗಿ ಸಲುಗೆವಡೆದಾಗಳಾಗಿರ್ದು ದರಿಂದಾಪಿತಾಮಹನಂ ಮುಂದಿಟ್ಟುಕೊಂಡು ಬಂದು,

ಹರಿಯುಂ ದೇವೇಂದ್ರಮುಖ್ಯತ್ರಿದಶನಿಚಯಮುಂ ವೀರಭದ್ರಂಗೆ ತಾವಾ
ದರದಿಂದಂ ನಮ್ರರಾಗುತ್ತವೆ ಕರಯುಗಮಂ ಮಂಡೆಯೊಳ್ ಸಾರ್ಚಿ ದೇವಾ ।
ದುರುಳಂಗಜ್ಞಂಗೆ ನೀಡುಂ 1 ಕೆಲಚೆನಿಸಿದ ಮಾದ್ರೋಹಮಂ ನೋಡದೆಮ್ಮಂ
ಕರುಣಂ ಕಯ್ಮಿಕ್ಕು ನೀನೇ ಸಲಪುವುದೆನುತುಂ ಬಿನ್ನಪಂಗೆಯ್ದರಾಗಳ್ ॥ ೭೦

ವ॥ ಇಂತು ಬಿನ್ನವಿಸಿ,

ಸುಳಿ ಜಯ ವಾಮದೇವ ಜಯ ಶಾಶ್ವತಮೂರ್ತಿ ಸುಧಾಂಶುಮೌಳಿ ನಿ
ರ್ಮಳ ಜಯ ನಿತ್ಯತೃಪ್ತ ಜಯ ಮನ್ಮಥಕಾಲಮದಪ್ರಹಾರಿ ಮಾ ।
ಬಳ ಜಯ ಮೃತ್ಯುನಾಶ ಜಯ ಜನ್ಮವಿದೂರ ನಿರಾಮಯಾಂಗ ನಿ
ಷ್ಕಳ ಜಯ ವೀರಭದ್ರ ಜಯಯೆಂದೆನುತಿರ್ದುದು ದೇವಸಂಕುಳಂ ॥ ೭೧

ಗುರು ಜಯ ಭಾಳನೇತ್ರ ಜಯ ಸಿಂಧುರಚರ್ಮ 2 ವೃತಾಂಗ ಸಂಹೃತಾ
ಸುರ ಜಯ ಕಾಲಾಂತ ಜಯ ಸರ್ಪಗಣಾಧಿಪ ಭೂತನಾಥ ಶಂ ।
ಕರ ಜಯ ನೀಲವರ್ಣ ಜಯ ಭೋಗಿವಿಭೂಷಣ ಭದ್ರಕಾಳಿಯಾ
ವರ ಜಯ ವೀರಭದ್ರ ಜಯಯೆಂದೆನುತಿರ್ದುದಮರ್ತ್ಯಸಂಚಯಂ ॥ ೭೨

ವ॥ ಈರೀತಿಯಿಂ ನುತಿಸಿ ಬಿನ್ನಪಂಗೆಯ್ಯುತಿರ್ದರದೆಂತೆಂದೊಡೆ,

ಮುದದಿಂದಂ ವಾಸುದೇವಾಶ್ರಮವೆನಿಸಿ ಕರಂ ರಂಜಿಪೀಶೌತ್ಕಟಗ್ರಾ
ಮದ ಪೆಂಪಂ ನೋಳ್ಪವೆಂದಾಕಳಶಜಜಮದಗ್ನ್ಯಾದಿಗಳ್ಕಾಶ್ಯಪಂ ಸ ।
ತ್ಪದಿನೊಪ್ಪಿರ್ಪೀದಧೀಚಿಪ್ರಮುಖರೊಡನೆ ಪೋಪಲ್ಲಿ ನಮ್ಮೆಲ್ಲರಂ ನುಂ
ಗಿದ ಕಿಚ್ಚಂ ಮಳ್ಗಿಸುತ್ತುಂ ಹರಣಮನೆಮಗಂದಿತ್ತರಾರ್ ವೀರಭದ್ರಾ ॥ ೭೩

1 ಕೆಲಜನಿಸಿದ. 2 ವೃತಾಂ ಸಂಹೃತಾಧರ.

ಮತ್ತಂ ನಾವೆಲ್ಲರುಂ ತ್ವತ್ಕರುಣದ ಬಲದಿಂ ಪೋಗುತಂದಿರ್ಪಿನಂ ಬಂ
ದತ್ತಂದುಗ್ರಾಹಿ ನುಂಗಿತ್ತದು ಬಳಿಕಿರದೆಮ್ಮೆಲ್ಲರಂ ಕೋಪದಿಂ ಸೀ ।
ಳುತ್ತಂದಾಸರ್ಪನಂ ಪ್ರಾಣಮನೆಮಗತಿಕಾರುಣ್ಯದೌನ್ನತ್ಯದಿಂದೊ
ಲ್ದಿತ್ತಾತಂ ನೀನೆಯಲ್ಲಾನತಜನಕರುಣಾಂಭೋಧಿಯೇ ವೀರಭದ್ರಾ ॥ ೭೪

ಅಂಡಾದಂ ಪಂಚಮೇಢ್ರಾಸುರನೆನಿಪವನೊರ್ವಂ ಬಳಿಕ್ಕೆಮ್ಮನೆಲ್ಲಂ
ಕೊಂದುಂ ನುಂಗಿರ್ಪನಂ ಮತ್ತವ 1 ನುದರವನಂತೆಯ್ದೆ ಸೀಳ್ದುಂ ಬಳಿಕ್ಕಾ ।
ನಂದಂಬೆತ್ತಾಗಳೇ ದರ್ ಹರಣಮನೊಲವಿಂ ಭಸ್ಮದಿಂದಿತ್ತು ತೋರ್ದಾ
ಮಂದಾರಂ ನೀನೆಯಲ್ಲಾ ತ್ರಿಭುವನನತಪಾದಾಬ್ಜನೇ ವೀರಭದ್ರಾ ॥ ೭೫

ಧರೆಯೊಳ್ನಿಮ್ಮ ಪದಾಬ್ಜದರ್ಶನಮದಂತೆಲ್ಲಾಗಡುಂ ನಾಡೆ ಸಾ
ಸಿರತಪ್ಪಂ ಸಲೆ ಸ್ವೈರಿಸಿರ್ಪುದೆನುತುಂ ವೇದಪ್ರತಾನಂ ಕರಂ ।
ಮೊರೆವುತ್ತಿರ್ಪುದಜಸ್ರಮಂತದಕಬದ್ಧಂ ಬರ್ಕುವೇ ನಿಮ್ಮಯಾ
ಕರುಣಂ ತಾಂ ಹರಣಂ ಬಳಿಕ್ಕೆಮಗನುತ್ತುಂ ಪೇಳ್ದರಂದೊಳ್ಪಿನಿಂ ॥ ೭೬

ನೆರೆ ನಿಮ್ಮಯ ದರುಶನದಿಂ
ಪರಿವುದು ಭವಬಂಧನಂ ಬಳಿಕ್ಕೀಬಂಧನ ।
ಮುರೆ ಪರಿಯದಿರಲ್ಕೀಗ
ಳ್ಕೊರತೆಯುದಾರ್ಗಪ್ಪುದಥವ ಚಿತ್ತವಿಸೆಂದರ್ ॥ ೭೭

ಜನಕಂ ನೀಂ ಸುರತತಿಗೆಂ
ದನುನಯದಿಂ ವೇದವಿತತಿಯೊದರುತ್ತಿರ್ಕುಂ ।
ತನಯರಪರಾಧಮಂ ಪಿತ
ನೆನಿಪಂ ತಾಂ ಕಾಯದಿರ್ಪನೇ ಕಾಮಹರಾ ॥ ೭೮

ವ॥ ಇಂತತಿದೈನ್ಯೋಕ್ತಿಯನುಸಿರ್ವ ದೇವರ್ಕಳ ಬಿನ್ನಪಂಗೇಳ್ದು ಕಾರುಣ್ಯ ಸಿಂಧುವೆನಿಪ್ಪಾವೀರಭದ್ರಂ ದರಹಸಿತಾನನನಾಗುತ್ತವರೊಳುಸಿರ್ದನದೆಂತೆಂದೊಡೆ,

ಜಡರೂಪಮಾದ ಕರ್ಮ
ಕ್ಕೊಡೆತನವಂ ಕಲ್ಪಿಸುತ್ತದರಿನುರುಫಲಮುಂ ।
ಪಡೆವೆನಿರದೆಂಬವಂ ನೀ[2]
ರ್ಗ ಡದದರೊಳ್ ಬೆಣ್ಣೆಗೊಳ್ವ ಮರುಳಂತಕ್ಕುಂ ॥ ೭೯

1 ನುದರವಂತೆಯ್ದೆ. 2 ಪಡೆನೆಂಡೆಬವನೀ.

ಅಪರಾಧವನೆಸಗಿದವಂ
ಗಪರಾಧಂ ತಾನೆ ಬಂದು ಬಂಧಿಪುದೇ ಪೇ ।
ಣಪರಾಧಕ್ಕಾಜ್ಞೆಯನೀ
1 ವಪರಿಚಿತಂ ಬೇರದೊರ್ವನುಂಟಾಗಿರ್ಕುಂ ॥ ೮೦

ಬಿಲ್ಲಾಳಿಲ್ಲದೆ ಬಾಣಮೆಯ್ದು ಗುರಿಯುಂ ತಾಂ ತಾಂಗುತೊಪ್ಪಿರ್ದೊಡಂ
ಬಲ್ಲಾಳಪ್ಪುರುಚಕ್ರಿಯಿಲ್ಲದೆ ಕರಂ ಚಕ್ರಂ ಘಟಾನೀಕಮಂ ।
ಎಲ್ಲಾಗಳ್ಸವೆವುತ್ತಮಿರ್ದೊಡೆ ವಲಂ ಕರ್ಮಕ್ಕೆ ಕರ್ತೃತ್ವಮಂ
ಬಲ್ಲರ್ಪೇಳ್ವರೆನುತ್ತೆ ನೀಳ್ದು ಸಿರ್ದನಾವೀರೇಶನಂದಳ್ಕರಿಂ ॥ ೮೧

ಹರವಿರಹಿತಸತ್ಕರ್ಮಂ
ಧರೆಯೊಳ್ ದುಷ್ಕರ್ಮಮಕ್ಕುಮಥವಾಸಕ್ತಿಯಿ ।
ನಿರದೆಸಗಿದ ದುಷ್ಕರ್ಮಂ
ಪಿರಿದುಂ ಸತ್ಕರ್ಮವೆನಿಪುದಿದು ವೇದಮತಂ ॥ ೮೨

ಖಂಡಿಸಿ ತಂದೆಯಂಘ್ರಿಗಳನೆಯ್ದೆ ಮಹೇಶನ ಪಾದಭಕ್ತಿಯಿಂ
ಖಂಡಶಶಾಂಕಮೌಳಿಯ ಕೃಪಾಂಬುಧಿಯೊಳ್ಮುಳುಗಿರ್ದನಾಕ್ಷಣಂ ।
ಚಂಡನೆನಿಪ್ಪವಂ ಬಳಿಕಮಿಾಶ್ವರವೈರದೊಳಿಂದು ನೀವು ಕೈ
ಕೊಂಡ ಸುಕರ್ಮಮಿಂತಿದುವೆ ದುಷ್ಕೃತಕರ್ಮವದಾಯ್ತು ನಿಶ್ಚಯಂ ॥ ೮೩

ಮದನಾರಾತಿಪದಾಬ್ಜಭಕ್ತಿರಹಿತಂ ತಾನುಜ್ಜುಗಂಗೆಯ್ದೆ ಯಾ
ಗದ ಪೆರ್ಚುಂ ಜಪದೇಳ್ಗೆಯುಂ ಬಳಿಕೆ ತೀರ್ಥಸ್ನಾನಮುಂ ದಾನದೊಂ ।
ದೊದವುಂ ಮಾತಪಮುಂ ಸಮಸ್ತವಿಧಿಯುಂ ಪೇಣ್ಬುದಿಯೊಳ್ಬೇಳ್ದ ಹೋ
ಮದವೋಲ್ಕೆಟ್ಟುರೆ ಪೋಪುವೆಂದುಸಿರ್ದ ವೇದೋಕ್ತಾರ್ಥವೇಂ ಮಿಥ್ಯವೇ ॥ ೮೪

ವ॥ ಆವನಾನೊರ್ವನೊಡರ್ಚಿದ ಸತ್ಕರ್ಮಕ್ಕಂ ದುಷ್ಕರ್ಮಕ್ಕಂ ಫಲಂಗಳನೀವ ಕರ್ಮಾಧೀನನಲ್ಲದ ಸ್ವತಂತ್ರಪ್ರಭುವಾದ ಸರ್ವಗತನಾಗಿರ್ದ ಪರಮೇಶ್ವರನನರಿಯದೆ ಕರ್ಮವನನುಸರಿಸಿ ಕೆಟ್ಟಿರಿಮೆಂದು ವೀರಭದ್ರಂ ನಿರವಿಸಲೊಡನರಿವೆಡೆಗೊಂಡಾದೇವತೆಗಳ್ಬಿನ್ನಪಂಗೆಯ್ಯುತಿರ್ದರದೆಂತೆಂದೊಡೆ,

ಸುರರಮಣಿಗೆತ್ತು ಬಲ್ಗಿಡಿಯುನಳ್ಕಿಯಿನಾಗಳೆ 2 ಸೋಗಿಲಲ್ಲಿ ತಂ
ದಿರಿಸಿ ಕಡಂಗಿ ತೋರ್ಪ ಮರುಳಂದವೆ ನೇವಳಗೆತ್ತು ಸರ್ಪನಂ ।

1 ವಪರಿ—ಬೇರದೊರ್ವ. 2 ಸೋಂಕಿಲಲ್ಲ.

ಧರಿಸುವೆನೆಂದು ಪೋಣ್ಪಡಿದ ಗಾಪಿಲನಂತೆವೊಲೆಯ್ದಿ ಕೆಟ್ಟೆವೀ
ದುರುಳನ ಕೂರಕಮ್ಮವನೆ ದೈವವೆನುತ್ತೆ ಕರಂ ಮಖಾಂತಕಾ ॥ ೮೫

ಶಾಲ್ಮಲಿಯಂ ಸುರದ್ರುಮವೆನುತ್ತಲಗರ್ದಮನೋಜಿದಪ್ಪಿ ಪೋಣ್
ಸಾಲ್ಮೊಗನೆಂದು ಕಾಳ್ಪುರವನಂಬುಧಿಯೆಂದರಿವಜ್ಞರಂದದಿಂ ।
ನಾಲ್ಮೊಗಗಂದನಾದ ಖಳದಕ್ಷನ ಪೇಳದೆ ಕೆಟ್ಟೆವೀಗಳೀ
ಕಲ್ಮಷಕರ್ಮವಂ ಬಳಿಕೆ ಬರ್ಮವೆನುತ್ತವೆಯಧ್ವರಾಂತಕಾ ॥ ೮೬

ವ॥ ಇಂತು ನಿರೀಶ್ವರಮತವಮಂ ನಿರಾಕರಿಸಿ ವೀರಭದ್ರನ ಚಿತ್ತಾಕರ್ಷಣಂ ಗೆಯ್ದುಪೇಂದ್ರಾದಿದೇವತೆಗಳ ಬಂಧನಂಗಳಂ ಬಿಡಿಸಿರ್ಪಿನಮಾಗಳಿದೇ ಸಮಯ ಮೆಂದು ದಕ್ಷನೇಳ್ತಂದು ಸಾಷ್ಟಾಂಗಪ್ರಣತನಾಗಿ ತನ್ನ ಕುರಿಮೊಗವಂ ವಿಮೋಚ ನವಂಮಾಡಲ್ವೇಳ್ಕೆಂದು ಬಿನ್ನಪಂಗೆಯ್ವೊಡದಕ್ಕಾ ವೀರಭದ್ರನಿಂತೆಂದಂ

ಪರಮೇಶದ್ರೋಹಿಗೆ ಸಾ
ಗರವಸನೆಯೊಳೆಲ್ಲಿಯುಂ ಬಳಿಕ್ಕಾರಯ್ಯಲ್ ।
ನಿರುಹರಣಮಿಲ್ಲ ಕುರಿವೊಗ
ಮಿರವೇಳ್ಕೆಂದೆನುತೆ ನುಡಿದನಾವೀರೇಶಂ ॥ ೮೭

ಹರನಿಂದಕರೆಲ್ಲಂ ಮಿಗೆ
ನರದೇಹಂದೊಟ್ಟು ತೋರ್ಪ ಕುರಿಗಳೆನುತ್ತೀ ।
ಧರೆಯುರಿಯಲ್ವೇಳ್ಕೆಂದಂ
ದಿರವೇಳ್ಕುಂ ಕುರಿವೊಗಂ ನಿನಗೆ ಕೇಳ್ದಕ್ಷಾ ॥ ೮೮

ವ॥ ಇಂತೆಂದು ನಿರವಿಸಿ ದಕ್ಷಸಹಿತಂ ಸಮಸ್ತದೇವಸಮೂಹವಂನೊಡ ಗೊಂಡು, ಅನಂತಪ್ರಮಥಗಣರುದ್ರಗಣಾಡಂಬರದಿಂದನೇಕಹರ್ಷಾಂಬುಧಿಯೊ ಳೋಂಕಾಡುತ್ತೆ, ವೃಷಭಾರೂಢನಾಗಿ ವೀರಭದ್ರಂ ಕಾಶೀಪಟ್ಟಣಕ್ಕಭಿಮುಖನಾಗೇ ಳ್ತಪ್ಪರ್ಗಳ್ಗೆಲ್ಲವರೆಯ ದನಿಗಳಬ್ಬರಂ, ಬಿರುದಿನ ಕಹಳಾರವಂ, ವೀರಾವಳಿಯ ನೋದುವ ಪಾಠಕರ ನಿನಾದಂ, ಕೊಂಡಾಡುವ ಚಂಡಕೀರ್ತಿಗಳ ನಿರ್ಘೋಷಂ ಗಳೆಣ್ದೆಸೆಯುಂ ತೀವಲ್ಕಾಪುರೋಪಕಂಠಮಂ ಸಾರ್ದಿನಮಾಗಳ್,

ಪುರಹರನನುಮತದಿಂ ತ
ತ್ಪುರವಂ ಸಿಂಗರಸಿ ಗುಹಗಣಾಧೀಶ್ವರರತಿ ।
ಹರುಷದೊಳಿದಿರ್ಗೊಂಡರ್ಮುಖ
ಹರನಂ ಕೋಟಾನುಕೋಟಿಗಣಸಹಿತಮವರ್ ॥ ೮೯

ವ॥ ಇಂತಿದಿರ್ವಂದ ಗಣಾಧಿಪತಿಯುಂ ಮಹಾಸೇನನಂ ಮನ್ನಿಸಿ ವೀರಭದ್ರಂ ಪಟ್ಟಣಂಬೊಕ್ಕೃತಪರ್ಾಗಳ್,

ಕರುಮಾಡದಗ್ರದೊಳ್ಸಂ
ದರಿಯೊರ್ವಳ್ ಲಾಜನಿವಹಮುಂ ಸೂಸುತ್ತುಂ ।
ಕರಮೊಸೆದಳಲರ ಸರಿಯಂ
ಸುರಿವುತ್ತೆಸೆದಿರ್ಪ ಗಗನಚರಿಯೆಂಬಿನೆಗಂ ॥ ೯೦

ವ॥ ಮತ್ತಮೊಂದು ಸೌಧಾಗ್ರದೊಳ್,

ಅನುನಯದಿಂ ಘುಸೃಣಾಂಬುವ
ನೆನಸುಂ ಸೂಸುತ್ತೆ ಕಣ್ಗೆವಂದಳದೊರ್ವಳ್ ।
ಅನುರಾಗದ ಮಳೆಗರೆವೀ
ಘನಲಕ್ಷ್ಮಿಯೊ ಎಂಬವೋಲ್ಸೊಗಸನೀವುತ್ತುಂ ॥ ೯೧

ಕೈರವನೇತ್ರೆ ಚಂಪಕಸುನಾಸಿಕೆ ವಾರಿಜವಕ್ತ್ರೆ ನಾಡೆ ಕಾ
ಶ್ಮೀರಸುಗಂಧಿ ಕುಂದದರಹಾಸೆಯೆನಿಪ್ಪ ಲತಾಂಗಿಯುದ್ಗಮಾ ।
ಕಾರದಿ ನಿಂತು ರಂಜಿಸುತೆ ಚಿತ್ರಮೆನಲ್ಧರೆ ನೋಡೆ ಮತ್ತಮಾ
ವೀರನನೀಕ್ಷಿಪಲ್ಲಿ ಮರವಟ್ಟೆಸೆದಿರ್ದಳದೊರ್ವಳೊಪ್ಪದಿಂ ॥ ೯೨

ಪಸದನಗೆಯ್ದು ತೋರ್ಪಬಲೆಯಿರ್ಪಿನೆಗಂ ಮಖವೈರಿ ಬಂದನೆಂ
ದುಸುರಲದೊರ್ವ ಕಾಂತೆ ನಿಜಹಸ್ತದೊಳಾಂತ ತೊಳಪ್ಪ ಮುತ್ತಿನೆ ।
ಕ್ಕಸರದಿನೆಯ್ದಿ ಬಂದು ಸಲೆ ನೋಡಿದಳಾಪಳುಕಿಂದೆ ರಂಜಿಪೆ
ಕ್ಕಸರವನಾಂತು ರಾಜಿಸುವ ಯೊಗಿನಿವೋಲ್ ಬಳಿಕಾಪ್ರದೇಶದೊಳ್ ॥ ೯೩

ವ॥ ಮತ್ತಮದೊರ್ವಳ್ವೀರಭದ್ರನಂ ನೋಳ್ಪಲ್ಲಿ,

ಭಾಸುರಮಾಗಿ ಲೇಪಿಸಿದ ಚಂದನಮೆಯ್ಯೆ ವಿಭೂತಿ ಕಂಠದೊ
ಳ್ಪೂಸಿ ವಿರಾಜಿಸಿರ್ಪ ಪೊಸಗತ್ತುರಿಯೀ ಬಿಸಮಾಲಲಾಟದೊಳ್ ।
ಲೇಸೆನಿಸಿರ್ಪ ಕುಂಕುಮದ ಬೊಟ್ಟೆ ಧನಂಜಯನೇತ್ರಮಾಗೆ ಮ
ತ್ತಾಸತಿಯಂದು ಮೂರನೆಯ ಸಂಪದವಾಂತವೊಲಾಗಳೊಪ್ಪಿದಳ್ ॥ ೯೪

ವ॥ ಆಗಳ್,

ಧೀರನ ದಕ್ಷಾಧ್ವರಸಂ
ಹಾರನ ಕಾರುಣ್ಯಸಿಂಧುವೆಂದೆನಿಸಿರ್ಪಾ ।

ವೀರನ ಪದಸಂಪದವಂ
ತೋರೆಂದೋರಂತೆಯೊರ್ವಳಂ ಬೆಸಗೊಂಡಳ್ ॥ ೯೫

ತಲೆಯೊಳ್ತಾಳ್ದಿರ್ಪ್ಪವ ನಿ
ರ್ಮಳಲಿಂಗದಿನುಟ್ಟು ಕಣ್ಗೆ ಸೊಗಸುತ್ತಿರ್ಪ್ಪವ ।
ಪುಲಿದೊವಲೊಂದಿರ್ಪಾತಂ
ಕಲಿದಲವಂ ವೀರಭದ್ರನೀಕ್ಷಿಪುದೆಂದಳ್ ॥ ೯೬

ಮೃಡನಿಂದಂ ಪಂಚವೇಧ್ರಾಸುರನೆನಿಪ ಬಳಂ ಮಾವರಾಹಂಗೆ 1 ತೋರ್ಪಿ
ರಡಿಸಾಸಂದಾಳ್ದು ಮೂದೇವರಿನಳಿಯದ ಸಾಮರ್ಥ್ಯಮಂ ಪೆತ್ತು ಲೋಕ ।
ಕ್ಕೊಡೆಯಂ ತಾನಲ್ಲದಿಲ್ಲೆಂದುಳಿದಮರರನೆಲ್ಲಂ ಪಲಂ ನುಂಗಿರಲ್ದ
ಲ್ಕಡಿಪುತ್ತಂತಾತನಂ ದೇವತೆಗಳನುಳುಪಿರ್ದಾತನೀತಂ ಮೃಗಾಕ್ಷೀ ॥ ೯೭

ಹಿಂದೆ ಹಿರಣ್ಯಕಾಕ್ಷನೆನಿಸಿರ್ಪವನಂ ಪೊಣರ್ದಿಕ್ಕಿ ರಕ್ತಮಂ
ಕುಂದದೆ ಪೀರ್ದು ಮೂಜಗಮನಳ್ಳಿಸುತಿರ್ಪ ನೃಸಿಂಹನಂ ವಲಂ ।
ಕೊಂದು ಜಗತ್ತ್ರಯಕ್ಕೆ ಸೊಗಸಂ ಶರಭಾಕೃತಿಯಿಂದೊಡರ್ಚುತಾ
ನಂದದೊಳಿರ್ದವಂ ಬಳಿಕಮೀತನೆನುತ್ತವೆ ತೋರ್ದಳಾತನಂ ॥ ೯೮

ಆಯುವದಲ್ಪಮಾಗೆ ಮರೆವೊಕ್ಕ ಸುಧರ್ಮನನಾಪರಾಶರಂ
ಶ್ರೀಯುತರುದ್ರದಿಂದಮಭಿಷೇಕಮನಾಗಲೊಡರ್ಚುವನ್ನಮು ।
ನ್ಯಾಯದೊಳಾತನಂ ಪಿಡಿದ ಮೃತ್ಯುವನಂದುರೆ ಶಿಕ್ಷಿಸುತ್ತೆ ದೀ
ರ್ಘಾಯುವನಿತ್ತ ದೇವನುರೆ ತೋರ್ದಪನೀಕ್ಷಿಸು ಭೃಂಗಕುಂತಳೇ ॥ ೯೯

ಒಂದುದಿನಂ ಪ್ರದೋಷದೊಳುಮಾಪನನಾಶುಗಸೂನು ಪೂಜೆಗೆ
ಯ್ವಂದುರುಪೀಠಮಳ್ಗೆ ನಿಜಶೀರ್ಷಮನಳ್ಗಿಪೆನೆಂದು ಪೂಣ್ಬಿನಂ ।
ತಂದದನಿತ್ತು ವಾಯುಜನನೋವುತೆಯಾತನ ನೇಮವಂ ಮಹಾ
ನಂದವೆ ತೀರ್ಚಿದಪ್ರತಿಮನೀತನೊರಲ್ಪುರೆ ನೋಡು ಭಾಮಿನೀ ॥ ೧೦೦

ವರಜಮದಗ್ನಿಕಶ್ಯಪರಗಸ್ತ್ಯಮುನೀಶ್ವರನಾದಿಯಾದವ
ರ್ಗಿರದೆ ಸುರೇಂದ್ರಮುಖ್ಯಸುರಸಂತತಿಗಂ ಬಗೆದಂದು ಮೂರುಸೂ ।
ಳ್ತಿರಿದೆನಿಪಾಯುವಂ ಭಸಿತವಂ ತಳೆದಿತ್ತ ದಯಾಳುವೀರನಂ
ಸರಸಿಜನೇತ್ರೆ ನೋಡೆನುತೆ ತೋರಿಸುತಿರ್ದಳತಿಪ್ರಮೋದದಿಂ ॥ ೧೦೧

1 ತೋರ್ಪೀರಡಿ.

ಸುಳಿವಿದೆ ಶುದ್ಧಬ್ರಹ್ಮದ
ಪೊಳೆಪಿದೆ ಪರಮಾರ್ಥದಖಿಳಮುನಿಗಳ ಮನದೊಳ್ ।
ತೊಳಗುವ ದಿವ್ಯಜ್ಞಾನದ
ಬೆಳಗಿದೆ ನೋಡೆಂದು ತೋರ್ದರ್ಳಾಕೆಗೆ ಮುದದಿಂ ॥ ೧೦೨

ಮುತ್ತಿದೆ ಮುಕ್ತಿವಧೂಟಿಯು
ನೆತ್ತಿಯ ಮನದೀಪ್ಸಿತವನೊರಲ್ದೀವ ಮರದ ।
ಬಿತ್ತಿದೆ ತನುವಿಡಿದೊಪ್ಪುವ
ಚಿತ್ತಿದೆ ನೀನೀಕ್ಷಿಸೆಂದ ಪೊಗಳುತ್ತುಸಿರ್ದರ್ಳ್ ॥ ೧೦೩

ತನ್ನೆಂಟಕ್ಕರಮಂತುರ
ಮಂ 1 ನಾಲ್ಕೇಳಮದನೊರ್ವೆ ಜಪಿಸಲ್ಕಪವರ್ಗಂ ।
ದುನ್ನತಪದಮಂ ಕುಡುಪವ
ನಂ ನೀಂ ನೋಡೆಂದು ತೋರುತಿರ್ದರ್ಳ್ಮುದದಿಂ ॥ ೧೦೪

ವ॥ ಇಂತು ಪೇಳ್ವುದುಂ,

ಕಂಡೆನಿಂದುಕಲಾವತಂಸನನಪ್ರಮೇಯನನೀಶನಂ
ಕಂಡೆನಾನತದುಷ್ಕೃತಾಂಬುಧಿವಾಡಬಾನಳನಂ ಕರಂ ।
ಕಂಡೆನಗ್ನಿಸುಧಾಂಶುವಾರಿಜಮಿತ್ರಲೋಚನನಂ ವಲಂ
ಕಂಡೆನೀವರವೀರಭದ್ರನನೀಗಳಾಂ ಮೃಗಲೋಚನೇ ॥ ೧೦೫

ಕಂಡೆಂ ಕರುಣಾಕರನಂ
ಕಂಡೆಂ ಭಾಳೇಕ್ಷನಂ ಮಖಾರಾತಿಯನಾಂ ।
ಕಂಡೆಂ ವೀರೇಶ್ವರನಂ
ಕಂಡೀಗಳ್ಧನ್ಯಳಾದೆನೆಂದವಳುಸಿರ್ದರ್ಳ್ ॥ ೧೦೬

ವ॥ ಮತ್ತಮೊರ್ವಳ್ ದಕ್ಷನಂ ನೋಡಿ,

ಅಜಪುತ್ರನೆಂಬರೀತನ
ನಜಪುತ್ರನೆನಿಪ್ಪ ನಾಮಮೀಗಳಿವಂಗುರೆ ।
ನಿಜಮಾದತ್ತೆಂದೊರ್ವಂ
ಬುಜಲೋಚನೆಯುವನ ಮೊಗಮನೀಕ್ಷಿಸುತಿರ್ದರ್ಳ್ ॥ ೧೦೭

1 ನಾಲ್ಕೇಳ. . ನೊರ್ಕೆ

ಐಮೊಗನೊಳ್ಮೊಗದಿನೊಗೆದು
ದೀಮೊಗವೋ ಬಳಿಕದೊಂದು ಮೊಗವೋ ಪೇಳಿಂ ।
ದಾಮೇಷಾಸ್ಯನ ಮೊಗಮಂ
ಕಾಮಿನಿಯೊರ್ವಳೊಳಸಿರ್ದು ಪಳಿವುತ್ತಿರ್ದಳ್ ॥ ೧೦೮

ಇಂತು ನಿರೀಕ್ಷಿಪ ಸತಿಯು
ರ್ಗಂತು ಸೊಗಂಗರೆವುತ್ತಖಿಳಗಣಸಹಿತಾಗ ।
ಳ್ಕಂತುಮದಾರಾತಿಯು ಸೊಗ
ಸಾಂತರಮನೆಗಾಗಿ ಬಂದನಾವೀರೇಶಂ ॥ ೧೦೯

ವ॥ ಆಗಳಲ್ಲಿ ವೃಷಭನಿಂ ಪ್ರಾಗಣಕ್ಕವತರಿಸಿ ತನ್ನ ರಾಣಿಯಪ್ಪ ಭದ್ರಕಾಳಿಯು ಸಹಿತಂ ಪಾರ್ವತೀದೇವಿಯರ ವಿಲಾಸಿನಿಯರಪ್ಪನಂತರುದ್ರಕನ್ನಿಕೆಯರ್ನೀರಾಜಿಪ ನವರತ್ನದಾರತಿಗಳನಂಗೀಕರಿಸುತ್ತಖಿಳಮಹಾಮುನೀಶ್ವರರಾಶೀರ್ವಾದಂಗಳಂ ಸ್ವೀಕರಿಸುತ್ತಂ ಭವನರಮನೆಯಂ ಪೊಕ್ಕು ಮಹದಾಸ್ಥಾಯಿಕೆಯೊಳ್ವೇರೋಲಗಂಗೊಟ್ಟಿರ್ದ ಚತುರ್ದಶಭುವನಚಕ್ರವರ್ತಿಗೆ ಸರ್ವಬ್ರಹ್ಮಾಂಡಸಾರ್ವಭೌಮಂಗೆ ದಂಡಧರಗರ್ವಪರ್ವತವಜ್ರದಂಡಂಗೆ ಪುರತ್ರಯಕುಮುದಮಾರ್ತಾಂಡಂಗೆ ಜಲಂಧರವನದಾವಾನಳಂಗೆ ಕಾಮಾಂಧಕಾರಭಾಸ್ಕರಂಗೆ ಅಂಧಕಾಂಭೋನಿಧಿಕುಂಭಸಂಭವಂಗೆ ಕರಿದನುಜಮತ್ತೇಭಪಂಚಾನನಂಗೆ ಸಾಮಗಾನಪ್ರಿಯಂಗೆ ಸೋಮಾರ್ಧಜೂಟಂಗೆ ಸುಕೃತಸ್ವರೂಪಂಗೆ ಪಿನಾಕಚಾಪಂಗೆ ವಿಶ್ವಂಭರಾವರೂಥಂಗೆ ವಿಶ್ವನಾಥಂಗೆ ಚಿನ್ನರನ್ನದ ಪೂಗಳಿಂ ಪುಷ್ಪಾಂಜಲಿಯಂ ವಿರಚಿಸಿ ಸಾಷ್ಟಾಂಗಪ್ರಣತನಾಗುತ್ತವನತೋತ್ತಮಾಂಗನಾಗಿ ಕರಕಮಲಮಂ ಮುಗಿದು ತಾಂ ತಂದ ದೇವರ್ಕಳಾಯುಧಾಕಲ್ಪವಾಹನಂಗಳನೊಪ್ಪಿಸುತ್ತುಮವರ್ಗಳ್ಬಾಗಿಲೊಳಿರ್ದಪರೆಂದು ಬಿನ್ನವಿಸೆ ದರಹಸಿತಾನನನಾಗಿ ವಿಶ್ವನಾಥಂ ಬರವೇಳೆಂದು ನಿರವಿಸುತ್ತಿರ್ಪಿನಂ,

ನುಳ್ಗಿದ ಪಲ್ಗಳಿಂದೊಡೆದ ಮಂಡೆಗಳಿಂ ಮುರಿದಿರ್ದ ಕಾಲ್ಗಳಿಂ
ನೆಳ್ಗಿದ ಬಾಯ್ಗಳಿಂ ತರೆದ ಮೀಸೆಗಳಿಂ ಪೊರಪೊಣ್ಮಿದೆಲ್ಗಳಿಂ ।
ದಳ್ಗಿದ ಕಣ್ಗಳಿಂ ಕೊರೆದ ತೋಳ್ಗಳಿನಂಗದೊ[1] ಳೆಯ್ದೆ ತೋರ್ಪ ಬಾ
ಸುಳ್ಗಳಿನೆಯ್ದೆ ಬಂದೆರಗಿ ಕೀರ್ತಿಸುತಿರ್ದುದು ದೇವಸಂಕುಳಂ ॥ ೧೧೦

ಶ್ರೀಗೌರೀಪ್ರಿಯ ಶಾಶ್ವತಾಂಗ ವಿಲಸಚ್ಚಂದ್ರಾರ್ಧಚೂಡಾಮಣೀ
ವಾಗೀಶಾರ್ಚಿತ ವಿಷ್ಣುವಂದಿತಪದ ಬ್ರಂಹ್ಮಾಂಡಮಾಲಾಧರಾ ।
ನಾಗಾಲಂಕೃತ ಸರ್ವದೇವನಮಿತಶ್ರೀಪಾದಪಂಕೋದ್ಭವಾ
ರಾಗದ್ವೇಷವಿದೂರ ರಕ್ಷಿಸೆನುತಂದಾರ್ದತ್ತು ದೇವವ್ರಜಂ ॥ ೧೧೧

---

1 ಳಯ್ದ..ಬಾ.

ಮುಂದರಿಯದೆ ಮೂರ್ಖತೆಯಿಂ
ನೊಂದವರಂ ದುಃಖವಹ್ನಿಯಿಂದೆಲ್ಲಾಗಳ್ ।
ಬೆಂದವರಂ ರಕ್ಷಿಸು ಕೃಪೆ
ಯಿಂದಂ ಜಗದೇಕಬಂಧು ಗಂಗಾಜೂಟಾ ॥ ೧೧೨

ಪಶುಗಳ್ ನಾಪೆಲ್ಲಂ ಸಲೆ
ಪಶುಪತಿ ನೀಂ ಲೋಕಜನಕನೆಂದೆನಿಸಿರ್ಪೈ ।
ಶಿಶುಗಳ್ ನಾವದರಿಂ ರ
ಕ್ಷಿಸೆನುತೆ ಬಿನ್ನವಿಸುತಿರ್ದುದಾವಿಬುಧಕುಲಂ ॥ ೧೧೩

1 ದೋಷವಿರಹಿತರನುರೆ ಕೀ
ನಾಶಂ 2 ರಕ್ಷಿಪನದೊಂದು ಪೆರ್ಮೆಯೆನಿಪುದೇಂ ।
ದೋಷಿಗಳಂ 3 ರಕ್ಷಿಪ್ಪುದು
ಸಾಸಿಗರ ಸುಶೀಲಮದುವೆ ವೃಷಭಪತಾಕಾ ॥ ೧೧೪

ವ॥ ಇಂತು ದೇವತೆಗಳ್ಬಿನ್ನವಿಸುತಿರ್ಪನಮಾಗಳ್ ದಕ್ಷನೇಳ್ತಂದು ದಂಡಪ್ರಣತನಾಗಿ ಕರಕಮಲಮಂ ಮುಗಿದು ಬಿನ್ನಪಂಗೆಯ್ವುನದೆಂತೆಂದೊಡೆ,

ಏಪೊಳ್ತುಂ ನೀನಾಡಿಪ
ಪಾಪೆಗಳಾವೆಲ್ಲರುಂ ಸ್ವತಂತ್ರತೆ ನಮಗುಂ ।
ಟೇ ಪರಿಕಿಸಮರಗುರುವೇ
ತಾಪತ್ರಯದೂರ ವಿಶ್ವನಾಥಪ್ರಭುವೇ ॥ ೧೧೫

ನಿನ್ನೊಳ್ ದ್ವೇಷಂ ಬಲಿದುರೆ
ನಾಂ ನೆಗಳ್ದುರುಕರ್ಮಮಳ್ಗಿ ಪೋದತ್ತಾಗಳ್ ।
ನಿನ್ನಂ ಮರೆವೊಕ್ಕ ಬಳಿ
ಕ್ಕಂ ನಾಂ ಕರ್ಮಕ್ಕೆ ಕೇಡು ಬರ್ಕುಮೆ ದೇವಾ ॥ ೧೧೬

ವ॥ ಇಂತು ಬಿನ್ನವಿಸುತಿರ್ದ ದಕ್ಷನಂ ದೇವರ್ಕಳಂ ಕೃಪಾದೃಷ್ಟಿಯಿಂ ನಿರೀಕ್ಷಿಸಿ,

ಶತಮನ್ಯುವಿನುರುಫಲಮಂ
ಶತಮನ್ಯುನತಾಂಘ್ರಿ ಕರುಣದಿಂ ದಕ್ಷಂಗಿ ।

1 ದೋಷವಿಲ್ಲದರನುರೆ. 2 ರಕ್ಷಿಸುವನದೊಂದು, 3 ರಕ್ಷಿಸುವುದು.

ತ್ರುತಿಕೃಪೆಯಿಂದೆಲ್ಲಾ ದೇ
ವತೆಗಳನೀಕ್ಷಿಸಿ ಬಳಿಕ್ಕವರ್ಗಿಂತೆಂದಂ ॥ ೧೧೭

[1] ಹರ ಕೊಂದೊಡೆ ನಿಮ್ಮಂ ಕಾ
ಯ್ವರುಂಟೆ [2] ನೀವೀಗ ಭೀತಿಸರ್ವ್ವೇಡೆನುತುಂ ।
ಕರುಣದಿನೀಕ್ಷಿಸುತಾಶಂ
ಕರ [3] ನಂದವರ್ಗಧಿಕಕೃಪೆಯಿನಭಯಂಗೊಟ್ಟಂ ॥ ೧೧೮

[4] ಮಿತ್ರನೆನಿಪ್ಪಾಸೂರ್ಯನ
ನೇತ್ರಂ ಭಗನೆಂಬವಂಗದೆಲ್ಲಾಗಳ್ಮಿಗೆ ।
[5] ನೇತ್ರಮುದಪ್ಪುದೆನುತ್ತೆ ಸಿತ
ಗಾತ್ರಂ ಫಣಿಸೂತ್ರನುಸಿರ್ದನಾಗಳ್ಮುದದಿಂ ॥ ೧೧೯

[6] ಅಗಿಪಾ ವಸ್ತುಗಳ ಸವಿಸು
ವಿಗೆ ದಕ್ಷನ ಬಾಯೊಳರಿಯಲಾಪೂಷನೆನು ।
ತ್ತಗಜಾಪತಿ ಮುದದಿಂ ಕಿರು
ನಗೆಮೊಗದಿಂ ವರಮನಿತ್ತನಾತಂಗಾಗಳ್ ॥ ೧೨೦

ಉಳಿದಮರವ್ರಜಕೊಲ್ದಂ
ದಳಿದಪಯವಮುಂ ಬಳಿಕ್ಕವರ ವಾಹನಮುಂ ।
[7] ತೊಳಪಾಕಲ್ಪಸುಶಸ್ತ್ರಂ
ಗಳನಿತ್ತಂ ಹರ್ಷದಿಂದೆ ಬೋಳೆಯರೆರೆಯುಂ ॥ ೧೨೧

ಸಮರದೊಳೆ ಸತ್ತು ಪೋಗಿ
ರ್ದಮರವ್ರಜಕೆಲ್ಲಮಸುವನಿತ್ತಂ ಬಳಿಯಂ ।
ಸುಮನೋಬಾಣವಿನಾಶಂ
ಸುಮನಃಪತಿನತಪದಾಬ್ಜನತಿಕೃಪೆಯಿಂದಂ ॥ ೧೨೨

ವ॥ ಇಂತಿವೆಲ್ಲವಂ ಕೊಟ್ಟು ದೈವಾಧೀನದೆ ನೊಂದಿರೆನುತೆ ಸಂತವಿಸಿಯು ವರಂ ಬೀಳ್ಕೊಡುತ್ತಿರ್ಪಿನಂ,

---

1 ನಾಂ ಕೊಂದೊಡೆ 2 ಭೀತಿಸರ್ವ್ವೇಡಂದೆನುತಃಂ 3 ನಂದವರ್ಗೆ.. ಕೃಪೆಯಿನಭಯಂಗೊಟ್ಟಂ. 4 ಮಿತ್ರನೆಂದೆನಿಪ ಸೂರ್ಯನ. 5 ನೇತ್ರವಾದಪುವೆನುತೆ. 6 ಅಗಿಪವಸ್ತುಗಳ ಸವಿಯುಂ 7 ತೊಳಗುಪಾಕಲ್ಪಶಸ್ತ್ರಂ

ದೇವಂಗಂ ದೇವಿಯರ್ಗಂ
ದಾವೀರಂಗಂ 1 ಬಳಿಕ್ಕೆ ತಾಂ 2 ಪೊಡಮಡುತುಂ ।
3 ದೇವರ್ಕಳ್ಗಿಗೆ ತಂತ
ಮ್ಮಾವಾಸಕೆ ಪೋದರಂದನೇಕೋತ್ಸವದಿಂ ॥ ೧೨೩

ವ॥ ಇಂತು ದೇವರ್ಕಳ್ಗೆ ವರಂಗೊಟ್ಟು ಬೀಳ್ಕೊಟ್ಟ ಪರಮೇಶ್ವರನ ಕಾರುಣ್ಯದೆಸಕಮಂ ಕಂಡು ಚತುರಾನನಂ ಬಿನ್ನಪಂಗೆಯ್ವನದೆಂತೆಂದೊಡೆ,

ಗಾಡಿ ಮುಸುಳ್ದು ಬಂದು ಮರೆವೊಕ್ಕಮರಾಳಿ ಭವತ್ಪದಾಬ್ಜಮಂ
ಸೂಡಿ ಶಿರಸ್ಸಿನೊಳ್ತೊಲಗಿದುನ್ನತಿಯುಂ ಪಡೆವರ್ಸುಭಕ್ತಿಯೊಳ್ ।
ಕೂಡಿದವರ್ಗೆ ಮುನ್ನಳಿದ ಸಂಪದಮಾಕ್ಷಣಮೆಯ್ದೆ ಬಂದು ಕೈ
ಗೂಡದೆ ಮಾಣ್ಬುದೇ ತ್ರಿಭುವನಂಗಳೊಳಿಂದುಕಲಾವತಂಸನೇ ॥ ೧೨೪

ವ॥ ಇಂತು ಬಿನ್ನಪಂಗೆಯ್ದಬ್ಜಭವನಂ ಮನ್ನಿಸಿ ಕಾರುಣ್ಯಪಾರಾವಾರನೆನಿಪ್ಪ ಕಾಶೀಪುರಾಧೀಶ್ವರಂ ವೀರಭದ್ರನಂ ನೋಡಿ,

ಮೆಯ್ದುಡವುತ್ತೊಲವಿಂದಂ
ಬಾಯ್ದಂಬುಲಗೊಟ್ಟು ಪಿಡಿದು ರಂಜಿಪ ಮುವ್ವೊನ ।
ಗೆಯ್ದುವನಿತ್ತೊಲವಿಂದೀ
ರೆಯ್ದು 4 ಭುಜದಿನಾಗಳೇಳ್ಕರಿಸಿ ಪೆರ್ಚುತ್ತುಂ ॥ ೧೨೫

ತಾಂ ಪೊದೆದಿರ್ದಜಿನಾಂಬರ
ವಂ 5 ಧರಿಸಿದನಾಬಳಿಕ್ಕೆ ಗಳದೊಳ್ತಾಳ್ದನಿ ।
ಳಿಂಪಶಿರೋಮಾಲೆಯನುರೆ
ಪೆಂಪಿಂದಂ ಕೊರಲ್ಗೆ ಸಾರ್ಚಿದಂ ಮಖಹರನಾ ॥ ೧೨೬

ಎನ್ನಂ 6 ದಲ್ಬಜಿಪರ್ಗೆ ಕೇಳಿತರಜನ್ಮಕ್ಕೆಯ್ದೆ ಕೈಗೂಡುವಾ
ಚೆನ್ನಪ್ಪುನ್ನತಸಂಪದಂ ಸಕಲಸೌಭಾಗ್ಯೋತ್ಕರಂ ಧಾತ್ರಿಯೊಳ್ ।
ನಿನ್ನಂ ಮೆಚ್ಚಿಜಿಸುತ್ತಮಿರ್ಪವರ್ಗದಂದಾಜನ್ಮದೊಳ್ಸಾರ್ಗೆನು
ತ್ತುಂ ನಾಗಾಜಿನವಾಸನಂದು ವರವಂ ವೀರಂಗೆ ಕೊಟ್ಟಂ ವಲಂ ॥ ೧೨೭.

1 ಬಳಿಕೆಲ್ಲಾ. 2 ಪೊಡಮಡುತ. 3 ಲ್ಲಾದೇವತೆಗಳ್ಗಿಗೆ ತಂ.
4 ಭುಜದಿಂದೇಳ್ಕರಿಸಿ. 5 ದಹಿಸಿದಂಬಳಿಕ್ಕೆ.
6 ದಲ್ಬಜಿಪರ್ಗೊಂದಿತರಜನ್ಮಕ್ಕೆಯ್ದೆ.

ವ॥ ಇಂತು ವೀರಭದ್ರಂಗೆ ವರಂಗೊಟ್ಟು ದೇವಿಯು ದರಹಸಿತಾನನಮಂ ನೋಡುತ್ತೆ,

ಸಕಲರಭೀಷ್ಟಮಂ ಸಲಿಸುತಿರ್ಪವನಾಂ ಬಳಿಕೆನ್ನಭೀಷ್ಟದಾ
ಯಕಿಯೆನಿಸುತ್ತೆ ತೋರ್ಪ ವಧು ನೀಂ ಸಲೆ ನಿನ್ನ ಪೊದಳ್ದಭೀಷ್ಟಮಂ ।
ಸುಕರಮೆನಲ್ಕಡಂಗಿಯೊಸದಿತ್ತವನೀತನೆನುತ್ತಮಾಗಳಂ
ಬಿಕೆಗುರೆ ಪೇಳ್ದನಾತ್ರಿಪುರಸೂದನನಂದು ಮನೋನುರಾಗದಿಂ ॥ ೧೨೮

ವ॥ ಆಗಳ್ವೀರಭದ್ರಂ ಭದ್ರಕಾಳೀಸಹಿತಂ ಜಗನ್ಮಾತೆಯಪ್ಪ ಪಾರ್ವತಿಯ ಶ್ರೀಪಾದಕ್ಕೆ ದಂಡಪ್ರಣಾಮಂಗೆಯ್ದಿರ್ಪಿನಂ,

ಏಳೆನ್ನಾಪ್ತತನೂಜನೆ
ಏಳೆನ್ನಭಿಮತಮನಿತ್ತ ಕಲ್ಪದ್ರುಮವೇ ;
ಏಳೆನ್ನ ಕಾಮಧೇನುವೆ
ಏಳೇಳೆಂದಗತನೂಜೆ ನುಡಿವುತ್ತಾಗಳ್ ॥ ೧೨೯

ನಿನ್ನಯ್ಯನವೋಲ್ ಸಕಲಜ
ಗನ್ನುತನಾಗಿರ್ಪುದೆಂದು ಪರಸುತ್ತೆ ಕರಂ ।
ರನ್ನದ ಸೇಸೆಯನಿಟ್ಟಗ
ಕನ್ನಿಕೆ ಸಂತೋಷದಿಂದಮೊಪ್ಪುತ್ತಿರ್ದಳ್ ॥ ೧೩೦

ನಿಗಮಸ್ತುತ್ಯನ ವೀರಭದ್ರನ ವರಾಸ್ಯಾಂಭೋಜಮಂ ನೋಡುತುಂ
ಬಗೆವೆಚ್ಚುತ್ತೆ ಕಡಂಗಿ ಮುದ್ದಿಸುತೆ ಮುಂಡಾಡುತ್ತೆ ಮತ್ತಾತನಂ ।
ನಗರಾಜಾತ್ಮಜೆಗಂ ಸಮಸ್ತಗಣಕಂ ತಾಂ ತೋರಿ ಕೊಂಡಾಡಿ ಮೂ
ಜಗಮಂ ಪಾಲಿಸುತಿರ್ದನಲ್ಲಿ ಕೃಪೆಯಿಂ ಕಾಶೀಪುರಾಧೀಶ್ವರಂ ॥ ೧೩೧

ಗಜವಕ್ತ್ರಾಸ್ಯಾಬ್ಜಮಿತ್ರಂ ಪದನತಜನತಾನಂದವಾರಾಶಿಚಂದ್ರಂ
ದ್ವಿಜರಾಜಾರ್ಧಾಂಕಜೂಟಂ ತ್ರಿದಶಮಕುಟಮಾಣಿಕ್ಯಸಂಸ್ಪೃಷ್ಟಪಾದಂ ।
ಭುಜಗೇಂದ್ರಾಕಲ್ಪಭೂಷಂ ಗಿರಿಸುತೆಯೊರಸಂ ಪ್ರೇಮದಿಂದೊಪ್ಪುತಿರ್ದಂ
ನಿಜಭಕ್ತವ್ರಾತಮಂ ರಕ್ಷಿಸುತತಿಕೃಪೆಯಿಂ ಕಾಶಿಯೊಳ್ ವಿಶ್ವನಾಥಂ ॥ ೧೩೨

ವರಬುಧ 1 ಕವಿಗಳ ಮೇಳ
ಕ್ಕಿರದಾಶ್ರಯಮಪ್ಪ ಕೃತಿ ಪೊದಳ್ದೊಪ್ಪುವಿನಂ ।

---

1 ರವಿ.

ಧರೆ ಬೆಳೆಗುಂ ಮಳೆಗೊಳ್ಗುಂ
ಪರಿಣತರರಿವಿನೆಗಮಾವಗಂ ಸಮುಚಿತದಿಂ ‖ ೧೩೩

ಹರಭಕ್ತ್ಯಂಬುಧಿ ಮೇರೆದಪ್ಪುಗೆ 1 ಲಸಚ್ಛ್ರೀವೀರಶೈವಾಗಮೋ
ತ್ಕರಧರ್ಮಂ ಸಲೆ ಪೆರ್ಚಿ ತೋರ್ಕೆ ಸುಜನಾಭೀಷ್ಟಂಗಳೆಲ್ಲಾಗಡಂ ।
ದೊರೆಕೊಳ್ಗೊಪ್ಪುವ ವೀರಭದ್ರವಿಜಯಂ ಭೂಭಾಗದೊಳ್ ಸಂತತಂ
ಪರಸುತ್ತಿರ್ಕೆ ಮಹೇಶನಗ್ಗಳಿಕೆಯಾಚಂದ್ರಾರ್ಕತಾರಾಂಬರಂ ‖ ೧೩೪

ಮಾದೇವನ ಬಗೆವಂದಾ
ದ್ವಾದಶಲೀಲಾಸ್ಪದರೂಪವೀರನ ವಿಜಯು ।
2 ದ್ವಾದಶಸಂಖ್ಯಾಶ್ವಾಸಂ
ದ್ವಾದಶರವಿಗಳವೊಲೆಯ್ದೆ ಬೆಳಗುಗೆ ಜಗಮಂ ‖ ೧೩೫

ಬಿಸಿಲಿಂಗಳ್ಗದ ಗಾಳಿಯುಂಡಲೆಯದಿರ್ದಾಮೋದಮಂ ನಾಡೆಯು
ಣ್ಡಿಸೆಗಂ ಬೀರುವ ನೂತ್ನಮಾದ ವಿಲಸದ್ವಾಕ್ಪುಷ್ಪಮಂ ಭಕ್ತಿಯಿಂ ।
ಸಸಿಜೂಟಂ ವರವೀರಭದ್ರನಮಲಶ್ರೀಪಾದಪದ್ಮಕ್ಕೆ ಸಂ
ತಸದಿಂದರ್ಚಿಸಿದಂ ನೃಪೋತ್ತಮನೆನಿಪ್ಪಾವೀರಭದ್ರಾಹ್ವಯಂ ‖ ೧೩೬

ರೂಪಾಲಂಕಾರಭಾವಂ 3 ಮೃದುಪದವಿವಿಧನ್ಯಾಸಮಾರೀತಿನೀತಿ
ವ್ಯಾಪಿತ್ವಂ ಲಕ್ಷಣಂ ಬಿನ್ನಣಮತಿಚತುರಂ ತೋರ್ಪ ಸತ್ಕಾವ್ಯಮೆಂದಂ ।
ಬೀಪೆಣ್ಣಂ ಪೆತ್ತು ಸದ್ಭಕ್ತಿಯೆನಿಪ ಫಲದಾಪೇಕ್ಷೆಯಿಂ ವೀರಭದ್ರ
ಶ್ರೀಪಾದಕ್ಕರ್ಪಿಸುತ್ತಗ್ಗಳಿಕೆವಡೆದನಾವೀರಭದ್ರಕ್ಷಿತೀಶಂ ‖ ೧೩೭

ಈವೀರಭದ್ರವಿಜಯುಮ
ನಾವಂ ಬರೆವಂ ಸಮಂತು ಕೇಳ್ವಂ ಪೇಳ್ವಂ ।
ಶ್ರೀವೀರಭದ್ರಕೃಪೆಯಿಂ
ಕೈವಲ್ಯಾಂಗನೆಯ ಮೇಳದಿಂದೆಸೆದಿರ್ಪಂ ‖ ೧೩೮

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹಮೊಲ್ದು ಪು
ಟ್ಟಿದ ತಳಮಂತಿದೆಯ್ದೆ ವಿವಿಧಶ್ರುತಿಸಂಚಯುಜನ್ಮಭೂಮಿ ತಾ ।
ನಿದು ಪರಮಾರ್ಥಸಾರವಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆರೆದಿರ್ಪುದು ಭೂತಳಾಗ್ರದೊಳ್ ‖ ೧೩೯

---

1 ಲಸಚ್ಛ್ರೀ. . ಶೈವಾಗಮೋ.    2 ದ್ವಾದಶಾಶ್ವಾಸಮೀಗಂ.
3 ಮೃದುಪದವಿನ್ಯಾಸಮಾರೀತಿ,

ಮುಳಿಯಲಗೇನ್ದ್ರಜಾತೆ ತಲೆಯಿಂ ಸಲೆ ಪಿಂಗದ ಗಂಗೆಗಾಕ್ಷಣಂ
ಕಳವಳವೆಯ್ದ್ದ ಪುಟ್ಟಿತದನೀಕ್ಷಿಸುತಾಗಳುಮಾಂಪ್ರಿಗೊಳ್ವನಿಂ ।
ತುಳಿಲನೊಡರ್ಚದೊಲ್ದು ವೊಗದೊಳ್ಮೊಗವಿಕ್ಕಿತೆ ಸಂತವಿಟ್ಟು ಬಾಂ
ಬೊಳೆಗೊಲವಿತ್ತ ಜಾಣ ಸಲಪೀಜಗಮಂ ಗುರುವಿಶ್ವವಲ್ಲಭಾ ॥ ೧೪೦

ಗಿರಿಯ ಮಗಳ ಮುಡಿಯೊಳಮರ್ದ ಸುರಕುಜಪ್ರಸೂನದೊ
ಳ್ಬಿರೆದ ರಜಮನಿರದೆ ಸವಿದು ತಣಿದು ತನ್ನ ಲೀಲೆಯಿಂ ।
ಮೊರೆವ ಮಧುಪರವದ ಸವಿಗೆ ಕಿವಿಯನಿತ್ತು ಧಾತ್ರಿಯಂ
ಪೊರೆವ ಗರಳಗಳನ ಚರಣಕಮಲಮೀಗಭೀಷ್ಟಮಂ ॥ ೧೪೧

ಇದು ಸಮಸ್ತಬ್ರಹ್ಮಾಂಡಸಾರ್ವಭೌಮ ಸಕಲಸುರಮಕುಟಮಣಿವಿರಾಜಿತ
ಪಾದಪದ್ಮ ಶ್ರೀಕಾಶೀಪುರಾಧೀಶ್ವರ ವಿಶ್ವನಾಥಪದಪಂಕೇಜಮಕರಂದ
ಮಧುಕರಾಯಮಾಣ ಶ್ರೀಕಂಠವಂಶಾರ್ಣವಪೂರ್ಣಚಂದ್ರನೆನಿಪ
ಸತ್ಕವೀಶ್ವರ ವೀರಭದ್ರನೃಪಾಲನಿಂ ವಿರಚಿತಮಪ್ಪ ಶ್ರೀ
ವೀರಭದ್ರವಿಜಯ ಮಹಾಪ್ರಬಂಧದೊಳ್ ವಿಷ್ಣು
ಪರಾಭವದಕ್ಷಮಸ್ತಕಚ್ಛೇದನಸರ್ವದೇವತಾ
ವಿಜ್ಞಾಪನಾಕರ್ಣನತದ್ಬಂಧವಿಮೋಚನ
ಕಾಶೀಪುರಪ್ರವೇಶವಿಶ್ವೇಶ್ವರಪದ
ಸಂದರ್ಶನಸರ್ವದೇವತಾಪುನಃ
ಪ್ರಾಣದಾನವರಪ್ರದಾನ
ವರ್ಣನಂ ದ್ವಾದಶಾಶ್ವಾಸಂ
ಸಂಪೂರ್ಣಂ.

## ಕಠಿಣಪದಗಳ ಅರ್ಥ.

ಈ ಕೆಳಗೆ ಕೊಟ್ಟಿರುವ ಸಂಖ್ಯೆಗಳಲ್ಲಿ, ಮೊದಲನೆಯದು ಆಶ್ವಾಸವನ್ನೂ, ಎರಡನೆಯದು ಪದ್ಯವನ್ನೂ, 'ವ' ಎಂಬ ಅಕ್ಷರವು ವಚನವನ್ನೂ ಸೂಚಿಸುವುವು.)

ಅಗಪ್–ಕಂದಕ 2–21
ಅಗ್ಗಳ–ಶಕ್ತ 1–18
ಅಚ್ಚು–ಜೋಡಣೆ 7–26
ಅಚ್ಚುಳಿ–ಹಿಂಸೆ, ತೊಂದರೆ 1–61
ಅಡಪವಳ–ಎಲೆ ಅಡಿಕೆ ಚೀಲದವನು 2–47
ಅಡ್ಡಣ–ಗುರಾಣಿ 10–67
ಅಡ್ಡಾಯುಧ–ಖಡ್ಗ 5–33
ಅಣಸು–ಅಗ್ರ 3–58
ಅಣಿಯರ–ಅಧಿಕ, ಅತಿಶಯ 10–31
ಅನಿಮಿಷ–ಮೀನು, ದೇವತೆ 1–42
ಅಬ್ಬುದ–ರೋಗ 8–14
ಅಮರ್ಚು–ಸೇರು 1–3
ಅಜುರ್–ನಕ್ಷತ್ರ 10–60
ಅಲಗಣಸು–ಶಸ್ತ್ರ, ಕತ್ತಿಯ ಅಗ್ರ 3–59
ಅಲಂಪು–ಸೊಗಸು, ವಿಧವ 5–69
ಅಲರ್ವಚ್ಚ–ಪುಷ್ಪಾಭರಣ 3–57 ವ.
ಅವಗ್ರಹ–ಆನೆಯ ಹಣೆ 5–57 ವ.
ಅವಿ–ಆಡು 11–25
ಅಳಸು–ಸುರತಧ್ವನಿ 6–80
ಅಳುರ್–(ಅಳುರ್–ಆವರಣೆ) ಮುತ್ತಿಕೊಳ್ಳು 7–20
ಅಱಲ್–ದುಃಖ 1–20
ಅಱಿ–ನಾಶ, ದುಂಬಿ 1–49 ವ.
ಅಱ್ಕಮೆ–ಅಜೀರ್ಣ, ಅಜಿಮೆ 6–8
ಆಡುಂಬೊಲ–ಆಶ್ರಯಸ್ಥಾನ, ಆಟವಾಡುವ ಸ್ಥಳ 2–19
ಆರ್ಪು–ಶಕ್ತಿ 1–25
ಆಱಡಿ–ದುಂಬಿ, ಶತ್ರುತ್ವ 1–49 ವ.
ಆಱಿ–ಮಂಡಲ 5–5
ಇಂಗಳ–ಬೆಂಕಿ (ಸಂ. ಅಂಗಾರ) 7–56
ಉತ್ಕಳಿಕೆ–ವ್ಯಾಕುಲತೆ, ತರೆ 1–44
ಉಂತೆ–ಹೀಗೆ 1–21
ಉರದ–ಗಲಭೆಮಾಡುವ 10–28
ಉಲುಂಬಡೆ–(ಉಲ್ವ+ಉಂಬಡೆ) ದಹಿಸುವ ಮಾನ್ಯ 10–20
ಉಱುಗು (ಉಱಿಗೆ)–ಅನುರಾಗ, ಬೇಟ 6–94
ಎಕ್ಕೆಕ್ಕೆ–ಮೇಲೆಮೇಲೆ 6–53
ಎಡ್ಡ–ಮನೋಹರ 2–9
ಎಣವಕ್ಕಿ–ಚಕ್ರವಾಕ 3–58
ಎಲರ್ವಟ್ಟೆ–ಆಕಾಶ 9–72
ಎಲವ–ಪ್ರಕಾಶ, ಸೊಬಗು 1–4
ಏಗಂ–ನಿಶ್ಚಯ, ಅತಿಶಯ 1–46
ಒಚ್ಚರ–ಏಕಾವಳಿಸರ 9–63
ಒಚ್ಚರ್ಗೀರೆ–ಒಂದು ಬೊಗಸೆ 12–4
ಓಪರ್–ಪ್ರಿಯರು 1–34
ಕಂಕಾಳ–ಎಲುಬುಗಳ ಪಂಜರ 6–67
ಕಂಕೆಲ್ಲಿ–ಅಶೋಕದಮರ (ಸಂ, ಕಂಕೇಳಿ) 1.32
ಕಡವರ–ನಿಧಿ 9–51
ಕಡುಪು–ಪರಾಕ್ರಮ, ಅತಿಶಯ 11–75
ಕಡೆ–ರಂಗವಲಿ 9–39
ಕನಲ್ಕೆ–ಕೋಪ 10–31
ಕಪ್ಪರ–ಎಲುಬಿನ ಚಿಪ್ಪು (ಸಂ. ಕರ್ಪರ) 5–15
ಕಬ್ಬ–ಕಾವ್ಯ 1–19

ಕಮ್ಮಿರಲ್-ಸುಗಂಧಪುಷ್ಪ 3-38
ಕರಕ-ದಾಳಿಂಬದ ಮರ 1-52
,,-ಕಮಂಡಲ 5-5 ವ
ಕರ್ಮಂದಿ-ಸನ್ಯಾಸಿ 6-83
ಕಸ್ತಿ-ಹೋರಾಟ 7-67
ಕಳ-ಯುದ್ಧ ರಂಗ 6-68
ಕಾರ್-ಕಾಲುವೆ 7-16
ಕಾಲ್ಗೆಡು-ಹೆದರು 10-27
ಕಾವಣ-ಚಪ್ಪರ 1-63
ಕಾಳ್ಪುರ-ಕಾಡಿನಲ್ಲಿ ಹರಿಯುವ ಪ್ರವಾಹ 12-86
ಕುರುವಿಂಡ-ಕೆಂಪು 3-63
ಕುಳಿರ್-ಚಳಿ, ಹಿಮ (7-20) 3-63
ಕೆಲಚು-ಸಹಾಯ 11-82
ಕೈರಾಗ-ಹಸ್ತಲಾಘವ 3-19 ವ.
ಕೊಸಗು-ಬೆಟ್ಟದಾವರೆ 3-40
ಕೋಡು-ಶೈತ್ಯ 7-25
ಕೋವರಿ (ಕೌವರಿ)-ಸಂಭ್ರಮ 6-77
ಕೌಂಗು-ಅಡಿಕೆಯಮರ 1-52
ಕ್ರಮ-ಪಾದ 1-16
ಖಂಡೆಯ-ಖಡ್ಗ 11-71
ಗರ-ಗ್ರಹ 9-43
ಗಱೆ-ಕಡೆಗೋಲು 2-7
ಗಾಗುಳ (ಗಾಗಳ)-ಗಲಭೆ 6-121
ಗಾಂಪ-ಮೂಢ 2-23
ಗಾಡಿ-ಸೊಬಗು 1-33
ಗುಡಿ-ಪೂರ್ಣ 3-29
ಗುಣ್ಪು-ಆಳ, ಗಾಂಭೀರ್ಯ 2-9
ಗೆತ್ತು-ಧಾವಿಸಿ, (ಗಿಱ-ಪರಿಧಾವನೆ) 2-26
ಗೇಣ್-ಕತ್ತಿ 6-46
ಗೊಂದಣ-ಗುಂಪು 1-8
ಘಟ್ಟಿವಳ್ತಿ-ಗಂಧಮಾರುವವರು 2-32
ಘನರಸ-ನೀರು, ಘನವಾದ ನವ ರಸಗಳು 1-30
ಚಳಿ-ಶೀತ, ಬೇಸರಿಕೆ 1-49
ಚೂಣಿ-ಮುಂಭಾಗ 11-41
ಚೆಂಬಿಸಿಲ್-(ಕೆಚ್ಚನೆ+ಬಿಸಿಲ್) 2-26
ಚೆನ್ನಪೊಂಗ-ವೀರ 38-8

ಚೌವಟ-(ಸಂ. ಚತುಷ್ಪಥ) 2-34
ಜತ್ತಕ-ಮೋಸ 6-96
ಜನ್ನ-(ಸಂ. ಯಜ್ಞ) 1-8
ಜಸ-ಕೀರ್ತಿ (ಸಂ. ಯಶಸ್) 1-8
ಜಂಗುಳಿ-ಗುಂಪು 5-34
ಜಿನುಗು-ಗೊಣಗುಟ್ಟು 10-27
ಜೆರ್ಕು-ಉಗುರಿನಿಂದಾದ ಗಾಯ (ಜರ್ಕು-ನಖಕ್ಷತೆ) 6-79
ಟಿಕ್ಕೆ-ಕೃತ್ರಿಮವಾದ ರತ್ನ 7-56
ಡವಕೆ-ಪೀಕದಾನಿ, ಕಾಳಂಜಿ 10-46
ಡುಂಡುಭ-ಜಲವ್ಯಾಳ, ನೀರು ಹಾವು 10-19
ಥಾಳ-ಲಾವಣ್ಯ 6-130
ತಗರ್-ಗತಿಬಂಧನ 6-48
ತರವಾರಿ-ಖಡ್ಗ 3-59
ತಱುಬು (ತಱುಂಬು)-ನಿಲ್ಲಿಸು 5-42
ತಲ್ಲಟ-ನಡುಕ, ಭಯ 6-61
ತಿರುಪಾಯ್-ಸಿಂಜಿನಿಯ ಮಧ್ಯ 12-18
ತಿಱು-ಕೊಯ್ 3-45
ತಿಸೂಳಿ-ತ್ರಿಶೂಲಿ 1-45
ತುಱುಗರ್-ಸಮೂಹ 11-74
ತುಟಿಲ್ಗೆಯ್-ನಮಸ್ಕರಿಸು 1-3
ತುಟಿಲಾಳ್-ವೀರ 3-59
ತೆರ್ಪಱ್ (ತೆಪ್ಪಱು)-ಮೂರ್ಛೆತಿಳಿ (ತೆಪ್ಪಱು-ಚೇತನಕರಣೆ) 12-37
ತೆಲ್ಲಟ್ಟಿ-ಉಡ:ಗೊರೆ 6-75
ತೊದಳ್-ಸುಳ್ಳು 6-96
ತೋಟಿ-ಯುದ್ಧ 7-73
ತೋಲ್-ತೊಗಲು 4-27
ತೋಳ್-ಮರದ ಕೊಂಬೆ 11-74
ದುಬ್ಬಟಿ-ಸಂಕೋಲೆ 12-69
ದಾವತಿಗೊಳ್-ಶ್ರಮಹೊಂದು 7-62
ದೋಣಿ-ಬತ್ತಳಿಕೆ 9-10
ದೊಳ್ಳಾಸ-ಮೋಸ, 6-96
ನಾರಂಗ-ಕಿತ್ತಳೇಮರ 1-52
ನಿಕ್ಕುವಂ-ನಿಶ್ಚಯಂ 12-51
ನಿಬ್ಬಣ(ದಿಬ್ಬಣ)-ಯೌತಕ, ಮದುವೆಯಲ್ಲಿ ಕೊಟ್ಟ ಬಹುಮಾನ 10-68

ನೀಟಿ–ವೀರ, ಸುಂದರ 1–10
ನುಳ್ಗ–ಪುಡಿಮಾಡು 11–66
ನೆಗಡ್ತೆ–ಪ್ರಸಿದ್ಧಿ 1–24
ನೆತ್ತ–(ಸಂ. ನೇತ್ರ) 61–08
ನೆಱವೆಱೆ–ಪೂರ್ಣಚಂದ್ರ 3–47
ನೇವಳ–ಕಂಠಹಾರ 12–85
ಪಚಾರಿಸು–ತಿರಸ್ಕರಿಸು 11–76 ವ.
ಪಚ್ಚೆ–ಚಿಗುರು, ಪ್ರವಾಳ 3–56
ಪಟ್ಟವಣೆ–ಸಿಂಹಾಸನ 7–50
ಪಡಿಯರ–ಪ್ರತೀಹಾರ, ದ್ವಾರ ಪಾಲಕ 10–45
ಪಡೆವಳ್ಳಂ–ಸೇನಾಧಿಪತಿ 2–47
ಪತ್ತುಗೆ–ಹೊಂದಿಕೆ 6–15
ಪರಪು–ಹರಡುವಿಕೆ 7–53
ಪಱಪೆ–ದುಂಬಿ 4–40
ಪರಿಕಾಲ್–ಹರಿಯುವ ಕಾಲುವೆ 1–53
ಪರಿವೇಷ–ಗುಡಿಕಟ್ಟು 2–20
ಪಱೆ–ವಾದ್ಯ 6–80
ಪಸದನ–ಅಲಂಕಾರ(ಸಂ. ಪ್ರಸಾಧನ) 9–47
ಪಳಾಳ–ಟಕ್ಕು, ಮೋಸ 6–91
ಪಟಿ–ವಸ್ತ್ರವಿಶೇಷ; ದೂಷಣ 1–49 ವ.
ಪಟ್ಕವನೆ–ಶಯನಗೃಹ 6–67
ಪಾಕಲ್–(ಸಂ. ಪ್ರಾಕಾರ) 2–40
ಪಾರಿಯಪಟ್ಟೆ–ಮೇಲುಮುಸುಕು 6–30
ಪಾಟ್ಮನೆಹಾಟ–ತುಡುಗುಣಿನಾಯಿ 10–35
ಪಿಚುಮಂದ–ಬೇವಿನ ಗಿಡ 7–86
ಪಿಱ–ಮಾಂಸ 11–66
ಪುಚ್ಚಳಿ–ಕೇಡು 7–65
ಪುಯ್ಯಲಿಡು–ಮೊರೆಯಿಡು 3–56
ಪೂವಲಿಗೆಯ್–ರಂಗವಲಿಬಿಡು 3–8
ಪೇರಿಟ್ಟಿ–ದೊಡ್ಡದಾದ ಸಬಳವೆಂಬ ಆಯುಧ 11–70
ಪೈಸರಿಸು–ಜಾರು 11–75
ಪೊಚ್ಚಱಿ–ಸ್ಫುರಣ, ಪ್ರಕಾಶ (ಪೊಚ್ಚಱು–ಸ್ಫುರಣೆ) 9–3
ಪೊಚ್ಚಱುವಳಿ–ಜರತಾರಿ ಬಟ್ಟೆ 9–45
ಪೊಡರ್ಪು–ಶಕ್ತಿ, ಮಹಿಮೆ 1–3
ಪೊದಪ್–ಹುಟ್ಟು 11–75
ಪೊರೆಯೇಱು–ವೃದ್ಧಿಹೊಂದು 8–45
ಪೊಲ್ಲ (ಪೊಲ್ಲದು)–ಕೆಟ್ಟುದು 10–28
ಪೊಟಲ್–ಪಟ್ಟಣ 2–7
ಪೋರ್–ಮಲ್ಲಯುದ್ಧ 11–80
ಪಂಚಕ–ಯುದ್ಧರಂಗ 5–5
ಬಂಚ–(ಸಂ. ವಂಶ) 7–93
ಬಂಡು–ಮಕರಂದ 3–35
ಬರಿಕೆಯ್–ಆನೆಯ ಸೊಂಡಿಲು 4–45
ಬವರ–ಯುದ್ಧ 12–19
ಬಾಂಬೊಳೆ–ದೇವನದಿ 2–57
ಬಾವನ್ನ–ಶ್ರೀಗಂಧ 3–33
ಬಾಸವಿಡಿ–ಸಾಲಿಡು 9–17
ಬಿಂಗಾರ–ಹೂಜಿ, ಕಲಶ (ಸಂ. ಭೃಂಗಾರ) 9–33
ಬಿಗುರ್–ಭಯ 11–75
ಬಿಣ್ಪು–ಭಾರ 1–57
ಬಿದು–ಆನೆಯ ಕುಂಭಸ್ಥಳ 5–54
ಬಿನ್ನಣ–(ಸಂ. ವಿಜ್ಞಾನ) 10–4
ಬಿಯಳ–(ಸಂ. ವ್ಯಾಳ) 9–5
ಬಿರಯ–(ಸಂ. ವಿರಹ) 3–45
ಬೆಕ್ಕಸ–ಆಶ್ಚರ್ಯ 12–25
ಬೆಂಚೆ–ಅಲ್ಪಸರಸ್ಸು 7–56
ಬೆತೆ–(ಸಂ. ವ್ಯಥೆ) 10–27
ಬೆಳ್ಪಳಿ–ಚಾಂಚಲ್ಯ, ನೈರ್ಮಲ್ಯ 2–7
ಬೆಳ್ಳಡಿ–ಶಿವ, ಈಶ್ವರ 10–29
ಬೇಂಟ–ವಿಯೋಗ, ದುಃಖ 1–60
ಬೇರ–(ಸಂ. ವೈರ) 10–33
ಬೇವಸ–ಚಿಂತೆ, ವ್ಯಥೆ 6–53
ಬೇಳ್–ಹವಿಃಪ್ರದಾನ 10–18
,,–ಮೋಹ, ಭ್ರಾಂತಿ 1–49
ಬೈಕ–ಭಿಕ್ಷೆ 10–18
ಬೈತ್ರ–ಹಡಗು (ಸಂ. ವಹಿತ್ರ) 1156
ಬೋಜಗ–ಸರ್ಪ, ವಿಟ (ಸಂ. ಭುಜಂಗ) 2–37
ಭಂಗ–ನಾಶ, ಅಲೆ 2–10
ಮಕ್ಕಡ–ಕಪಿ (ಸಂ. ಮರ್ಕಟ) 12–51
ಮಗಳ್ಮಾಯ್–ಗಂಡನ ಕೂಡಿ ಬಿಡದಿರುವವಳು 12–58

ಮಡ–ಹಿಮ್ಮಡಿ 9–191
ಮಡಿ–ಸಾವು, ಒಗೆದ ಬಟ್ಟೆ 5–47
ಮನದನ್ನಳ್–ಪ್ರಿಯತಮೆ 1–32
ಮಯಣ– ಮನ್ಮಥ (ಸಂ, ಮದನ) 6–123
ಮರ್ವು–ಕತ್ತರಿ 1–18
ಮರುನ್ನದಿ–ದೇವನದಿ 2–12
ಮಸ್ಕರಿ–ಸನ್ಯಾಸಿ 6–92
ಮುಗಿಲ್–ಮಾಳಿಗೆಯ ತುದಿ 2–40
ಮುಚ್ಚುರ್–ಮೂರ್ಛೆ ಹೋಗು 12–37
ಮುಮ್ಮುರಿ–ಕಾದ ಮಳಲು 6–121
ಮುಯ್ಯೇರಡಿ–ಭ್ರಮರ 6–102
ಮೆಳ್ಪಡೆ(ಮೆಳ್ವಡೆ)–ಮರುಳ್ತನ 10–17
ಯಾದಃ–ನೀರು, ಹೊಳೆ 1–45
ರಿಗ್ಗವಣೆ–ಮೃದಂಗ 6–80
ರಿಂಗಣ–ಕುಣಿತ 11–80
ರೂಹ–(ಸಂ. ರೂಪ) 2–25
ಱೋಡಾಡು–ಹಾಸ್ಯಮಾಡು 6–41
ಲಕ್ಕಣ–(ಸಂ. ಲಕ್ಷಣ) 1–33
ಲಗ್ಗಿಗ–ಜ್ಯೋಯಿಸ 9–79
ಲತೆ–ಬಳ್ಳಿ, ಸ್ತ್ರೀ 1–51
ಲಾಕುಳ–ಯೋಗದಂಡ 10–55
ಲೌಡಿ–ಆಯುಧವಿಶೇಷ 5–33
ವಾಸಿ–ಶಪಥ 10–19
ವಿದ್ರುಮ–ವೃಕ್ಷ, ಹವಳ 1–42
ವಿಶಾಖ–ಕೊಂಬೆ, ಷಣ್ಮುಖ 1–5
ವೆಂಟಣಿಸು–ಆವರಿಸು 10–31
ಶಂಬರ–ನೀರು 3–16
ಶರ–ನೀರು, ಬಾಣ 1–449
ಶುಂಡಾಲ–ಆನೆ 5–4
ಸಕ್ಕದ–ಸಂಸ್ಕೃತ 1–22
ಸತಿ–ಸ್ತ್ರೀ, ಪಾರ್ವತಿ 1–51
ಸಬ್ಬಲಕ್ಕಣ–(ಸಂ. ಸರ್ವಲಕ್ಷಣ) 11–9
ಸಂಶ್ಲೇಷ–ಆಲಿಂಗನ 13–1
ಸುಟ್ಟು–ಅಂಗುಲಿದರ್ಶನ, (ಬೆರಳಿನಿಂದ ತೋರಿಸು) 5–77
ಸುಳಿ–(ಸಂ. ಶೂಲಿ) 1–43
ಸುರಗಿ–ಕತ್ತಿ (ಸಂ. ಛುರಿಕಾ) 11–71
ಸುಸಿಲ್–ಸುರತ 3–31
ಸೂರವಿತಾನ–ಸೂರ್ಯರ ಗುಂಪು, ಸೂರಿನ ಮೇಲ್ಕಟ್ಟು 2–24
ಹದಿಬದಿ–ಪತಿವ್ರತೆ 7–4
ಹಮ್ಮದ–ಮೂರ್ಛೆ 6–53
ಹರಿಬ–ವೈರ 5–14
ಹುರ–ಪಟ್ಟಣ (ಸಂ. ಪುರ) 2–25
ಹೆಟ್ಟುಗೆ–ಸಖಿ 3–54

---